# ಮುನ್ನುಡಿ



ಸ್ವಾತಂತ್ರ್ಯಪ್ರಾಪ್ತಿಯ ನಂತರ ಉಂಟಾದ ನಮ್ಮ ಹೊಸ ಶೈಕ್ಷಣಿಕ ಪರಿಸ್ಥಿತಿಯಲ್ಲಿ ಗ್ರಂಥಾಲಯ ಶಾಸ್ತ್ರವೇ ಮೊದಲಾದ ವಿಷಯಗಳ ಜ್ಞಾನವು ಆಯಾಯ ಪ್ರಾದೇಶಿಕ ಭಾಷೆಗಳಲ್ಲಿ ಜನಸಾಮಾನ್ಯರಿಗೆ ಆಗುವದು ಆವಶ್ಯವಿದೆ. ಕನ್ನಡವಂತೂ ಈ ತರದ ಸಾಹಿತ್ಯದಲ್ಲಿ ವಿಶೇಷ ಕೊರತೆಯುಳ್ಳದ್ದಾಗಿದೆ. ಈ ಕೊರತೆಯನ್ನು ಹಿಂಗಿಸಿ, ಪ್ರಕಾಶಕರು ತಮ್ಮ ಹೊಸ ಪುಸ್ತಕದಿಂದ ಕನ್ನಡ ನುಡಿಯ ಭಾಂಡಾರವನ್ನು ತುಂಬುತ್ತಿರುವದು ಶ್ರೇಯಸ್ಕರವಾಗಿದೆ. ಇದಕ್ಕಾಗಿ ಲೇಖರೀರ್ವರೂ ಅಭಿನಂದನಾರ್ಹರಾಗಿದ್ದಾರೆ.

ಗ್ರಂಥಗಳು ಮನೆಯಲ್ಲಿಯ ಹೂವಿನ ಕುಂಡದಂತೆ (Flower-pot) ಅಲಂಕಾರ ವಸ್ತುಗಳೆಂಬ ಭಾವನೆ ನಮ್ಮಲ್ಲಿಂದ ಸಂಪೂರ್ಣವಾಗಿ ಅಳಿಸಿ ಹೋಗಿಲ್ಲವೆಂದೇ ಹೇಳಬೇಕು. ಪುಸ್ತಕಗಳು ಉಪಯೋಗಾರ್ಥವಾಗಿವೆ; ಸಾಧ್ಯವಿದ್ದಷ್ಟು ಹೆಚ್ಚು ಓದುಗರು ಅವನ್ನುಪಯೋಗಿಸಬೇಕು; ಗ್ರಂಥಾಲಯವು ಒಂದು ಮ್ಯೂಸಿಯಂ (Museum) ಅಲ್ಲ! — ಎಂಬಿವೇ ಮಾತುಗಳನ್ನು ನಾವೆಲ್ಲ ಅರಿಯಬೇಕಾಗಿದೆ. ಈ ರೀತಿ ಪ್ರಸ್ತುತ ಪುಸ್ತಕವು ಕನ್ನಡ ಜನತೆಗೆ ಹಾಗೂ ಗ್ರಂಥಾಲಯಗಳಿಗೆ ಹೊಸ ಬೆಳಕನ್ನು ಈಯಲೆಂದು ಹಾರೈಸುವೆ.

ಗ್ರಂಥಾಲಯ ಶಾಸ್ತ್ರವು ಇತ್ತೀಚಿಗೆ ಬೆಳೆದು ಬಂದ ಶಾಸ್ತ್ರವೆಂದೇ ಹೇಳಬೇಕು. ಈ ದೃಷ್ಟಿಯಿಂದ ಅದು ವರ್ಧಿಸುತ್ತಿರುವ ಶಾಸ್ತ್ರವಾಗಿದೆ. ಅದು ಬೆಳೆಯುತ್ತ ಹೋದಂತೆಲ್ಲ, ಕನ್ನಡದಲ್ಲಿ ಇನ್ನೂ ಅನೇಕ ಪುಸ್ತಕಗಳು ಈ ಶಾಸ್ತ್ರದ ಬಗ್ಗೆ ಪ್ರಸಿದ್ಧವಾಗುತ್ತ ಹೋಗಲೆಂದು ಆಶಿಸುವೆ.

ಕರ್ನಾಟಕ ಲೋಕಮಾನ್ಯ ಟಿಳಕ ಟ್ರಸ್ಟದವರು ಈ ಗ್ರಂಥ ಪ್ರಕಾಶನಕ್ಕೆ ೫೦೦ ರೂಪಾಯಿಗಳ ಧನಸಹಾಯ ಮಾಡಿದುದಕ್ಕೆ, ನಾವೆಲ್ಲ ಅವರಿಗೆ ಕೃತಜ್ಞರಾಗಿದ್ದೇವೆ.

ಕೌನ್ಸಿಲ್ ಭವನ
ಮುಂಬಯಿ
೧೨ನೆಯ ಮಾರ್ಚ ೧೯೫೪

ರಾ. ಶ್ರೀ. ಹುಕ್ಕೇರಿಕರ

# ಪ್ರಕಾಶಕರ ಅರಿಕೆ

ಮುಂಬಯಿ ಸರಕಾರವು ಕಾಪಿರೈಟ್ ಗ್ರಂಥಾಲಯ ಮತ್ತು ಪ್ರಾದೇಶಿಕ ವಾಚನಾಲಯಗಳನ್ನು ಸ್ಥಾಪಿಸಿದಂದಿನಿಂದ ವಾಚನಾಲಯಗಳ ಸ್ಥಾನ-ಮಾನ-ಅಗತ್ಯಗಳು ಬೆಳೆಯುತ್ತಲಿವೆ. ಇದನ್ನರಿತೇ ಕರ್ನಾಟಕ ಗ್ರಂಥಾಲಯದ ನೇತೃತ್ವದಲ್ಲಿ ವಾಚನಾಲಯ ಮತ್ತು ಗ್ರಂಥಾಲಯಗಳ ಸಂಘವೊಂದು ಸ್ಥಾಪಿಸಲ್ಪಟ್ಟಿತಲ್ಲದೆ ವಾಚನಾಲಯ ಸಮ್ಮೇಳನಗಳೂ ಕಾಲ ಕಾಲಕ್ಕೆ ಕೂಡತೊಡಗಿದುವು.

ಇಂದು ಒಂದೆಡೆ ಜನತೆಗೆ ಸಾಕ್ಷರತೆಯ ಲಾಭ ದೊರೆತು ಓದುವುದು ಶಕ್ಯ ಮತ್ತು ಇಷ್ಟವೆನ್ನಿಸಿದರೆ, ಇನ್ನೊಂದೆಡೆ ಪ್ರಜಾಪ್ರಭುತ್ವದ ಸಾಮಾಜಿಕ ಜೀವನದ ಸುರಕ್ಷತೆಗಾಗಿ ನಾಗರಿಕರಿಗೆ ಓದಲು ತಕ್ಕ ಗ್ರಂಥಗಳನ್ನು ಒದಗಿಸ ಬೇಕಾಗಿದೆ. ಓದುವುದಕ್ಕೆ ಅನುಕೂಲತೆಯನ್ನುಂಟು ಮಾಡುವುದು, ಓದುಗ ರನ್ನು ಹೆಚ್ಚೆಚ್ಚಾಗಿ ಆಕರ್ಷಿಸುವುದು, ಓದುಗರಿಗೆ ತಕ್ಕ ಸಲಹೆಗಳನ್ನು ನೀಡುವುದು, ಪ್ರತಿಯೊಬ್ಬನ ಜ್ಞಾನಪಿಪಾಸೆಯನ್ನು ತೃಪ್ತಿಗೊಳಿಸುವುದು— ಹೀಗೆ ಇಂದು ವಾಚನಾಲಯಗಳ ಕಾರ್ಯವು ಒಂದು ಶಾಸ್ತ್ರೋಕ್ತ ಹೊಣೆ ಯಾಗಿದೆ. ಆ ಶಾಸ್ತ್ರವನ್ನೂ ಆ ಹೊಣೆಯನ್ನೂ ಅರಿತ ಶ್ರೀಯುತರಾದ ಎಚ್. ಎಸ್. ಪಾಟೀಲ ಮತ್ತು ಎಸ್. ಕೆ. ಹಾವನೂರ (ಐರಣಿ) ಅವರು ಅಭ್ಯಾಸಕ್ಕೆ ಅನುಕೂಲವಾಗುವಂತೆ ಈ ಗ್ರಂಥವನ್ನು ಬರೆದುಕೊಟ್ಟದ್ದಕ್ಕಾಗಿ ಕ. ಗ್ರಂ. ಸಂ. ವು ಅವರಿಬ್ಬರಿಗೂ ಅತ್ಯಂತ ಋಣಿಯಾಗಿದೆ. ಕನ್ನಡಕ್ಕೆ ಈ ವಿಷಯವನ್ನು ಮೊದಲು ಪ್ರಸ್ತಾಪಿಸಿದ ಈ ಮಹನೀಯರಿಗೆ ತಕ್ಕ ಮನ್ನಣೆ ಯನ್ನು ಕೊಡುವ ಪರಿಸ್ಥಿತಿಯಲ್ಲಿಲ್ಲದ ಕ. ಗ್ರಂ. ಸಂ. ವು ಎಲ್ಲ ಜಿಜ್ಞಾಸುಗಳ ಪರವಾಗಿ ವತಿಯಿಂದ ಅವರನ್ನು ಅಭಿನಂದಿಸಿ ತೃಪ್ತಿಪಡೆಯಬೇಕಾಗಿದೆ. ಮತ್ತು ಪುಸ್ತಕ ಪ್ರಕಟನೆ ಎರಡು ವರ್ಷ ಮುಂದೆ ಹೋದದ್ದಕ್ಕಾಗಿ ನಾವು ಲೇಖಕರ ಮತ್ತು ಓದುಗರ ಕ್ಷಮೆಯನ್ನೂ ಕೋರಬೇಕಾಗಿದೆ. ಅದರಂತೆಯೇ ಗ್ರಂಥದ ಪ್ರಕಟನೆಗೆ ಮುಕ್ತಹಸ್ತವಾಗಿ ಸಹಾ[illegible]ತಿದ್ದಕ್ಕೆ ಲೋ. ಟಿ. ಟ್ರಸ್ಟ ದವರಿಗೂ ಪ್ರಕಾಶಕರ[illegible]

ಬೆ[illegible]ಡಾರಿಗರಿಗೆ ಈ ಗ್ರಂಥವು ಉಪಯು[illegible]ನಾವು ತಿಳಿಯುತ್ತೇವೆ.



[illegible]ಂತೇಶ ಕಮಲಾಪೂರ

# ಪರಿವಿಡಿ



## ಭಾಗ : ೧


೧. ಗ್ರಂಥಾಲಯ .... .... .... ೧
೨. ಇತಿಹಾಸ .... .... .... ೨೩
೩. ಆಂದೋಲನ .... .... .... ೪೯
೪. ಜ್ಞಾನದಾನ .... .... .... ೭೭
೫. ವಂಶಾವಳಿ .... .... .... ೧೦೩
೬. ಭಾಂಡಾರಿಗ .... .... .... ೧೩೦


## ಭಾಗ : ೨


೧. ಸೂತ್ರಪಂಚಕ .... .... .... ೧೫೯
೨. ಸಂಘಟನೆ .... .... .... ೧೮೧
೩. ಆಡಳಿತ .... .... .... ೧೯೩
೪. ವರ್ಗೀಕರಣ .... .... .... ೨೩೨
೫. ಸೂಚೀಕರಣ .... .... .... ೨೬೭
೬. ಸಂದರ್ಭಸೇವೆ .... .... .... ೨೯೪
ಪಾರಿಭಾಷಿಕ ಪದಗಳು .... .... .... ೩೨೧
ಆಕಾರಾದಿ .... .... .... ೩೨೫

# ಒಪ್ಪೋಲೆ



| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೩೬ | ೧೯ | ಬಳ್ಳಿಗಾಲಿ | ಬಳ್ಳಿಗಾವಿ |
| ೫೬ | ೧೭ | ಸ್ಥಾಪಿಸುವರು | ಸ್ಥಾಪಿಸುವದು |
| ೬೩ | ೫ | ಅಮೇರಿಕನ್ | |
| ೧೭೮ | ೨೧ | ಅಪ್ಪಣೆ | ಅಟ್ಟಣೆ |
| ೧೯೯ | ೪ | ಉಪಸ್ಕಾರ | ಉಪಸ್ಕರ |
| ೨೦೬ | ಚೌಕದ ಮೇಲ್ಗಡೆ | — | ಆರೋಹಣ ದಾಖಲೆ |
| ೨೨೫ | ,, ,, | — | ದಿನಾಂಕ.... |
| ೨೪೩ | ೫ | ೮೯೧–೮೭೪ | ೮೯೧.೮೧೪ |
| ೨೪೬ | ಕೊನೆಯ ಸಾಲು | ಮೂರನೆಯಾವೃತ್ತಿ | ನಾಲ್ಕನೆಯಾವೃತ್ತಿ |
| ೨೫೬ | ,, ,, | (೫) ದ್ವಿಬಿಂದುಚಿಹ್ನ | (೫) ':' ದ್ವಿಬಿಂದುಚಿಹ್ನೆ |
| ೨೬೦ | ,, ,, | ವಿಜ್ಞಾನ (A) | ವಿಜ್ಞಾನ |
| ೨೬೪ | ೧೧ | Q=ಕಂ | a=ಕಂ |
| ೨೬೬ | ೧೩ | Ai=ಕ+ಅ | AI=ಕ+ಅ |

# ೧. ಗ್ರಂಥಾಲಯ



ಪ್ರಪಂಚದಲ್ಲಿ ಆದಿಕಾಲದಿಂದಲೂ ಗ್ರಂಥಾಲಯಗಳು ಅಸ್ತಿತ್ವದಲ್ಲಿದ್ದವು. ಇಜಿಪ್ತ, ಚೀನ, ಗ್ರೀಸ, ರೋಮ, ಭಾರತ ಮುಂತಾದ ರಾಷ್ಟ್ರಗಳ ಐತಿಹಾಸಿಕ ಮತ್ತು ಪ್ರಾಗೈತಿಹಾಸಿಕ ಕಾಲದ ಕತೆಯನ್ನು ಈ ದೃಷ್ಟಿಯಿಂದ ಪರಿಶೀಲಿಸಿದರೆ ನಮಗೆ ಅನೇಕ ಪ್ರೌಢ, ಶಾಸ್ತ್ರಬದ್ಧ ಮತ್ತು ವಿಶಾಲ ಗ್ರಂಥಾಲಯಗಳು ಇದ್ದುದು ತಿಳಿದುಬರುತ್ತದೆ. ಆದರೆ ಅದೆಲ್ಲ ಈಗ ಹಿಂದಿನ ಮಾತು; ಗತ ವೈಭವ. ಗತವೈಭವವು ಕೇವಲ ನೆನಸಿಕೊಳ್ಳುವದಕ್ಕೆ ಎಷ್ಟು ಅಪ್ರಯೋಜಕ ಎನಿಸುವದೋ ಅಷ್ಟೇ ತದ್ವಿರುದ್ಧವಾಗಿ ಈಗಿನ ಕಾಲದಲ್ಲಿ ನಮ್ಮನ್ನು ಕಾರ್ಯ ಪ್ರವೃತ್ತರನ್ನಾಗಿ ಮಾಡಲಿಕ್ಕೆ, ನಮ್ಮಲ್ಲಿ ಅಭಿಮಾನವನ್ನು ತುಂಬಿ, ಉತ್ಸಾಹ ವನ್ನು ಕದಡಿ ಚಟುವಟಿಕೆಯಲ್ಲಿ ಪರಿಣಮಿಸುವಂತೆ ಸಹಾಯ ಮಾಡ ಬಹುದು; ಮಾಡಬೇಕು. ಚರಿತ್ರೆಯ ಉದ್ದೇಶವು ಅದೇ ಆಗಿರುತ್ತದೆ. ನಮ್ಮ ಚಾರಿತ್ರ್ಯವನ್ನು ತಿಳಿದುಕೊಂಡು, ತಿದ್ದಿಕೊಂಡು, ಶುಚಿಗೊಳಿಸುವದೇ ಚರಿತ್ರ ಜ್ಞಾನದ ಮೂಲ ವಿಚಾರವಾಗಿರುತ್ತದೆ. ಆದರೂ ಯಾಂತ್ರಿಕವಾಗಿ ಬೇರೆ ಯವರೂ ಇತಿಹಾಸವನ್ನು ಓದುತ್ತಾರೆ, ಬರೆಯುತ್ತಾರೆ; ಇತಿಹಾಸವನ್ನು ಅರಿ ಯುತ್ತಾರೆ; ಇಂದಿನ ಇತಿಹಾಸವನ್ನು ತಿಳಿಯುತ್ತಾರೆ ಎಂದು ನಾವೂ ಅನುಕ ರಣ ಮಾಡುತ್ತೇವೆ. ಆದರೆ ಅನುಕರಣವು ಅಂಧಾನುಕರಣವಾಗಿಯೆ ಉಳಿದು, ಜನರು ಅಂಧರಾಗಿಯೇ ಅಳಿಯುವರು. ಅನುಕರಣವು ಸ್ವತಂತ್ರ ಜೀವನದ ಸೋಪಾನ; ಅದೊಂದು ವೈಯಕ್ತಿಕ ಅಸ್ತಿತ್ವವನ್ನು ಹುಟ್ಟಿಸಿಕೊಳ್ಳಲಿಕ್ಕೆ ಮೊದಲ ಮೆಟ್ಟಲು ಎಂಬುದನ್ನು ನಾವು ಮರೆಯುತ್ತೇವೆ. ಅಂತೆಯೆ ಇತಿ ಹಾಸವನ್ನು ತಿಳಿದುಕೊಳ್ಳುವ ಕಾರ್ಯ ಇಂದಿನ ನಮ್ಮ ಬಾಳನ್ನು ಉನ್ನತಿ ಗೊಳಿಸುವ ದೃಷ್ಟಿಯಿಂದ ಮಾತ್ರ ಆಗಬೇಕಾದುದು ಅಗತ್ಯವಾಗಿದೆ. ಅದ ರಂತೆಯೆ ಗತವೈಭವವನ್ನು ಮತ್ತೊಮ್ಮೆ ಕಾಣುವದು, ಕೇವಲ ಶಬ್ದಚಿತ್ರ ಗಳಲ್ಲಿಯೆ ಆದರೂ ಅಡ್ಡಿಯಿಲ್ಲ—ಅದನ್ನು ಇನ್ನೊಮ್ಮೆ ರಿಯುವದು, ನಮ್ಮ ಈಗಿನ ಬದುಕಿಗೆ ಆವಶ್ಯಕವಾಗಿದೆ; ಪ್ರೇರಕವೆನಿಸುತ್ತದೆ.

ಅಷ್ಟು ಪ್ರಾಚೀನ ಕಾಲದ ಮಾತನ್ನು ನಾವು ಬಿಟ್ಟುಬಿಡೋಣ. ಈಗಿನ ಪ್ರಸಂಗದಲ್ಲಿ ನಾವು ಯೋಚಿಸಿದರೂ ಕೂಡ ಆಧುನಿಕ ರೀತಿಯಿಂದ, ಅದ್ಯತನ ದೃಷ್ಟಿಯಿಂದ, ಗ್ರಂಥಭಂಡಾರಗಳನ್ನು ಸ್ಥಾಪಿಸಿ, ನಡೆಯಿಸಿಕೊಂಡು ಬಂದು, ಯುರೋಪ–ಅಮೇರಿಕೆಗಳಂತೆಯೆ ಭಾರತದಲ್ಲಿಯೂ ನೂರಾರು ವರ್ಷಗಳು ಸಂದು ಹೋಗಿವೆ. ಆಶ್ಚರ್ಯವೆನಿಸಬಹುದು. ನೂರು ವರ್ಷದ ವೈಶಿಷ್ಟ್ಯ-ವ್ಯಕ್ತಿತ್ವ-ಆಯುಷ್ಯ-ಅನುಭವಗಳಿದ್ದರೂ ನಮ್ಮ ಗ್ರಂಥಭಂಡಾರಗಳು ಇನ್ನೂ ಶೈಶವಾವಸ್ಥೆಯಲ್ಲಿಯೆ ಇರುತ್ತವಲ್ಲ !

ಇಂತಹ ಸ್ಥಗಿತ ವಾತಾವರಣವು ಪ್ರಾಪ್ತವಾಗಲಿಕ್ಕೆ ಕಾರಣಗಳುಂಟು. ಭಾರತದಲ್ಲಿಯೆ ಆಗಲಿ, ಕನ್ನಡನಾಡಿನಲ್ಲಿಯೆ ಆಗಲಿ ಆಗಿನ ಸ್ಥಿತಿಗತಿಗಳನ್ನು ಅರಿತುಕೊಂಡು, ಅವುಗಳಿಗೆ ಅನುಗುಣವಾಗುವಂತೆ ಗ್ರಂಥಾಲಯಗಳನ್ನು ಸ್ಥಾಪಿಸಿಕೊಂಡಿದ್ದರೆ, ಅವು ತಮ್ಮ ಕಾರ್ಯದಲ್ಲಿ ಸಾರ್ಥಕತೆಯನ್ನು ಪಡೆಯುತ್ತಿದ್ದವೊ ಏನೊ! ಅದೂ ಅಲ್ಲದೆ ಇತ್ತ ಅಂದಿನ ಸ್ಥಿತಿಯಲ್ಲಿ, ಆಗ್ಗೆ ಉಪಲಬ್ಧವಾಗಿದ್ದ ಮರ್ಯಾದಿತ ಕ್ಷೇತ್ರದಲ್ಲಿ ಆಗಿನ ಭಂಡಾರಗಳು ಸಾಕಷ್ಟು ಉಪಯುಕ್ತವಾದ ಕಾರ್ಯವನ್ನು ಮಾಡಲಿಕ್ಕೆ ಸಮರ್ಥವಾದುವು ಎಂಬ ಮಾತನ್ನು ನಾವು ತಿಳಿದುಕೊಂಡು ಒಪ್ಪಬೇಕಾಗುವದು. ಅಂತೆಯೆ ಅಂತಹ ಗ್ರಂಥಭಂಡಾರಗಳನ್ನು ನಾವು ಇಂದಿನಂತಹ ಉದ್ದೇಶಗಳನ್ನು ಸಾಧಿಸಲಿಲ್ಲ ಎಂದು ದೂಷಿಸಲೆಳಿಸಿದರೆ ಅದು ತಪ್ಪಾಗುವದು. ನೂರಾರು ವರ್ಷಗಳಿಂದ ಭಾರತದ ನಗರಗಳಲ್ಲಿ ನಡೆಯುತ್ತಿರುವ ಸಾರ್ವಜನಿಕ ವಾಚನಾಲಯಗಳಾಗಲಿ, ಪಟ್ಟಣಗಳಲ್ಲಿ ಕಾಣುವ ನೇಟಿವ್ಹ ಜನರಲ್ ಗ್ರಂಥಾಲಯ ಮೊದಲಾದ ಸಂಸ್ಥೆಗಳೆ ಆಗಲಿ ಭಾರತದ ಆಗಿನ ಆದರ್ಶ, ಆಗಿನ ಸಾಧನ ಮತ್ತು ಆಗಿನ ಪರಿಸ್ಥಿತಿ ಇವುಗಳಿಗೆ ಅಂತರ್ಗತವಾಗಿ ಮುಂದುವರಿದವು ಎಂಬುದನ್ನು ಇಲ್ಲಿ ಹೇಳುವದು ಅಗತ್ಯವಾಗಿದೆ. ಅಂತಹ ಸಂಸ್ಥೆಗಳನ್ನು ನಾವು ಇಂದಿನ ಮಾನದಂಡದಿಂದ ಅಳೆಯಹೋದರೆ ಮತ್ತು ತಿಳಿಯಹೋದರೆ, ಅದರಲ್ಲಿ ಕಂಡುಬರುವ ಕುಂದುಕೊರತೆಗಳಿಗೆ ಆ ಗ್ರಂಥಾಲಯಗಳು ಕಾರಣವಾಗಿರದೆ ನಮ್ಮ ದೃಷ್ಟಿದೋಷ ಎಂಬುದು ಮನವರಿಕೆಯಾಗುವದು. ಆದರೂ ಇನ್ನೂ ಒಂದು ಮಾತನ್ನು ನಾವು ಇಲ್ಲಿ ನೆನೆದುಕೊಳ್ಳುವದು ಸಹಾಯಕವಾಗಬಹುದು.

ಯಾವುದೊಂದು ಸಂಸ್ಥೆಯನ್ನು, ಅದರಲ್ಲಿಯೂ ಸಾರ್ವಜನಿಕ ಪ್ರಯೋಜನದ ಸಂಸ್ಥೆಯನ್ನು ನಿರ್ಮಿಸಿಕೊಳ್ಳುವ ಮೊದಲು ಅದಕ್ಕೆ ಮೂಲಭೂತವಾದ ಕೆಲವು ವಿಚಾರಗಳನ್ನು, ಕೆಲವು ಉದ್ದೇಶಗಳನ್ನು, ಇಂತಹದೊಂದು ಗುರಿಯೆಂಬುದನ್ನು ಇಟ್ಟುಕೊಳ್ಳುವದು ಸರ್ವಸಾಮಾನ್ಯವಾದ ಪದ್ಧತಿಯಲ್ಲವೆ ? ಆ ದೃಷ್ಟಿಯಿಂದ ಯೋಚಿಸಿದಾಗ, ಮೇಲೆ ವಿವರಿಸಿದ ನಮ್ಮ ಸದ್ಯಃಕಾಲದ ಗ್ರಂಥಭಂಡಾರಗಳು ತಕ್ಕ ಆದರ್ಶದೊಂದಿಗೆ ಮಾತ್ರ ಆರಂಭವಾಗಿದ್ದವು ಎಂಬ ಮಾತು ನಿಸ್ಸಂಧಿಗ್ಧವಾದುದು. ಆದರೆ ಆದರ್ಶ–ಉದ್ದೇಶಗಳು ಎಂತಹವೆ ಆಗಿರಲಿ, ಆಗ್ಗೆ ಆರಂಭವಾದ ಭಂಡಾರಗಳಲ್ಲಿ ಹೆಚ್ಚಾಗಿ ಪಾಶ್ಚಾತ್ಯರಾಷ್ಟ್ರಗಳ ಪದಾನುಕರಣವೆ ಇದ್ದಿತು ಎಂಬ ವಿಷಯ ಸ್ವಯಂ ಸ್ಪಷ್ಟವಾದುದು. ಪರಕೀಯ ಆಡಳಿತೆಯಿದ್ದ ಭಾರತದಲ್ಲಿ ಅನುಕರಣ ಬುದ್ಧಿಯಿಂದ ಹುಟ್ಟಿದ ಸಂಸ್ಥೆಗಳು ಈ ಭಂಡಾರಗಳಾಗಿದ್ದರೂ, ಅವು ಆ ಅನುಕರಣದ ಸ್ಥಿತಿಯನ್ನು ದಾಟಿ, ಸ್ವತಂತ್ರ ಅಸ್ತಿತ್ವದ ಮೆಟ್ಟಲನ್ನು ಮುಟ್ಟಲಿಲ್ಲ ಎಂಬುದು ಮಾತ್ರ ಈಗಿನ ಸಂದರ್ಭದಲ್ಲಿ ನಾವು ತಿಳಿದುಕೊಳ್ಳಬೇಕಾದ ವಿಷಯ. ಅಂತೆಯೆ ಮಾಡಬೇಕಾದ ಕಾರ್ಯವನ್ನು ಅವು ಮಾಡಲಿಲ್ಲ, ಗೆಯ್ಯಬಹುದಾದ ಸೇವೆಯನ್ನು ಅವು ಪೂರೈಸಲಿಲ್ಲ ಎಂಬ ನಿರ್ಣಯ ಅನಿವಾರ್ಯ.

ಇಂತು ನಾವು ನಮ್ಮ ಮುಖ್ಯ ಪ್ರಶ್ನೆಯತ್ತ ಸರಿದು ಬರುತ್ತೇವೆ. ಭಂಡಾರಗಳು ಎಂತಹ ಆದರ್ಶವನ್ನು ಇಟ್ಟುಕೊಂಡಿರಬೇಕು ? ಇಲ್ಲವೆ ಆದರ್ಶ ಗ್ರಂಥಭಂಡಾರಗಳು ಎಂದರೆ ಏನು ? ಅವುಗಳ ಉದ್ದೇಶವೇನಿರಬೇಕು ? ರಚನೆ ಹೇಗಿರಬಹುದು ? ವ್ಯಾಪ್ತಿ ಎಷ್ಟಿರಬೇಕು ? ಸೇವೆ ಹೇಗೆ ಸಲ್ಲಬೇಕು ? — ಎಂಬುವೇ ಪ್ರಶ್ನೆಗಳು ಇದೀಗ ಎದುರು ಬಂದು ನಿಲ್ಲುತ್ತವೆ. ಒಂದು ಕಾಲದ ಸಾಮಾಜಿಕ ಸಂಸ್ಥೆಗಳು ಆಗಿನ ಕಾಲದ ಸಾಮಾಜಿಕ ಪರಿಸ್ಥಿತಿಯನ್ನು ಪ್ರತಿಬಿಂಬಿಸುತ್ತವೆ ಎಂಬ ಒಂದು ಸಾಮಾನ್ಯವಾದ ಸಿದ್ಧಾಂತವನ್ನು ನಾವು ತಿಳಿದುಕೊಳ್ಳಬೇಕು. ಕಳೆದ ಶತಕದಲ್ಲಿ ಆರಂಭವಾದ ಒಂದು ರಾಜಕೀಯ ಸಂಸ್ಥೆಯೆ ಆಗಲಿ, ಒಂದು ಶೈಕ್ಷಣಿಕ ಕೇಂದ್ರವೆ ಆಗಲಿ ತನ್ನ ಪರಿಸ್ಥಿತಿ, ತನ್ನ ಕಾರ್ಯವಾಹಕರು, ತನ್ನ ಸಾಧನಸಾಮುಗ್ರಿಗಳು ಇವುಗಳ ಮೇಲೆಯೆ ರಚಿತವಾದ ಗುರಿಯನ್ನು ಇಟ್ಟುಕೊಂಡು ಇಂದು ಕೂಡ ಮುಂದೆ ಸಾಗುವದು

ಹೆಚ್ಚು ಸಮಂಜಸ ಮತ್ತು ಉಪಯುಕ್ತವೆ? ಅಂತಹ ಉದ್ದೇಶಗಳನ್ನು ಇಟ್ಟುಕೊಂಡು ಅವುಗಳನ್ನು ಕೈಗೂಡಿಸದೆ ಹೋದ ಸಂಸ್ಥೆಗಳು ತಮ್ಮ ಆಳಿಗಾಲವನ್ನು ತಮ್ಮ ಆರಂಭದಿಂದಲೇ ಬರಮಾಡಿಕೊಂಡಂತೆಯಲ್ಲವೆ? ಇನ್ನೂ ಅಲ್ಪವಾದ ಆದರ್ಶವನ್ನು ಇಟ್ಟುಕೊಂಡು ಅದನ್ನು ಸಾಧಿಸಿದಂತೆ ಆ ಸಂಸ್ಥೆಯ ಆದರ್ಶವೂ ಪರಿವರ್ತನೆ ಹೊಂದುತ್ತ ಹೋಗುವದು ಸಂಸ್ಥೆಯ ಜೀವನದ ರಹಸ್ಯ ಮತ್ತು ಅದರ ಬೆಳವಣಿಗೆಯ ದ್ಯೋತಕ ಎಂದು ಹೇಳಬಹುದು. ನಮ್ಮ ರಾಷ್ಟ್ರೀಯ ಮಹಾಸಭೆಯು (Congress) ಆರಂಭವಾದ ಕಾಲ, ಅದನ್ನು ಸ್ಥಾಪಿಸಿದ ಜನರ ಯೋಗ್ಯತೆ, ಅದನ್ನು ನಡೆಯಿಸಿಕೊಂಡು ಬಂದವರ ಮನೋಭಾವ ಇವುಗಳನ್ನು ತಿಳಿದುಕೊಂಡು ಮುಂದೆ ಐಯ್ವತ್ತು ವರ್ಷಗಳ ನಂತರ ಅದು ಗೈದ ಕಾರ್ಯವನ್ನು ನೆನೆದರೆ, ಒಂದು ಸಂಸ್ಥೆಯ ಉದ್ದೇಶ ಮತ್ತು ಅದರ ಸಾಧನೆ ಎಂತಹವಿರಬೇಕು ಎಂಬ ವಿಷಯದ ಸ್ಥೂಲ ಕಲ್ಪನೆಯು ಬರಬಹುದು. ಅದರಂತೆಯೆ ಸಾಮಾಜಿಕ ಕ್ಷೇತ್ರದಲ್ಲಿ ನಾವು ಬೇರೆ ಕೆಲವು ಸಂಸ್ಥೆಗಳನ್ನು ಪರೀಕ್ಷಿಸಿ ನೋಡಬಹುದು.

ಈಗ ಮೂವತ್ತು ವರ್ಷಗಳಿಂದ ಸರ್ವವ್ಯಾಪಿಯಾಗಿ ಬೆಳೆದು ನಮ್ಮ ಸಮಾಜದಲ್ಲಿ ಒಂದು ಅದ್ಭುತವಾದ ಉತ್ಸಾಹವನ್ನು ಹರಡಿ, ನಾಡಿನ ಪುನರುಜ್ಜೀವನಕ್ಕೆ ಕಾರಣವಾದ ಕರ್ನಾಟಕ ಸಂಘಗಳ ವಿಷಯವನ್ನೆ ನಾವು ಪರಿಶೀಲಿಸಿಕೊಂಡು ನೋಡಬಹುದು. ಬುದ್ಧಧರ್ಮದ ಪ್ರಚಾರ ಮತ್ತು ಆಚಾರಗಳು ಸುಲಭ ಮತ್ತು ಸುಯೋಜಿತವಾಗಿ ಸಿಗಬೇಕೆಂಬ ಉದ್ದೇಶದಿಂದ ಆಗಿನ ಕಾಲದಲ್ಲಿ ರಚಿಸಿಕೊಂಡ ಸಂಘಗಳ ಮಾದರಿಯಲ್ಲಿ ಕಳೆದ ಕೆಲವು ದಶಕಗಳಲ್ಲಿ ಅತ್ತ ದಕ್ಷಿಣದಲ್ಲಿ ತಮಿಳರು, ಇತ್ತ ಪಶ್ಚಿಮದಲ್ಲಿ ಕನ್ನಡಿಗರು ಸಾಮಾಜಿಕ ಸಂಘಟನೆಗಾಗಿ, ಸಾಂಸ್ಕೃತಿಕ ನವನಿರ್ಮಾಣಕ್ಕಾಗಿ ಸಂಘಗಳನ್ನು ಕಟ್ಟಿಕೊಂಡರು. ಮೊದಮೊದಲಿನ ಕೆಲವು ವರ್ಷ ಈ ಸಂಸ್ಥೆಗಳು ಎಲ್ಲ ಕಡೆಗಳಲ್ಲಿಯೂ ಒಂದು ಸಾಂಸ್ಕೃತಿಕ ಹೊಸಗಾಳಿಯನ್ನು ಬೀಸಿ, ಜನರಲ್ಲಿ ತಮ್ಮ ನಾಡು, ತಮ್ಮ ನುಡಿ ಮತ್ತು ತಮ್ಮ ನಡೆ ಇವುಗಳ ಬಗೆಯಲ್ಲಿ ಅಪೂರ್ವವಾದ ಜಾಗೃತಿಯನ್ನು ಹುಟ್ಟಿಸಿದವು. ಆದರೆ ಮುಂದೆ ಕೆಲವೇ ವರ್ಷಗಳಲ್ಲಿ ಅವು ಕೇವಲ ಒಂದು ನಿರ್ಜೀವ ಸಂಘಟನೆಯಾಗಿ ಯಾವ ಬಗೆಯ ವಿಶಿಷ್ಟ ಕಾರ್ಯವನ್ನು ಮಾಡದೆ ಕೇವಲ ನಗರಭೂಷಣವಾಗಿ, ಇಲ್ಲವೆ ಒಬ್ಬಿಬ್ಬರ ಕೈಗೊಂಬೆ

ಗಳಾಗಿ ಜೀವವನ್ನು ಹಿಡಿದ ಉದಾಹರಣೆಗಳನ್ನು ನಾವು ನೋಡಬಹುದು. ಇಂತಹದೊಂದು ಸ್ತಬ್ಧತೆಯು ಪ್ರಾಪ್ತವಾಗಲಿಕ್ಕೆ ಕಾರಣವೇನು ? ಅಲ್ಲಿಯ ಕಾರ್ಯಯೋಜನೆಯು ಕಾಲಕ್ಕೆ ತಕ್ಕಂತೆ ಅನುರೂಪಗೊಳ್ಳದಂತಹದಾಗಿದ್ದುದೆ ಅದರ ಅಳಿಗಾಲಕ್ಕೆ ಹೆಚ್ಚಾಗಿ ಕಾರಣ ಎಂಬ ವಾದವನ್ನು ನಾವು ಒಪ್ಪಬೇಕಾಗುವದು. ಅಂತೆಯೆ ಒಂದು ಸಂಸ್ಥೆಯನ್ನು, ಸಾಮಾಜಿಕ ಹೊಣೆಯನ್ನು ಹೊರಬೇಕೆಂಬ ವಿಚಾರದಿಂದ ಆರಂಭಮಾಡಬಯಸುವ ಸಂಸ್ಥೆಯನ್ನು ನಾವು ಕೇವಲ ಆ ಸಮಯಕ್ಕೆ ಅನುಗುಣವಾದ ದೃಷ್ಟಿಯಿಂದ ಯೋಜಿಸುವದು ಅಗತ್ಯವಷ್ಟೆ ಅಲ್ಲದೆ, ಅದರಲ್ಲಿ ಮುಂಬರುವ ಪರಿವರ್ತನೆಗಳನ್ನು ಅಳವಡಿಸಿಕೊಂಡು ಬದಲಾದ ಸಮಯಕ್ಕೆ ಅದು ಬದಲಾದ ಕಾರ್ಯಕ್ರಮವನ್ನು ಕೈಕೊಳ್ಳಬಹುದಾದ ಸಾಮರ್ಥ್ಯವನ್ನು ಪಡೆಯುವಂತೆ ರಚಿಸಿಕೊಳ್ಳುವದು ಆವಶ್ಯಕವಾಗಿರುತ್ತದೆ.

ಹಾಗಾದರೆ ಇಂದಿನ ಮಿತಿಯಲ್ಲಿ ನಾವು ಒಂದು ಗ್ರಂಥಭಂಡಾರವನ್ನು ಸ್ಥಾಪಿಸಬೇಕು ಎಂಬ ವಿಚಾರವುಳ್ಳವರಾಗಿದ್ದರೆ ಅದಕ್ಕೆ ಎಂತಹ ಉದ್ದೇಶಗಳಿರಬೇಕು ? ಆದರ ಆದರ್ಶ ಏನಾಗಿರಬೇಕು ? — ಎಂಬ ಪ್ರಶ್ನೆಯು ಇಲ್ಲಿಯ ಸಂದರ್ಭದಲ್ಲಿ ಸಮರ್ಪಕವಾದುದೆಂದು ತೋರುತ್ತದೆ. ಇಂದು ನಮ್ಮ ರಾಷ್ಟ್ರದಲ್ಲಿ ಸ್ವಾತಂತ್ರ್ಯವು ಉದಿಸಿ, ಎಲ್ಲ ದಿಶೆಗಳಲ್ಲಿಯೂ ನವಜೀವನದ ಒಂದು ದರ್ಶನ, ಒಂದು ಹೊಸ ಹುಮ್ಮಸ್ಸು ಕಾಣುತ್ತಿದೆ. ಸ್ವಾತಂತ್ರ್ಯೋತ್ತರ ಈ ವರ್ಷಪಂಚಕದಲ್ಲಿ ನಮ್ಮ ಸಮಾಜದ ಪ್ರತಿಯೊಂದು ಕ್ಷೇತ್ರದಲ್ಲಿ ಇಂದಿನ ಆವಶ್ಯಕತೆಗೆ ತಕ್ಕುದಾದ, ಇಂದಿನ ನಮ್ಮ ಬೇಡಿಕೆಗೆ ಸರಿಯಾದ ಕಾರ್ಯಯೋಜನೆಯನ್ನು ಮಾಡಿಕೊಳ್ಳುವ ಪ್ರಯತ್ನ ಕಂಡುಬರುತ್ತದೆ. ಅಂತೆಯೆ ಈಗಿನ ನಮ್ಮ ಈ ಹೊಸ ರಾಜಕೀಯ ಮತ್ತು ಸಾಮಾಜಿಕ ಸ್ಥಿತಿಯಲ್ಲಿ ನಾವು ಮಾಡಬೇಕಾದರೂ ಏನು ? ನಮ್ಮ ಇಂದಿನ ಗುರಿಯೇನು ? ಎಂಬುದನ್ನು ಮೊದಲು ತಿಳಿದುಕೊಳ್ಳುವದು ಉಚಿತನೆಂದು ಕಾಣುತ್ತದೆ.

ಗ್ರಂಥಭಂಡಾರವು ಮೊದಲಾಗಿ ಒಂದು ಜ್ಞಾನಪ್ರಸಾರಸಂಸ್ಥೆ! ಅದು ಶೈಕ್ಷಣಿಕ ವಿಶ್ವದಲ್ಲಿ ಅತ್ಯಂತ ಪ್ರಭಾವಿಯಾದ ಮತ್ತು ಉಪಯುಕ್ತವಾದ ಒಂದು ಕೇಂದ್ರ; ಅಂತೆಯೆ ಸಮಾಜಸೇವೆಯನ್ನೆ ತಮ್ಮ ಧ್ಯೇಯವನ್ನಾಗಿರಿಸಿಕೊಂಡ ಸಂಘಟನೆಗಳಲ್ಲಿ ಅದು ಮುಖ್ಯವಾದುದು. ಇಂದು ನಮ್ಮ

ಸಮಾಜದಲ್ಲಿ ಯಾವ ಬಗೆಯ ವಿಚಾರಗಳು ನಡೆಯುತ್ತಿರುವವು; ಇಂದು ನಮ್ಮ ಸಾಮಾಜಿಕ ಸಂಸ್ಥೆಗಳಲ್ಲಿ ಯಾವ ಬಗೆಯ ವ್ಯವಸ್ಥೆಯು ಕಂಡು ಬರುವದು—ಎಂಬುದೆಲ್ಲ ಇಂದಿನ ನಮ್ಮ ಸಮಸ್ಯೆಗಳನ್ನು, ಇಂದಿನ ನಮ್ಮ ಸಾಧನಗಳನ್ನು ಮತ್ತು ಇಂದಿನ ನಮ್ಮ ಸಿದ್ಧತೆಯನ್ನು ವ್ಯಕ್ತಗೊಳಿಸುತ್ತದೆ. ಸಾಮಾಜಿಕ ಸಂಸ್ಥೆಗಳು ಆ ಆ ಕಾಲದಲ್ಲಿ ಜೀವಾಳದ ಪ್ರಶ್ನೆಗಳು ಎನಿಸಿ ಕೊಂಡವುಗಳನ್ನು ಮಾತ್ರ ಪರಿಹರಿಸಲಿಕ್ಕೆ ಪ್ರಯತ್ನಿಸಿದರೆ, ಪ್ರಚಲಿತವಾದ ಬಿಕ್ಕಟ್ಟು ಮತ್ತು ತೊಂದರೆಗಳನ್ನು ದೂರಮಾಡಲಿಕ್ಕೆ ಎತ್ತುಗಡೆಯನ್ನು ಮಾಡಿದರೆ, ಆ ಸಂಸ್ಥೆಗಳು ತಮ್ಮ ಸಫಲತೆಯನ್ನು ಸಾಮಾನ್ಯವಾಗಿ ಪಡೆಯ ಬಹುದು.

ಇಂದು ಭಾರತವು ಸ್ವತಂತ್ರವಾಗಿದೆ. ಕೇವಲ ಒಂದು ಸಾಮಾನ್ಯವಾದ ವಿಚಾರವು ಅದಾಗಿದ್ದರೂ ಅದರ ಹಿನ್ನೆಲೆಯಲ್ಲಿ ಅಸಂಖ್ಯ ವಿಷಯಗಳು ಅಡಗಿಕೊಂಡಿವೆ. ಅದರಂತೆಯೆ ಅದರ ಪಕ್ಕದಲ್ಲಿ ಅನೇಕ ಸಮಸ್ಯೆಗಳು ಅಡಕವಾಗಿವೆ. ಸ್ವಾತಂತ್ರ್ಯದೊಡನೆಯೆ ನಮ್ಮಲ್ಲಿರುವ ಅಂತರ್ಧರ್ಮೀಯ ಮತ್ತು ಅಂತರ್ಜಾತೀಯ ವೈಮನಸ್ಯವು ವಿಕೋಪಾವಸ್ಥೆಯನ್ನು ದಾಟಿ ತೆಂದೆನ್ನಬಹುದು. ಸ್ವಾತಂತ್ರ್ಯದೊಡನೆಯೆ ಮಹಾಯುದ್ಧದ ಜಳವು ತಡೆದರೂ ಅದರ ಆರ್ಥಿಕ ಪರಿಣಾಮವು ಸಾರ್ವತ್ರಿಕವಾಗಿ ಪ್ರಪಂಚದ ತುಂಬೆಲ್ಲ ಹರಡಿಕೊಂಡಿತು. ಸ್ವಾತಂತ್ರ್ಯದೊಡನೆಯೆ "ಭಾರತವು ಇಂತಹ ಒಂದು ಅಪೂರ್ವವಾದ ರೀತಿಯಲ್ಲಿ ತನ್ನ ಬಿಡುಗಡೆಯನ್ನು ಮಾಡಿಕೊಂಡಿತು; ಅದರಲ್ಲಿ ಏನಾದರೂ ವಿಶಿಷ್ಟವಾದ ಗುಣಗಳು ಇರಲಿಕ್ಕೆ ಬೇಕು; ಅಂತಹ ಅದ್ವಿತೀಯವಾದ ಶಕ್ತಿ ಭಾರತದಲ್ಲಿ ಯಾವುದಿದೆ'' ಎಂಬ ಸ್ವಾಭಾವಿಕವಾದ ಕೊತೂಹಲವು ಆರ್ಥಿಕ ಮತ್ತು ಆದಿಭೌತಿಕ ರೀತಿಯಲ್ಲಿ ಅತ್ಯಂತ ಮುಂದು ವರಿದ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಉದಯಿಸಿತು. ಸ್ವಾತಂತ್ರ್ಯದೊಡನೆ, "ಇಷ್ಟೊಂದು ಅಕ್ಕರತೆಯಿಂದ ಈ ಭಾರತೀಯರನ್ನು ಬ್ರಿಟಿಶರು ನೋಡಿ ಕೊಂಡರು, ನಡೆಯಿಸಿಕೊಂಡರು. ಆರ್ಥಿಕ ಶೋಷಣೆಯ ಪಾಪವು ತಮಗೆ ತಗಲಿರಬಹುದು ಎಂಬ ಹೀನತೆಯ ಭಾವನೆಯಿಂದ ಬ್ರಿಟಿಶರಿಂದೇ ಹಾಗೆ ಸ್ವಾತಂತ್ರ್ಯದಾನದ ಪರಿಹಾರೋಪಾಯವನ್ನು ಮಾಡಿದರು. ನಾವು ಇತ್ತ ಅದೇ ಭಾರತೀಯರಿಂದ ಜರುಗುವ ಆರ್ಥಿಕ ಮತ್ತು ಸಾಮಾಜಿಕ ಶೋಷಣೆ

ಯಲ್ಲಿ ತೊಳಲಾಡುತ್ತಿದ್ದೇವೆ. ಅವರಿಗೆ ತಕ್ಕ ದಂಡವನ್ನು ನಾವು ಮಾಡಲೇ ಬೇಕು" ಎಂಬ ಪ್ರತಿಕ್ರಿಯೆಯು ಭಾವನೆಯು ಆಫ್ರಿಕಾ, ಸಿಂಹಳ ಮತ್ತು ಬ್ರಹ್ಮದೇಶಗಳಂತಹ ನಮ್ಮ ನೆರೆಯ ರಾಷ್ಟ್ರಗಳಲ್ಲಿ ಮೂಡಿರುವದು. ಸ್ವಾತಂತ್ರ್ಯದೊಡನೆಯೆ ಇಡಿಯ ಪೂರ್ವ ಭೂಖಂಡದಲ್ಲಿ ಇಲ್ಲಿಯ ವರೆಗೆ ದಾಸ್ಯದಲ್ಲಿದ್ದ ಮಿಕ್ಕ ಎಲ್ಲ ರಾಷ್ಟ್ರಗಳಲ್ಲಿ ಭಾರತದ ಅದ್ಭುತವಾದ ಗೈಮೆಯಿಂದ ಸ್ಫೂರ್ತಿಯುಂಟಾಗಿ, ಅದರ ಪರಿಣಾಮದಿಂದ ಎಲ್ಲ ದೇಶಗಳಲ್ಲಿಯೂ ನವ ರಾಷ್ಟ್ರೀಯತೆಯ ಒಂದು ಜಾಗೃತಿಯು ಹುಟ್ಟಿ, ಅಲ್ಲಿಯೂ ಬಂಧವಿಮೋಚನದ ಪ್ರಯತ್ನಗಳು ಆರಂಭವಾದುವು. ಈ ಬಗೆಯ ದಾಸ್ಯಶೃಂಖಲೆಯನ್ನು ಕಡಿದೊಗೆದ ಇಂಡೋನೇಶಿಯಾ ಮೊದಲಾದ ರಾಷ್ಟ್ರಗಳಲ್ಲಿ ಇನ್ನೂವರೆಗೆ ಮತ್ತು ಇನ್ನು ಮುಂದೆ ಕೂಡ ತಮ್ಮ ರಾಜಕೀಯ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವದಕ್ಕಾಗಿ ಭಾರತದತ್ತ ಕೃತಜ್ಞತಾ ಪೂರ್ವಕವಾಗಿ ನೋಡುವ ಪ್ರವೃತ್ತಿಯೂ ಉದ್ಭವಿಸಿದುದು ಕಂಡುಬರುತ್ತದೆ. ಸ್ವಾತಂತ್ರ್ಯದೊಡನೆಯೆ ಭಾರತದ ವಿಭಜನೆಯಾದರೂ, ಆರ್ಥಿಕ ಮತ್ತು ಔದ್ಯೋಗಿಕ ದೃಷ್ಟಿಯಿಂದ ಆಸ್ಯಖಂಡದಲ್ಲಿಯೇ ಇನಿತೊಂದು ಮುಂದುವರಿದ ರಾಷ್ಟ್ರವು ಜಪಾನನ್ನೊಂದುಳಿದು ಬೇರೆ ಯಾವದೂ ಇಲ್ಲದಿರುವದರಿಂದ ಸಹಜವಾಗಿಯೆ ಮಧ್ಯಪೂರ್ವ ಮತ್ತು ಆಗ್ನೇಯ ಆಸ್ಯ ರಾಷ್ಟ್ರಗಳು ತಮ್ಮ ಆರ್ಥಿಕ ಮತ್ತು ಪುನರ್ನಿರ್ಮಾಣದ ಕಾರ್ಯದಲ್ಲಿ ಭಾರತದ ಸಹಕಾರ ಸಹಾಯಗಳಿಗಾಗಿ ಸಾಕಾಂಕ್ಷದೃಷ್ಟಿಯಿಂದ ನೋಡುತ್ತಲಿವೆ. ಸ್ವಾತಂತ್ರ್ಯದೊಡನೆಯೆ ದ್ವಿತೀಯ ಮಹಾಸಮರದ ಕೊನೆಯ ಘಟ್ಟವು ಸಮಾಪ್ತವಾದ ಸಮಯವು ಬಂದದ್ದರಿಂದ, ಮತ್ತು ಅನತಿದೂರದಲ್ಲಿಯೆ ಇಡಿಯ ಪ್ರಪಂಚವು ರಾಜಕೀಯ ದೃಷ್ಟಿಯಿಂದ ಇಬ್ಭಾಗವಾಗಿ ಹೋದುದರಿಂದ ಯುದ್ಧಪ್ರವೃತ್ತಿಯ ಲವಲೇಶವು ಕೂಡ ಕಾಣದ ಚಿಕ್ಕಪುಟ್ಟ ರಾಷ್ಟ್ರಗಳು ಭಾರತದ ಶಾಂತಿಮಯ ಧೋರಣೆಯನ್ನು ಸಂರಕ್ಷಣೆಯ ಕವಚದಂತೆ ಧರಿಸಿಕೊಂಡು, ಭಾರತದ ಹಿಂಬದಿಯಲ್ಲಿಯೆ ನಿಲ್ಲುವ ಸಮಾಧಾನವನ್ನು ಪಡೆದಿವೆ.

ಈ ರೀತಿಯಾಗಿ ಭಾರತವು ಆರ್ಥಿಕ, ಸಾಮಾಜಿಕ, ಸಂರಕ್ಷಕ, ರಾಜಕೀಯ, ಸಾಂಸ್ಕೃತಿಕ ಮೊದಲಾದ ದೃಷ್ಟಿಯಿಂದ ಇಂದಿನ ಪ್ರಪಂಚದಲ್ಲಿ ಹೊಸದೊಂದು ಭೂಮಿಕೆಯಲ್ಲಿ ಅವತರಿಸಿದೆ. ಅಂತೆಯೆ ಈ ಹೊಸ ಪಾತ್ರಕ್ಕೆ

ತಕ್ಕ ಹೊಸ ವೇಷವನ್ನು ಮತ್ತು ಹೊಸ ನಟನೆ ಎಂದರೆ ನಡತೆಯನ್ನು ನಾವು ಧರಿಸಿ ವಹಿಸಿಕೊಳ್ಳುವದು ಅನಿವಾರ್ಯವಾಗಿದೆ.

ಆದರೆ! ಮನಸ್ಸಿನಲ್ಲಿ ಮುಂಡಿಗೆಯನ್ನು ಮಾಡಿದರೆ ಗೋದಿಯ ಹಣ ಕೊಡುವವರಾರು ಎಂಬಂತಾಗಿದೆ ಇಂದಿನ ನಮ್ಮ ಸ್ಥಿತಿ. ಇಂದು ಭಾರತದ ಕೀರ್ತಿ ದಿಗಂತಗಳಲ್ಲಿ ಹರಡಿರುವದೇನೋ ನಿಜ. ಭಾರತೀಯ ತತ್ವಜ್ಞಾನ, ಭಾರತೀಯ ಶಾಸ್ತ್ರಗಳು, ಭಾರತೀಯ ಕಲಾಕೌಶಲ್ಯ, ಭಾರತೀಯ ನಾಗರಿಕತೆ, ಭಾರತೀಯ ಸಂಸ್ಕೃತಿ ಇವುಗಳ ಬಗೆಯಲ್ಲಿ ಅತ್ಯುಚ್ಚವಾದ ಗೌರವ ಎಲ್ಲ ಕಡೆಯಲ್ಲಿಯೂ ಗೋಚರವಾಗುತ್ತದೆ. ಅದರಂತೆಯೆ ನಮ್ಮ ವೇಷಭೂಷಣ, ನಮ್ಮ ಅತಿಥಿಸತ್ಕಾರ, ನಮ್ಮ ರೀತಿ–ನೀತಿಗಳು ಅಥವಾ ಸಮಾಜ ರಚನೆ ಇವುಗಳ ವಿಷಯವಾಗಿ ಪ್ರಪಂಚದಲ್ಲೆಲ್ಲ ಅತ್ಯುತ್ತಮವಾದ ಅಭಿಪ್ರಾಯವಿದೆ. ಆದರೆ ಅದೆಲ್ಲ— ಇಂದಿನ ಸ್ಥಿತಿಗಳ ವಿಷಯವಾಗಿರದೆ ಹಿಂದಿನ ಗತಿಯ ಸಲುವಾಗಿ ಇದೆ. ಗತವೈಭವವನ್ನು ಅವರೆಲ್ಲರೂ ಹೊಗಳುತ್ತಾರೆಯೆ ಹೊರತು ಇಂದಿನ ನಮ್ಮ ಪೌರುಷವನ್ನಲ್ಲ. ಇಂದು ಅಲ್ಲೊಬ್ಬ ಅರವಿಂದ ಇಲ್ಲೊಬ್ಬ ಗಾಂಧಿ, ಇನ್ನೊಬ್ಬ ನೆಹರು ಮತ್ತೊಬ್ಬ ರಾಧಾಕೃಷ್ಣನ್, ಇತ್ತೊಬ್ಬ ಠಾಕೂರ ಆತ್ತೊಬ್ಬ ರಾಮನ್ ಇಂತಹರ ವಿಷಯವಾಗಿ ನಮಗೆ ಎಷ್ಟೇ ಮಂಜುಲವಾದ ಮಾತುಗಳು ಕೇಳಬಂದರೂ ಒಂದು ರೀತಿಯಿಂದ ಅವು ನಮ್ಮ ಪೂರ್ವಕಾಲದ ಪ್ರತಿಬಿಂಬವೆನಿಸುವಂತಿವೆ. ಇನ್ನೊಂದು ಬಗೆಯಿಂದ ವೈಯಕ್ತಿಕ ಗೈಮೆಯಾಗಿ ಅವು ಹೋಗುತ್ತವೆ. ಹೀಗೆ ನಮ್ಮ ಇಂದಿನ ಕೀರ್ತಿಕಲಶವು ಹಿಂದಿನ ನಮ್ಮ ಹಿರಿಯರು ಕಟ್ಟಿಟ್ಟ ಮಂದಿರದ ಮೇಲೆ ಮಾತ್ರ ಹೊಳೆಯುತ್ತಿರುವದು ಎಂಬ ಮಾತನ್ನು ನಾವು ಮರೆಯುವಂತಿಲ್ಲ.

ನಮ್ಮ ಅಜ್ಜ ಆನೆಯ ಮೇಲೆ ಮೆರೆಯುತ್ತಿದ್ದರೆ ಇಂದು ನಮಗೆ ಕೂಡ್ರಲಿಕ್ಕೆ ಕುದುರೆ ಕೂಡ ಇಲ್ಲ ಎಂಬಂತಾಗಿದೆ. ಇಂದಿನ ನಮ್ಮ ಸ್ಥಿತಿ ಹಿಂದಿನ ವೈಭವವು, ನೆನಸಿಕೊಂಡು ಪುನಃ ಕಾರ್ಯಪ್ರವೃತ್ತಿ ಆಗುವದಕ್ಕೆ ಪ್ರೇರಕ ಎನಿಸುವಂತಿದ್ದರೂ ಒಮ್ಮೊಮ್ಮೆ ಇಂದಿನ ಹೀನಸ್ಥಿತಿಯೊಡನೆ ಅದನ್ನು ಹೋಲಿಸಿ ನೋಡಿಕೊಂಡಾಗ್ಗೆ ನಮ್ಮ ಸಲುವಾಗಿ ನಮಗೇ ನಾಚಿಕೆಯೆನಿಸಿ ಯಾವ ಕೆಲಸಕ್ಕೂ ಮನಸ್ಸಾಗದಂತಾಗಿ ಜುಗುಪ್ಸೆಯನ್ನು ಕೂಡ ಹುಟ್ಟಿಸಬಹುದು.

ಸ್ವಾತಂತ್ರ್ಯ ಪ್ರಾಪ್ತಿಯ ಜೊತೆಯಲ್ಲಿಯೆ ಭಾರತದ ರಾಜಕೀಯ ಆಡಳಿತವು ಕುಸಿದುಬಿದ್ದು ಭಾರತದಲ್ಲಿ ಮತ್ತು ತತ್ಸಮಾನವಾಗಿ ಇಡಿಯ ಪ್ರಪಂಚದಲ್ಲಿ ಅಶಾಂತಿಯು ಮತ್ತೆ ಹರಡಬಹುದು, ಎಂದು ಸಾರಿ ಹೆದರಿಕೆಯನ್ನು ಹಾಕಿದ ಜನರ ಭವಿಷ್ಯವೇನೊ ಸುಳ್ಳಾಗಿದೆ ಎಂದೆನ್ನಬಹುದು. ಇಂದು ಭಾರತದಲ್ಲಿ ಆದ್ಯತನ ದೃಷ್ಟಿಯಿಂದ ಎಲ್ಲೆಲ್ಲಿಯೂ ಶಾಂತಿಮಯ ವಾತಾವರಣವು ಹಬ್ಬಿ, ಮೊದಲಿಗಿಂತ ಆಡಳಿತವು, ಸಂಸ್ಥಾನಗಳ ಲೀನೀಕರಣ ಮತ್ತು ಏಕೀಕರಣದ ಮೂಲಕವಾಗಿಯೂ, ಪ್ರಜಾಪ್ರಭುತ್ವ ಸಂಪನ್ನವಾದ ರಾಜ್ಯಕ್ರಮವನ್ನು ಸಂಪೂರ್ಣವಾಗಿ ಆಚರಣೆಯಲ್ಲಿ ತಂದ ಕಾರಣವಾಗಿಯೂ ಹೆಚ್ಚು ಸುಗಮವಾಗಿಯೂ, ನಿಯಮಬದ್ಧವಾಗಿಯೂ ಸಾಗುತ್ತಿರುವದೇನೋ ನಿಜ. ಆದರೆ ಯಾವ ದೊಡ್ಡ ದೃಷ್ಟಿಯಿಂದ, ಎಂತಹ ಉದಾತ್ತ ಧ್ಯೇಯಗಳಿಂದ, ಯಾವ ಉಚ್ಚ ವಿಚಾರಗಳಿಂದ, ಎಂತಹ ಉನ್ನತ ಆಕಾಂಕ್ಷೆಗಳಿಂದ ಭಾರತದ ರಾಜಕೀಯ ಸಾತಂತ್ರ್ಯಕ್ಕಾಗಿ ನಾವು ಹೋರಾಡಿದೆವು ? ಅವುಗಳನ್ನು ಸಾಧಿಸುವದಕ್ಕೆ ಇಂದು ಮಾಡುತ್ತಿರುವ ನಮ್ಮ ಕಾರ್ಯವೇನಾಗಿದೆ? ಅವುಗಳತ್ತ ಒಂದಂಶದಲ್ಲಿಯಾದರೂ ಮುಂದುವರಿಯಲಿಕ್ಕೆ ಇಂದು ಯಾವ ಪಥದಲ್ಲಿ ನಾವು ಸಾಗುತ್ತಿದ್ದೇವೆ ? ಇಂದಿನ ನಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತಿಯಲ್ಲಿ ಚಿಕ್ಕದಾದರೂ ಒಂದು ಸುಧಾರಣೆಯನ್ನು ಮಾಡಿಕೊಳ್ಳುವಂತಹ ಸಾಮರ್ಥ್ಯವನ್ನು ಪಡೆಯಲಿಕ್ಕೆ ನಮ್ಮ ಯತ್ನವೇನು ನಡೆದಿದೆ? ಇಂದಿನ ನಮ್ಮ ಅಜ್ಞಾನ, ಇಂದಿನ ನಮ್ಮ ಆಲಸ್ಯ, ಇಂದಿನ ನಮ್ಮ ಜಂಭ, ಇಂದಿನ ನಮ್ಮ ನಿರುತ್ಸಾಹ ಇವುಗಳನ್ನು ಹೊಡೆದೋಡಿಸಲಿಕ್ಕೆ ನಾವು ಯಾವ ಕ್ರಮವನ್ನು ಕೈಕೊಳ್ಳುತ್ತಿದ್ದೇವೆ ?

ಸಮಾಜ ಸುಧಾರಣೆಯ ಯಾವ ಮಾತನ್ನೆತ್ತಿದರೂ ಅದರ ಪರಿಣಾಮವಾಗಿ ಆರ್ಥಿಕ ಕೊರತೆಯೆ ಒಂದು ಸಮಸ್ಯೆಯಾಗಿ ಎದುರು ಬಂದು ನಿಲ್ಲುವದು. ಸಾಮಾಜಿಕ ಜೀವನದ ಯಾವ ಅಂಗವನ್ನೆ ನಾವು ಪರಿವರ್ತಿಸಲಿಕ್ಕೆಂಮ ಮುಂದುವರಿಯಲಿ, ಅಲ್ಲಿ ಪರಸ್ಪರ ದ್ವೇಷಾಸೂಯೆಗಳು, ಇಲ್ಲದ ನಿರುತ್ಸಾಹ ಮತ್ತು ಸಲ್ಲದ ಸೋಮಾರಿತನಗಳು ಕಂಡುಬರುವವು. ಹೀಗಾಗಿ ಇಂದಿನ ನಮ್ಮ ಸಮಸ್ಯೆಯು ಕೇವಲ ಒಂದು ಆರ್ಥಿಕ ಅಥವಾ ಒಂದು ಸಂಘಟನಾತ್ಮಕವಷ್ಟೆ ಆಗಿರದೆ ಅದು ಹೆಚ್ಚು ವ್ಯಾಪಕವಾಗಿದೆ; ತೀರ ವಿಶಾಲವಾದು

ದಾಗಿದೆ. ಅಂತೆಯೆ ಇಂತಹ ಇಂದಿನ ನಮ್ಮ ಸಂಧಿಕಾಲದ ಸಮಸ್ಯೆಯನ್ನು ಪರಿಹರಿಸಬೇಕಾದರೆ ಇಂದಿನ ಭಾರತೀಯ ಸಂಸ್ಥೆಗಳಲ್ಲಿ ಬೇರೆಯಾದ ಒಂದು ಕಾರ್ಯಧೋರಣೆಯು ಕಂಡುಬರುವದು ಅವಶ್ಯವಾಗಿದೆ. ಪ್ರತಿಯೊಂದು ವಿಷಯದಲ್ಲಿಯೂ ಇಂದು ನಮ್ಮ ಪ್ರಯತ್ನ ಮತ್ತು ನಮ್ಮ ಯೋಜನೆ ವಿಶಿಷ್ಟವಾಗಿರುವದು ಅಗತ್ಯ ಮತ್ತು ಅಪರಿಹಾರ್ಯವಾಗಿದೆ.

ಈ ರೀತಿಯಾಗಿ ಇಂದಿನ ಸಮ್ಮಿಶ್ರ ವಾತಾವರಣದಲ್ಲಿ ನಾವು ಭಾರತೀಯರಾಗಿಯೆ ನಮ್ಮ ಕಾರ್ಯದಲ್ಲಿ ಒಂದು ಕೈಯಿಂದ ಹಿರಿಯ ಗುರಿಯನ್ನು ಸಾಧಿಸಲಿಕ್ಕೆ ಪ್ರಯತ್ನ ಮಾಡುತ್ತಿರುವಾಗ್ಗೆ ಇನ್ನೊಂದು ಕೈಯಿಂದ ತೊಡಕಾಗುವ ಅನೇಕ ಆತ್ಮಘಾತಕ ಪ್ರವೃತ್ತಿಗಳನ್ನು ಹತ್ತಿಕ್ಕುವ ಕಾರ್ಯವನ್ನು ಮಾಡಬೇಕಾಗಿದೆ. ಇಂದಿನ ಪರಿಸ್ಥಿತಿಯಲ್ಲಿ ಇದ್ದ ಸಮಸ್ಯೆಗೆ ನಮ್ಮ ಸಂಘಟನೆ ಸಾಲದಂತಾಗಿದೆ. ಅಸ್ತಿತ್ವದಲ್ಲಿದ್ದ ಸಂಸ್ಥೆಗಳಲ್ಲಿ ಜೀವನ ಸಾಕಷ್ಟು ಇಲ್ಲದಂತಾಗಿದೆ. ಕಾರ್ಯಮಾಡುವ ಅಭ್ಯಾಸವಿದ್ದ ಜನರಲ್ಲಿ ಫಲಗಳ ಬಗೆಯಲ್ಲಿ ಮತ್ತು ಪ್ರಗತಿಯ ಬಗ್ಗೆ ಚಿಂತೆಯು, ಭೀತಿಯು ಹುಟ್ಟಿ, ಮುಂದೆ ಅವರು ತಮ್ಮ ವಿದ್ವತ್ತು ಮತ್ತು ಅನುಭವಗಳನ್ನು ಸಮಾಜಹಿತದ ದೃಷ್ಟಿಯಿಂದ ವಿನಿಯೋಗಿಸಲಿಕ್ಕೆ ಅನುಮಾನಿಸುತ್ತಲಿದ್ದಾರೆ ಅಂತೆಯೆ ಇಂದಿನ ನಮ್ಮ ನಿರೀಕ್ಷೆ ಮತ್ತು ನಮ್ಮ ಸಾಧನೆ, ಇಂದಿನ ನಮ್ಮ ಸಂಕಲ್ಪ ಮತ್ತು ನಮ್ಮ ಸಿದ್ಧತೆ, ಇಂದಿನ ನಮ್ಮ ಹಾರೈಕೆ ಮತ್ತು ನಮ್ಮ ಗೈಮೆ ಇವುಗಳಲ್ಲಿ ಸಮತೋಲ ಇಲ್ಲದಿರುವದೊಂದು ಇಂದಿನ ಸಮಾಜದ ವೈಶಿಷ್ಟ್ಯವಾಗಿದೆ.

ಭಾರತದಲ್ಲಿಯೆ ಈ ರೀತಿಯಾದ ಸ್ಥಿತಿಯಿದ್ದಾಗ, ಭಾರತ ರಾಷ್ಟ್ರದ ಒಂದು ಭಿನ್ನಾಂಗವಾದ ಕರ್ನಾಟಕದ ಸ್ಥಿತಿಯು ಇದಕ್ಕಿಂತ ಶೋಚನೀಯವಾದುದಾಗಿದೆ. ರಾಷ್ಟ್ರದ ಎಲ್ಲ ಸಮಸ್ಯೆಗಳು ತಮ್ಮ ಪ್ರಮಾಣಕ್ಕನುಗುಣವಾಗಿ ಇಲ್ಲಿ ಕಂಡುಬರುತ್ತವೆ; ಆದರೆ ರಾಷ್ಟ್ರದಲ್ಲಿ ನಿರ್ಮಿತವಾದ ನವ ಮನುವಿನಲ್ಲಿ ನಮಗೆ ಕನ್ನಡಿಗರಿಗೆ ಅದರ ಯಾವ ಅನುಕೂಲತೆಯಾಗಲಿ, ಸ್ಥಿತ್ಯಂತರವಾಗಲಿ ಆಗುವಂತಹ ಸನ್ನಿವೇಶವು ಒದಗಿಲ್ಲ. ಇಂತಹ ಒಂದು ಕಾಲಖಂಡವು ಕನ್ನಡನಾಡಿಗೆ ಹೊಸ ಸಮಸ್ಯೆಗಳನ್ನು ತಂದೊಡ್ಡುತ್ತಿರುವದು ಇಂದಿನ ಒಂದು ವಿಶಿಷ್ಟ ಪರಿಸ್ಥಿತಿಯೆಂದು ಹೇಳಬಹುದು. ಅದರ ಜೊತೆಯಲ್ಲಿಯೆ ಕನ್ನಡನಾಡಿನ ಬಗ್ಗೆಯಷ್ಟೆ ತೀವ್ರತೆಯಿಂದ ಭಾಸವಾಗುತ್ತಿರುವ

ಬೇರೆ ತೊಡರು–ತೊಂದರೆಗಳಂತೂ ಇಂತಹ ಅನಿಶ್ಚಿತ ಮತ್ತು ಅಸಹಾಯ ಪರಿಸ್ಥಿತಿಯಲ್ಲಿ ಇನ್ನಷ್ಟು ಉಗ್ರಸ್ವರೂಪವನ್ನು ತಳೆದಿದ್ದರೆ ಏನೂ ಆಶ್ಚರ್ಯ ವಿಲ್ಲ. ಇಂದು ಕನ್ನಡನಾಡಿನಲ್ಲಿ, ಒಂದು ರೀತಿಯಿಂದ ನೋಡಿದರೆ, ನಾವು ಅತ್ಯಂತ ಅಭಿಮಾನ ತಾಳಬಹುದಾದ ನಿಸರ್ಗದತ್ತ ಕೊಡುಗೆ ಗಳಿದ್ದು, ಇನ್ನೊಂದು ರೀತಿಯಿಂದ ಅವುಗಳ ಪ್ರಯೋಜನೆಯನ್ನು ನಾವು ಸಾಕಷ್ಟು ಪಡೆಯುತ್ತಿಲ್ಲವಲ್ಲ ಎಂಬ ಮನೋಭಾವವು ಸಾರ್ವತ್ರಿಕವಾಗಿ ಹರಡಿಕೊಂಡಿದೆ. ಕನ್ನಡನಾಡಿನ ಇತಿಹಾಸ, ಕನ್ನಡನಾಡಿನ ಪರಂಪರೆ ಗಳು, ಕರ್ನಾಟಕದ ಸಾಹಿತ್ಯ, ಕನ್ನಡಿಗರ ಸಂಸ್ಕೃತಿ ಇವುಗಳು ಭಾರತದ ನಮ್ಮ ಇತರ ಯಾವ ಬಂಧುಗಳ ಸಂಗಡ ಆದರೂ ಸಮಾನರಾಗಿ ನಿಲ್ಲು ವಂತಹ ಅಭಿಮಾನದ ವಿಷಯಗಳಾಗಿವೆ. ಅದರಂತೆಯೆ ಅನೇಕಜನ ಕನ್ನಡ ಕುಲಪುತ್ರರು ತಮ್ಮ ವ್ಯಾಸಂಗ, ತಮ್ಮ ಕಾರ್ಯಕ್ಷಮತೆ, ತಮ್ಮ ಪ್ರಾಮಾಣಿಕತನ, ತಮ್ಮ ಉದಾರಹೃದಯ ಇವುಗಳ ಮೂಲಕವಾಗಿ ಉನ್ನತವಾದ ಸ್ಥಳಗಳನ್ನು ಪಡೆದು ಭಾರತದ ಉತ್ಕರ್ಷೆಗಾಗಿಯೂ, ಪ್ರಪಂಚದ ಪ್ರಗತಿಗಾಗಿಯೂ ಹೆಣಗುತ್ತ ಕರ್ನಾಟಕದ ಕೀರ್ತಿಯನ್ನು ಬೆಳಗುತ್ತಲಿದ್ದಾರೆ. ಕನ್ನಡಿಗರ ವ್ಯಕ್ತಿತ್ವ, ಕನ್ನಡಿಗರ ಸಾಹಸ, ಕನ್ನಡ ನಾಡಿನ ನೈಸರ್ಗಿಕ ಸಾಧನಗಳು ಇವುಗಳ ಬಗೆಯಲ್ಲಿ ಕನ್ನಡಿಗರೆಲ್ಲ ಸಾಕಷ್ಟು ತಿಳಿದುಕೊಂಡವರಾಗಿದ್ದರೂ, ಅವುಗಳ ವಿನಿಯೋಗ ಮತ್ತು ಸದ್ಯದ ಪರಿಸ್ಥಿತಿ ಯಲ್ಲಿ ಅವುಗಳ ಲಾಭಗಾರಿಕೆ ಇವುಗಳ ವಿಷಯವಾಗಿ ಸಂಬಂಧಪಟ್ಟ ಕನ್ನಡೇತರರಲ್ಲಿ ಸಮಾಚಾರವು ಹರಡುವದು, ಸದಭಿಪ್ರಾಯವು ಮೂಡು ವದು ಇನ್ನೂ ಆಗಬೇಕಾದ ಕಾರ್ಯವೆನಿಸಿದೆ. ಕನ್ನಡನಾಡಿನಲ್ಲಿ ಭಾರತದ ಸಮಸ್ಯೆಗಳು ಸಾಕಷ್ಟು ಪ್ರಮಾಣದಲ್ಲಿ ತಲೆಯೆತ್ತಿ ನಿಂತಿರುವದಲ್ಲದೆ, ಭಾರತದ ಇತರ ನಾಯಕರ ನಿರ್ಲಕ್ಷ್ಯಕ್ಕಾಗಿ ಕನ್ನಡನಾಡಿನ ಕೆಲವು ವಿಶಿಷ್ಟ ಪ್ರಶ್ನೆಗಳು ಇತ್ತ ತೀವ್ರವಾಗುತ್ತ ನಡೆದಿವೆ; ಅತ್ತ ಕನ್ನಡನಾಡಿನ ಕೊಡುಗೆಗಳನ್ನು ಒಂದು ಉಪಯುಕ್ತವಾದ ರೀತಿಯಲ್ಲಿ ಎರಕ ಹೊಯ್ದು, ಅದರ ಪರಿಣಾಮ ವಾಗಿ ಕನ್ನಡಿಗರ ಜೀವನವನ್ನು ಉಜ್ವಲಗೊಳಿಸುವ ಮತ್ತು ತನ್ಮೂಲಕವಾಗಿ ಭಾರತದ ಸಮಸ್ಯೆಯನ್ನು ಪರಿಹರಿಸಲಿಕ್ಕೆ ಪ್ರಯತ್ನಿಸಿ ರಾಷ್ಟ್ರೀಯ ಜೀವನ ವನ್ನು ಉನ್ನತಿಗೊಳಿಸುವ ಕಾರ್ಯ ಮಾಡುವದು ಅಗತ್ಯವಾಗಿದೆ.

ಇಂದು ನಾವು ಯಾವುದೊಂದು ಸಂಸ್ಥೆಯು, ಸಮಾಜಕಾರ್ಯದ ಸಂಸ್ಥೆಯ ಉದ್ದೇಶವನ್ನು ನಿರ್ಧರಿಸುವ ಮೊದಲು, ಸದ್ಯದ ನಮ್ಮ ಸಾಮಾಜಿಕ ಇಲ್ಲವೆ ಸಾಂಸ್ಕೃತಿಕ ಆದರ್ಶವೇನು ಎಂಬುದನ್ನು ತಿಳಿದುಕೊಳ್ಳುವದು ಹೆಚ್ಚು ಆವಶ್ಯಕವೆನಿಸಬಹುದು. ಯಾವುದೊಂದು ಬೇಡಿಕೆಯನ್ನು ನಿಶ್ಚಿತಗೊಳಿಸುವ ಮುನ್ನ, ಅದರ ಉದ್ದೇಶವನ್ನು ಸಾಧಿಸುವ ವಿಷಯದಲ್ಲಿ ಆ ಸಂಸ್ಥೆಯ ಅರ್ಹತೆಯು ಏನಾಗಬಹುದು ಎಂಬುದನ್ನು ಕಂಡುಕೊಳ್ಳುವದು ವಿಹಿತವಲ್ಲವೆ ? ಎಲ್ಲ ಕಡೆಯಿಂದಲೂ ಸಾಮಾಜಿಕ ಸಮಸ್ಯೆಗಳನ್ನು ಎದುರುಗೊಳ್ಳುವ ಇಂದಿನ ಕನ್ನಡಿಗನು ತನಗೆ ಸಾಧಕವಾಗಬಹುದಾದ ಒಂದು ಸಂಸ್ಥೆಯನ್ನು ಕಟ್ಟಿಕೊಳ್ಳಬೇಕಾದರೆ, ಅದರ ಗೊತ್ತುಗುರಿಗಳು ಮತ್ತು ಅದರ ಅರ್ಹತೆಯಂತೆಯೆ ಸದ್ಯದ ಪರಿಸ್ಥಿತಿಯಲ್ಲಿ ಅದಕ್ಕೆ ಒದಗಬಹುದಾದ ಅಡೆತಡೆಗಳು ಮತ್ತು ಅದರ ಪ್ರಗತಿಯಲ್ಲಿ ತೊಡಕಾಗಬಹುದಾದ ಕೊರತೆ–ಮರ್ಯಾದೆಗಳು ಇವುಗಳ ಬಗೆಯಲ್ಲಿಯೂ ವಿಚಾರ ಮಾಡಬೇಕಾಗುವದು.

ಇಂದು ಸಾಮಾನ್ಯವಾಗಿ ಭಾರತದಲ್ಲಿ ರಾಷ್ಟ್ರಪುರುಷನು ಯಾವ ಉಚ್ಚ ಮತ್ತು ನಿಚ್ಚಳವಾದ ಧ್ಯೇಯಗಳನ್ನಿಟ್ಟುಕೊಂಡು ಹೊರಟಿರುವನು ಎಂಬುದು ಎಲ್ಲ ಕಡೆಯಲ್ಲಿಯೂ ತಿಳಿದ ಮಾತಾಗಿದೆ. ಅಂತರ್ರಾಷ್ಟ್ರೀಯ ಜೀವನದಲ್ಲಿ ಆತ ಪ್ರಪಂಚದ ಎಲ್ಲ ರಾಷ್ಟ್ರಗಳೊಡನೆ ಸ್ನೇಹದಿಂದಲೂ ಶಾಂತತೆಯಲ್ಲಿಯೂ ನಡೆದುಕೊಳ್ಳಬೇಕು ಎಂಬ ಮೂಲಸಿದ್ಧಾಂತವನ್ನು ಮಂಡಿಸಿದ್ದಾನೆ. ಅದರಂತೆಯೆ ಪ್ರಪಂಚದ ಯಾವುದೇ ಮೂಲೆಯಲ್ಲಿ ದಾಸ್ಯವು ಉಳಿಯಬಾರದು ಎಂಬುದು ಆತನು ಸಾರಿದ ಈ ಶತಮಾನದ ಇನ್ನೊಂದು ಅದ್ವಿತೀಯವಾದ ಮಂತ್ರವಾಗಿದೆ. ದಾಸ್ಯವೆಂದ ಕೂಡಲೆ ಕೆಲಕೆಲವರು ಅದನ್ನು ಒಂದು ನಿರ್ದಿಷ್ಟ ಮತ್ತು ಸಂಕುಚಿತವಾದ ರೀತಿಯಲ್ಲಿ ಅರ್ಥಮಾಡಿಕೊಂಡು ತಮಗೆ ಅನುಕೂಲವಾಗುವಂತೆ ಅದನ್ನು ಅನ್ವಯಿಸಿಕೊಳ್ಳುತ್ತಾರೆ. ಆದರೆ ದಾಸ್ಯ ಎಂಬ ಶಬ್ದವನ್ನು ಒಂದು ಸಂಪೂರ್ಣವಾದ ಮತ್ತು ವ್ಯಾಪಕವಾದ ಅರ್ಥದಲ್ಲಿ ಮಾಡಿಕೊಳ್ಳುವದು ತೀರ ಉಚಿತವಾದ ಪ್ರಮೇಯ. ಸಾಂಸ್ಕೃತಿಕ ದಾಸ್ಯ ಎಂಬ ಒಂದು ವಿಶಾಲ ಕಲ್ಪನೆಯಲ್ಲಿ ಆ ವಿಚಾರವನ್ನು ವ್ಯಕ್ತಗೊಳಿಸಬಹುದು. ಸಂಸ್ಕೃತಿ ಎಂದ ಮೇಲೆ ಅದರಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ, ಸಂರಕ್ಷಕ, ನಾಗರಿಕ ಇವುಗಳೆ ಮೊದಲಾದ ಎಲ್ಲ ಬಗೆಯ ಉಪಾಂಗಗಳು

ಅಡಕವಾಗುವವು. ಇಂತಹ ಒಂದು ಬಂಧನದಲ್ಲಿ ಯಾರೂ ಉಳಿಯಬಾರದು; ಅವರಿಗೆ ತಿಳಿಯದೆಯೆ ಆಗಲಿ, ಅದು ಅವರಿಗೆ ಅನುಕೂಲ ಇಲ್ಲವೆ ಹಿತಕಾರಕ ಎಂಬ ಒಂದು ಬಗೆಯ ಆತ್ಮವಂಚನೆಯ ಅಜ್ಞಾನದ ಮೂಲಕವಾಗಿಯೆ ಆಗಲಿ, ಎಲ್ಲಿಯೂ ಇಂತಹ ದಾಸ್ಯವು ತಲೆಯೆತ್ತಿ, ಕಾಲೂರಿ ನಿಲ್ಲಬಾರದು ಎಂದು ನಾವು ಇದೀಗ ಸಾರಿ, ತಿಳಿಸಿ, ಸಹಾಯಮಾಡಿ ಸಾಧಿಸಿದ ಒಂದು ವೈಶಿಷ್ಟ್ಯವಾಗಿದೆ

ಅದರಂತೆಯೆ ರಾಷ್ಟ್ರೀಯ ವಲಯದಲ್ಲಿ ನಾವು ಹೊಕ್ಕು ವಿಚಾರ ಮಾಡ ಲಾಗಿ ಇಂದಿನ ಭಾರತೀಯನು, ಹಿಂದಿನ —ಅಂದರೆ ಕೇವಲ ನಾಲ್ಕೈದು ವರ್ಷ ಹಿಂದಿನ ಅನೇಕ ಪ್ರಗತಿವಿರೋಧಕ ಮತ್ತು ಅನಿಷ್ಟವಾದ ರೀತಿನೀತಿ ಗಳನ್ನು ತೊರೆದು ಹೊಸ ಪ್ರಯೋಗಗಳನ್ನು ಕೈಕೊಳ್ಳುವ ತವಕದಲ್ಲಿರುವದು ಕಂಡುಬರುತ್ತದೆ. ಪರಾವಲಂಬನನೆ ತನ್ನ ಪರಮಧರ್ಮ ಎಂದು ತಿಳಿದು ಕೊಂಡಿದ್ದ ಅವನ ಕೆಲ ಹಿರಿಯರಂತೆ ಹೆರವರು ಮಾಡಿದುದಕ್ಕೆ ತಾನು ಕೈಯೊಡ್ಡಿ, ತಲೆತಗ್ಗಿಸಿ ನಿಲ್ಲುವದರ ಬದಲು ಇಂದು ತಾನು ತನ್ನ ಮೇಲೆಯೆ ನಂಬಿಕೆಯನ್ನಿಟ್ಟುಕೊಂಡು, ತನ್ನ ಹಿತ, ತನ್ನವರ ರಕ್ಷಣೆ, ತನ್ನವರ ವಿಕಾಸ ಇವುಗಳಿಗಾಗಿ ಆತನು ಇಂದು ಹೆಣಗುವಂತೆ ತಿಳಿವನ್ನು ಪಡೆದಿದ್ದಾನೆ. ಅದಕ್ಕೆ ತಕ್ಕ ಸಾಮರ್ಥ್ಯ ಮತ್ತು ಅದರ ಫಲರೂಪವನ್ನು ಕಾಣುವ ಸಾಧನ ಗಳು ಅವನಲ್ಲಿ ಇನ್ನೂ ಇರಲಿಕ್ಕಿಲ್ಲ. ಆದರೆ ಒಂದು ದೃಷ್ಟಿಯನ್ನಂತೂ ಆತ ಪಡೆದಿದ್ದಾನೆ; ಒಂದು ಧ್ರುವವನ್ನಂತೂ ಆತ ನಿರ್ಧರಿಸಿಕೊಂಡಿದ್ದಾನೆ. ಇನ್ನು ಅದರ ಮಾರ್ಗದಲ್ಲಿ ನಡೆದು, ಅದನ್ನು ಪಡೆಯುವದಕ್ಕಾಗಿ ಪ್ರಯತ್ನಿಸುವದು ಅವನ ಕಾರ್ಯವಾಗಿದೆ. ಇತ್ತ ರಾಜಕೀಯ ತತ್ವಗಳನ್ನು ಕುರಿತು ವಿಚಾರ ಮಾಡಲಾಗಿ ಭಾರತೀಯನು ಇಂದಿನ ಕಾಲಕ್ಕೆ ಸರಿಯಾಗಿ ಆಧುನಿಕವಾದ, ಪ್ರಗತಿಶೀಲವಾದ ಮತ್ತು ಉತ್ಕರ್ಷಕ್ಕೆ ಉಪಯುಕ್ತವಾದ ಸಿದ್ಧಿಗಾಗಿ ಹೋರಾಡಬೇಕು ಎಂದು ಆತನು ಗೊತ್ತುಮಾಡಿಕೊಂಡಿದ್ದಾನೆ. ಮಾನವ ನಾಗಿ ಜನ್ಮವೆತ್ತಿದವನು ಪ್ರತಿಯೊಬ್ಬನು ಇನ್ನೊಬ್ಬನಿಗೆ ಸಮಾನನು; ಶಿಕ್ಷಣ, ಉದ್ಯಮ ಮತ್ತು ಅಧಿಕಾರಗಳು ಮುಂತಾದ ದೃಷ್ಟಿಯಿಂದ ಆತನು ರಾಷ್ಟ್ರ ದಲ್ಲಿ ಅವಿಭಾಜ್ಯ ಎಂಬ ಒಂದು ದರ್ಶನವನ್ನು ಆತ ಪಡೆದಿದ್ದಾನೆ. ಅದ ರಂತೆಯೆ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಮಾನವರೆಲ್ಲರೂ ಒಂದು

ಅವರಲ್ಲಿ ಜನ್ಮ, ಜಾತಿ ಇಲ್ಲವೆ ಧನ, ಪ್ರತಿಷ್ಠೆಗಳ ಮೂಲಕವಾಗಿ ಯಾವ ಭೇದವನ್ನೂ ಎಣಿಸಬಾರದು ಎಂಬ ಪ್ರಜಾಪ್ರಭುತ್ವದ ತಿರುಳನ್ನು ತನ್ನ ರಾಷ್ಟ್ರದ ವೇದವಾಕ್ಯವನ್ನಾಗಿ ಇಟ್ಟುಕೊಂಡಿದ್ದಾನೆ. ಹಿಂದಿನ ಕಾಲದ ಹಿರಿಮೆ, ಹಿರಿಯರ ಹೆಗ್ಗಳಿಕೆಗಳ ಮೇಲೆ ಇಂದು ಹೆಸರು ಪಡೆಯುವ ಹವ್ಯಾಸ, ಒಂದು ಪಂಗಡದವ ಇಲ್ಲವೆ ಒಂದು ಪ್ರದೇಶದವ ಎಂಬ ಹೆಮ್ಮೆಯಿಂದ ಇಂದು ತನ್ನ ಶ್ರೇಷ್ಠತೆಯನ್ನು ಸಾಧಿಸುವ ಹವಣು ಇವುಗಳೆಲ್ಲ ಮಾಯವಾಗಿ ಇಂದು ತನ್ನ ಶಕ್ತಿ ಮತ್ತು ತನ್ನ ಸಾಧನಗಳಿಂದ, ತನ್ನ ವಿವೇಕಕ್ಕೆ ತೋರಿದಂತೆ ಗೈಯುವ ಸೇವೆಯ ಮೇಲಿಂದಲೇ ಯಾವನೊಬ್ಬನ ಸಮಾಜದಲ್ಲಿಯ ಸ್ಥಾನದ ನಿರ್ಣಯ ವಾಗಬೇಕು ಎಂಬ ಧೋರಣೆಯನ್ನು ಒಪ್ಪಿಕೊಂಡಿದ್ದಾನೆ.

ಈ ರೀತಿಯಾಗಿ ಹಿನ್ನೆಲೆಯಲ್ಲಿ ಹಿಡಿದಿಟ್ಟುಕೊಂಡ ಒಂದು ದೊಡ್ಡ ಆದರ್ಶಕ್ಕೆ ತಕ್ಕಂತೆ ಇಂದಿನ ನಮ್ಮ ಬದುಕನ್ನು ನಾವು ಮಾರ್ಪಡಿಸಿಕೊಳ್ಳ ಬೇಕಾಗಿದೆ. ಪೂರ್ವಾಶ್ರಮದ ಅಂಟುಬೇನೆಗಳ ಪರಿಣಾಮವು ಅವು ದೂರ ವಾದ ಮೇಲೆ ಕೆಲಕಾಲ ಇರುವಂತೆ ಹಿಂದಿನ ಆಯುಷ್ಯದ ಅಭ್ಯಾಸದ ಪ್ರಭಾ ವವು ನಮ್ಮ ಇಂದಿನ ಜೀವನದ ಮೇಲೆ ಕಿಂಚಿತ್ಕಾಲ ಉಳಿಯುವದು ಅನಿ ವಾರ್ಯವಾಗಬಹುದು. ಆದರೆ ಆ ಬೇನೆಯನ್ನು ಹೋಗಲಾಡಿಸಿಕೊಳ್ಳ ಲಿಕ್ಕೆ ತಕ್ಕ ಔಷಧಿ ಮತ್ತು ಯೋಗ್ಯ ಪಥ್ಯವನ್ನು ನಾವು ಸ್ವೀಕರಿಸುವದಲ್ಲದೆ ಅದರ ಅಂಶವು ಪೂರ್ಣವಾಗಿ ಮಾಯಹೊಂದಿ ನಮ್ಮದೊಂದು ನವಜೀವನವೆ ನಿರ್ಮಾಣವಾಗಬೇಕಾದರೆ ನಾವು ಬೇರೆ ಕೆಲವೊಂದು ವಿಶಿಷ್ಟ ಕಾರ್ಯಗಳ ಕ್ರಮವನ್ನೆ ಅಂಗೀಕರಿಸುವಂತೆ ಇವೊತ್ತಿನ ನಮ್ಮ ಹೊಸಬಾಳಿಗೆ ತಕ್ಕಂತೆ ಮತ್ತು ಕಳೆದ ಕಾಲದ ಅನಿಷ್ಟ ಪ್ರಕೃತಿಯ ಪ್ರಭಾವವು ಮತ್ತೆ ನಮ್ಮ ಮೇಲೆ ಉಳಿಯದಂತೆ ನಾವು ಹಲಕೆಲವು ಮಹತ್ವದ ಸ್ಥಿತ್ಯಂತರಗಳನ್ನು ನಮ್ಮ ಸಮಾದಲ್ಲಿ ಮಾಡಿಕೊಳ್ಳುವದು ಅಗತ್ಯವಾಗಿದೆ. ಅಂತಹ ಸ್ಥಿತ್ಯಂತರ ಗಳಲ್ಲಿಯೆ ಒಂದು ನಿಶ್ಚಿತವಾದ ತಳಹದಿಯ ಮೇಲೆ, ಒಂದು ವಿಶಿಷ್ಟವಾದ ಆದರ್ಶವನ್ನಿಟ್ಟುಕೊಂಡು ಅಣಿಯಾಗುವ ಸಾಮಾಜಿಕ ಸಂಸ್ಥೆಗಳೂ ಬರುತ್ತವೆ.

ಹೀಗೆ ನಮ್ಮ ಯಾವುದೊಂದು ಸಾಂಸ್ಕೃತಿಕ ಸಂಸ್ಥೆಯ ಆದರ್ಶವು ನಮ್ಮ ಪ್ರಚಂಡ ಸಮಾಜದ ಆದರ್ಶವೆ ಆಗಿರಬೇಕೆಂಬ ಮಾತನ್ನು ನಾವು

ತಿಳಿದುಕೊಂಡಂತೆ ಆಯಿತು ಎಂದೆನ್ನಬಹುದು. ಭಾರತದ ಮೇಲಿರುವ ಇಂದಿನ ಹೊಣೆ, ಭಾರತೀಯರು ಮಾಡಬೇಕಾದ ಇಂದಿನ ಕಾರ್ಯ ಮತ್ತು ಭಾರತೀಯರಿಗೆ ಇಂದು ಇರುವ ಸೌಲಭ್ಯ ಇಲ್ಲವೆ ತೊಡಕುಗಳು ಇವುಗಳನ್ನರಿತು ನಮ್ಮ ಸಾಮಾಜಿಕ ಸಂಸ್ಥೆಗಳು ಭಾರತವನ್ನು ಒಂದು ಚೇತನಯುಕ್ತ, ಉತ್ಕೃಷ್ಟ ಮತ್ತು ಪ್ರಭಾವಿಯಾದ ರಾಷ್ಟ್ರವನ್ನಾಗಿ ಮಾಡಬೇಕಾದರೆ ಅದರಲ್ಲಿ ತಮ್ಮ ಪಾತ್ರವು ಎಂತಹದು ಎಂಬುದನ್ನು ಅವು ತಿಳಿದುದಾಗಿರಬೇಕು. ಒಂದು ಶಿಕ್ಷಣಕೇಂದ್ರವೆ ಆಗಿರಲಿ, ಒಂದು ಕಾರ್ಯಾಲಯವೆ ಆಗಿರಲಿ, ಒಂದು ವ್ಯಾಪಾರಮಂಡಲವೇ ಆಗಿರಲಿ, ಒಂದು ಸಾಹಿತ್ಯಿಕ ಸಂಘವೆ ಆಗಿರಲಿ, ಭಾರತವು ಇಂದು ತನ್ನೆದುರಿನಲ್ಲಿ ಇಟ್ಟುಕೊಂಡಿರುವ ಧ್ಯೇಯವನ್ನು ಸಾಧಿಸಲಿಕ್ಕೆಂದು ತಾನು ಮಾಡಬಹುದಾದ ಸೇವೆ ಯಾವುದು ಎಂಬುದನ್ನು ಅರಿತುಕೊಂಡು ಆರಂಭವಾಗಿರಬೇಕು. ಅಂದರೆ ಮಾತ್ರ ಅದು ತನ್ನ ಅಸ್ತಿತ್ವವನ್ನು ಸಾರ್ಥಕಗೊಳಿಸಿದಂತೆ ಆಗಬಹುದು. ರಾಷ್ಟ್ರೀಯ ಜೀವನವು ಹೇಗೆ ಉಜ್ವಲವಾಗಬೇಕು ಎಂದು ನಾವು ಇಟ್ಟುಕೊಂಡಿರುವೆವೋ, ಅದರಲ್ಲಿ ಹಾಗೆಯೆ ಪ್ರಾಂತೀಯ ಮತ್ತು ಪ್ರಾದೇಶಿಕ ಜನಾಂಗಗಳು ಸಹಭಾಗಿಗಳಾಗಿರಬೇಕೇ ಹೊರತು, ವಿರೋಧಕವಾಗಿ ಅಲ್ಲ ಅಲ್ಲವೆ ಅಸಹಕಾರಿಗಳಾಗಿ ಅಲ್ಲ. ಕೆಲವೊಂದು ವಿಷಯಗಳಲ್ಲಿ ಮತ್ತು ಅಲ್ಪಕಾಲದಲ್ಲಿ ಪ್ರಾಂತೀಯ ಮತ್ತು ರಾಷ್ಟ್ರೀಯ ಜೀವನವು ಪರಸ್ಪರ ಭಿನ್ನವಾಗಿರುವಂತೆ ಕಾಣಬಹುದು; ಆದರೆ ಅಂತಹ ಭೇದವು ಕಾಣುವದು ಬಹುತರವಾಗಿ ಒಂದು ಬಗೆಯ ಸಂಧಿಕಾಲದಲ್ಲಿ ದೊಡ್ಡ ದೃಷ್ಟಿಯಿಂದ ವಿಚಾರಮಾಡಿದಾಗ್ಗೆ ಮತ್ತು ಧೀರ್ಘಕಾಲೀನ ಸ್ಥಿತಿಯನ್ನು ಪರೀಕ್ಷಿಸಿ ನೋಡಲಾಗಿ ಪ್ರಾಂತೀಯ, ರಾಷ್ಟ್ರೀಯ ಮತ್ತು ಅಂತರ್ರಾಷ್ಟ್ರೀಯ ಜೀವನವು ಪರಸ್ಪರ ಪೋಷಕವಷ್ಟೆ ಅಲ್ಲದೆ ಒಂದರಿಂದೊಂದು ಪರಿಪೂರ್ಣವೂ ಆಗಿರುವದು ಕಂಡುಬರುವದು.

ಅಂತೆಯೆ ಇಂದು ನಮ್ಮ ಕನ್ನಡನಾಡಿನಲ್ಲಿ ಕಂಡುಬರುವ ವಿಶಿಷ್ಟವಾದ ಪ್ರಾದೇಶಿಕ ಮತ್ತು ತಾತ್ಪೂರ್ತಿಕ ಸಮಸ್ಯೆಗಳು ಯಾವುವೆ ಇರಲಿ, ಅವುಗಳ ಸಂಗಡವಲ್ಲಿಯೆ ನಾವು ಇಡಿಯ ರಾಷ್ಟ್ರದ ತೊಂದರೆ–ತೊಡಕುಗಳನ್ನು ಅರಿತು ಅವುಗಳನ್ನು ದೂರಮಾಡುತ್ತ, ರಾಷ್ಟ್ರಜೀವನದಲ್ಲಿ ನಾವು ಇಟ್ಟುಕೊಂಡಿರುವ ಧ್ಯೇಯಗಳತ್ತ ಸಾಗಲಿಕ್ಕೆ ಹೆಣಗುವದು ಅವಶ್ಯವಾಗಿದೆ. ಇಂದು ಅಂತ

ರಾಷ್ಟ್ರೀಯ ಜೀವನದಲ್ಲಿ ಅನೈಸರ್ಗಿಕ ಮತ್ತು ಘಾತಕ ಎಂದೆಷ್ಟೇ ಕಂಡು ಬರಲಿ, ಕೃತ್ರಿಮ ಮತ್ತು ವಿರೋಧಕ ಎಂಬ ಟೀಕೆಯನ್ನೇ ಪಡೆದಿರಲಿ, ಒಂದು ಘಟಕ ಎಂದು ಎಲ್ಲ ರಾಷ್ಟ್ರಗಳ ಗಣನೆಯಾಗುತ್ತದೆ. ಆಡಳಿತ, ಅರ್ಥಶಾಸ್ತ್ರ ಪರಂಪರೆಗಳು, ಚರಿತ್ರ, ಭೂಗೋಲಭಾಗ ಮತ್ತು ಸಂರಕ್ಷಣೆಗಳೆ ಮೊದಲಾದ ವಿಷಯಗಳಲ್ಲಿ ನಾವು ಪ್ರಪಂಚದ ವಿವಿಧರಾಷ್ಟ್ರಗಳನ್ನು ಒಂದೊಂದಾಗಿ ನೋಡು ತ್ತೇವೆ. ಅಂತೆಯೆ ಹೊಸದಾಗಿ ಪ್ರಾಪ್ತವಾಗಿರುವ ಇಂದಿನ ನಮ್ಮ ಸ್ವತಂತ್ರ ಜೀವನದಲ್ಲಿ ನವೀನವಾಗಿ ಮತ್ತೆ ಹುಟ್ಟಿಕೊಂಡಿರುವ ನಮ್ಮ ಹೊಣೆಗಾರಿಕೆಯ ಪರಿಸ್ಥಿತಿಯಲ್ಲಿ, ಧ್ಯೇಯ ಮತ್ತು ಹೊಣೆಗೆ ತಕ್ಕಂತೆ ಇಂದು ನಮ್ಮಲ್ಲಿ ಸಾಕಷ್ಟು ಶಕ್ತಿ ಮತ್ತು ಸಾಧನಗಳಿಲ್ಲದ ಸನ್ನಿವೇಶದಲ್ಲಿ ಮೊದಲು ನಮ್ಮ ರಾಷ್ಟ್ರವನ್ನು ನಾವು ಭದ್ರವಾಗಿ ಕಟ್ಟಿಕೊಳ್ಳುವದು ಅಗತ್ಯವಾಗಿದೆ. ಅಂತೆಯೆ ರಾಷ್ಟ್ರೀಯ ಸಮಸ್ಯೆಗಳ ಪರಿಹಾರವನ್ನು ದೂರಮಾಡಲಿಕ್ಕೆ ನಾವು ಮೊದಲು ತಕ್ಕ ಯೋಗ್ಯತೆಯನ್ನು ಪಡೆದು, ಪ್ರಯತ್ನವನ್ನು ಮಾಡಬೇಕು. ಅದರ ಮೂಲಕವಾಗಿ ಪ್ರಾದೇಶಿಕ ಮತ್ತು ವಿಶಿಷ್ಟವಾದ ಕೆಲವು ಪ್ರಶ್ನೆಗಳು ಬಿಡಿಸದೆ ಹಾಗೆಯೆ ಉಳಿದರೂ ಇಡಿಯ ರಾಷ್ಟ್ರದ ದೃಷ್ಟಿಯಿಂದ ನೋಡಲಾಗಿ ಅವು ಗಳನ್ನು ಬಿಡಿಸಲಿಕ್ಕೆ ಕೂಡ ನಮಗೆ ಹೆಚ್ಚಿನ ಸಾಮರ್ಥ್ಯ ಬಂದಿರುವದರಿಂದ, ಆ ಮಟ್ಟಿಗೆ ನಮಗೆ ಅನುಕೂಲವೆ ಆಯಿತು ಎಂಬುದು ತಿಳಿದು ಬರುವದು.

ಇದರಿಂದ ಒಂದು ಭಾಗದ ಇಲ್ಲವೆ ಒಂದು ಪಂಗಡದ ಬಲವು ಕಡಿಮೆಯಾಗಿ, ಅದರ ಮೂಲಕವಾಗಿ ಇಡಿಯ ದೇಶಕ್ಕೆ ಅನಾಹೃತ ನಷ್ಟ ವಾಗಬಹುದು ಎಂಬ ಒಂದು ವಾದವನ್ನು ನಾವು ಯೋಚಿಸಬೇಕಾಗುವದು. ಕಟ್ಟುವದು ಎಂಬ ಒಂದು ಶಬ್ದವನ್ನು ನೋಡಿದಕೂಡಲೆ ಅದನ್ನು ನಾವು ಬುಡದಿಂದ ಮಾಡಿದರೆ ಮಾತ್ರ ಅದು ನಿಜವಾದ ಕಟ್ಟಡ ಎನಿಸಬಹುದು. ಮತ್ತು ಅದು ಬಹುಕಾಲ ತಡೆಯಬಹುದು ಎಂಬ ಸರಳ ಅರ್ಥದ ಗಂಭೀರ ವಿಚಾರವು ನಮಗೆ ಹೊಳೆಯದಿರದು. ಅದರಂತೆಯೆ ಒಂದು ಅಂಗವನ್ನು ಅನಾರೋಗ್ಯದ ಇಲ್ಲವೆ ಅಸಮರ್ಥ ಸ್ಥಿತಿಯಲ್ಲಿರಿಸುವದರಿಂದ, ಇತ್ತ ಆ ರಂಗವು ಕುಸಿಯಬಹುದಲ್ಲದೆ, ಅತ್ತ ಅದರಿಂದ ಇಡಿಯ ದೇಹದ ಬಲಕ್ಕೆ ದೊರೆಯಬಹುದಾದ ಶಕ್ತಿಯ ಕಾಣಿಕೆಯು ದೊರೆಯದಂತಾಗಿ ಇಡಿಯ ದೇಹವು ಶಕ್ತಿಹೀನ ಆಗುವ ಸಂಭವವೂ ಇರುತ್ತದೆ. ಹಾಗೆ ಕಡಿಮೆ

ಯಾಗುವ ಇಲ್ಲವೆ ಕುಂದುವ ಶಕ್ತಿಯು ದೇಶವು ಕ್ರಮವಾಗಿ ತನ್ನ ಮನಸ್ಸನ್ನೂ ಚೇತನವನ್ನೂ ಕಳೆದುಕೊಳ್ಳಲೂಬಹುದು. ಅಂತೆಯೆ ಪ್ರತಿಯೊಂದು ಭಾಗದ ಇಲ್ಲವೆ ಪ್ರದೇಶದ ಆರೋಗ್ಯ, ಪ್ರಗತಿ ಮತ್ತು ಉತ್ಕರ್ಷದತ್ತ ಹೆಣಗುವದು ಹೆಚ್ಚು ಸಮಂಜಸ ಎಂಬ ಮಾತನ್ನು ಒಪ್ಪುವದಕ್ಕೆ ಯಾರೂ ವಿರೋಧಿಸಲಿಕ್ಕಿಲ್ಲ.

ಅಂತೆಯೆ ನಮ್ಮ ಪ್ರಾಂತದಲ್ಲಿ ಇನ್ನೂ ಹೆಚ್ಚು ಸ್ಪಷ್ಟವಾದ ಶಬ್ದಗಳಲ್ಲಿ ಹೇಳಬೇಕಾದರೆ ನಮ್ಮ ಭಾಷಾಪ್ರದೇಶದಲ್ಲಿ ನಾವು ಯಾವ ಸಮಸ್ಯೆಗಳನ್ನು ವಿಶಿಷ್ಟವಾಗಿ ಎದುರಿಸುತ್ತಿರುವೆವು? ಅವುಗಳನ್ನು ಪರಿಹರಿಸಲಿಕ್ಕೆ ಯಾವ ಉಪಾಯಗಳು ಸರಿಯಾದವು? ಆ ಉಪಾಯಗಳನ್ನು ಕೈಕೊಳ್ಳಲಿಕ್ಕೆ ನಾವು ಯಾವ ಕ್ರಮವನ್ನು ಮತ್ತು ಸಾಧನೆಯನ್ನು ಕಂಡಿರುವೆವು? ಎಂಬಿವೇ ಮೊದಲಾದ ವಿಷಯಗಳನ್ನು ಮೊದಲು ತಿಳಿದುಕೊಳ್ಳಬೇಕು. ಆ ಮೇಲೆ ಇಡಿಯ ರಾಷ್ಟ್ರದ ಸಂಗಡ ಸಮವಾಗಿ ಎದುರಿಸುತ್ತಿರುವ ಸಮಸ್ಯೆಗಳು ಯಾವುವು? ಅವುಗಳನ್ನು ಪರಿಹರಿಸಿ ರಾಷ್ಟ್ರದಲ್ಲಿ ಉತ್ತಮಸ್ಥಿತಿ ಮತ್ತು ಪ್ರಪಂಚದಲ್ಲಿ ಉನ್ನತಸ್ಥಾನಗಳನ್ನು ಕಲ್ಪಿಸಿಕೊಳ್ಳಲಿಕ್ಕೆ ನಾವು ಎಂತಹ ಧೋರಣೆಯನ್ನು ಅನುಸರಿಸುತ್ತಿದ್ದೇವೆ ಎಂಬುದನ್ನು ಅರಿತುಕೊಳ್ಳಬೇಕು. ಹೀಗೆ ವಿಶಿಷ್ಟವಾದ ಪ್ರಾದೇಶಿಕ ಇಲ್ಲವೆ ಸ್ಥಳಿಕ ಪ್ರಶ್ನೆಗಳು ಮತ್ತು ಅವುಗಳನ್ನು ಬಿಡಿಸಿ ಅಲ್ಲಿ ಕಂಡುಕೊಳ್ಳಬಹುದಾದ ಒಂದು ಆದರ್ಶಸ್ಥಿತಿ; ರಾಷ್ಟ್ರೀಯವಾಗಿ ಅನುಭವಿಸುತ್ತಿರುವ ಕಷ್ಟ-ಕಾರ್ಪಣ್ಯಗಳು ಅವುಗಳನ್ನು ದೂರಮಾಡಿ, ಅಲ್ಲಿ ಸ್ಥಾಪಿಸಬೇಕೆಂದು ಮಾಡಿದ ಒಂದು ಸತ್ಯಜೀವನ ಇವುಗಳ ಸ್ಪಷ್ಟ ಕಲ್ಪನೆಯನ್ನು ನಾವು ಮಾಡಿಕೊಳ್ಳಬೇಕು. ಪ್ರಾದೇಶಿಕವಾಗಿ ನಾವು ಆಡದೆ, ಅನುಭವಿಸುತ್ತಿರುವ ಅಂತರ್ಜಾತೀಯ ತೊಳಲಾಟದ ಮಾತುಗಳು; ಮಾಡದೆಮುಂದುವರಿಯುತ್ತಿರುವ ಅಂತರ್ಪ್ರಾದೇಶಿಕ ಸೆಣಸಾಟದ ಕೆಲಸಗಳು; ಮಾತನಾಡುತ್ತ ಮೆತ್ತಗೆ ಹಿಂದೆ ಜಾರುತ್ತಿರುವ ಹೊಣೆಗಾರಿಕೆಯ ಕರ್ತವ್ಯಗಳು, ಇಂತಹ ಸಮಸ್ಯೆಗಳನ್ನು ಅರಿಯಬೇಕು; ಚರ್ಚಿಸಬೇಕು. ಇಡಿಯ ರಾಷ್ಟ್ರದಲ್ಲಿ ಇಂತಹ ಅದೇಕೆ ಅದೂ ಹೆಚ್ಚು ಅನಿಷ್ಟಪರಿಣಾಮದ ಮತ್ತು ಘನಿಷ್ಠ ಪ್ರಮಾಣದ ಸಮಸ್ಯೆಗಳಿದ್ದರೂ ಅವುಗಳನ್ನು ಪರಿಹರಿಸಿ ನಾವು

ಹೇಗೆ ಇಂದು ನಮ್ಮ ಆದರ್ಶವನ್ನು ಸ್ಪಷ್ಟಪಡಿಸಿಕೊಂಡು ಮುಂದುವರಿಯುತ್ತಿರುವೆವೊ ಹಾಗೆಯೆ ಕನ್ನಡ ನಾಡಿನಲ್ಲಿಯೂ ಎತ್ತುಗಡೆಯು ಸಾಗುವಂತೆ ಮಾಡುವದು ಇಂದಿನ ನಮ್ಮ ಕಾರ್ಯವಾಗಿದೆ; ಹೊಣೆಯೆನಿಸಿದೆ.

ಪ್ರಪಂಚದಲ್ಲಿ ಭೌಗೋಲಿಕ ಸ್ವಾವಲಂಬನ, ಆರ್ಥಿಕ ಪರಿಪೂರ್ಣತೆ, ಸಾಂಸ್ಕೃತಿಕ ವೈಶಿಷ್ಟ್ಯ ಮುಂತಾದ ಕಾರಣಗಳಿಂದ ರಾಷ್ಟ್ರಗಳನ್ನು ನಿರ್ಮಿಸಿಕೊಂಡು, ರಕ್ಷಿಸಿಕೊಂಡು, ಪೋಷಿಸಿಕೊಂಡು, ಮುಂದುವರಿಸಿಕೊಳ್ಳುವಂತೆಯೆ, ಒಂದು ರಾಷ್ಟ್ರದಲ್ಲಿಯೂ ಆಡಳಿತದ ಅನುಕೂಲ, ಅಭಿಮಾನದ ಸಮನ್ವಯ ಮತ್ತು ಸಾಂಸ್ಕೃತಿಕ ಪ್ರಗತಿಗಳ ಸಲುವಾಗಿ ಭಾಷೆಯ ತಳಹದಿಯ ಮೇಲೆ ಇಂದು ನಮ್ಮ ರಾಜ್ಯಗಳನ್ನು ಮಾರ್ಪಡಿಸಿಕೊಳ್ಳುವದು ಅಗತ್ಯವಾಗಿದೆ ಎಂಬ ಅಂಶವನ್ನು ನಾವು ತಿಳಿಯಬೇಕು; ತಿಳಿಸಿಕೊಡಬೇಕು. ರಾಷ್ಟ್ರಕಾರ್ಯದಲ್ಲಿ ಜಾತಿ, ಜನ್ಮ ಮತ್ತು ಸಾಮಾಜಿಕ ಸ್ಥಾನಮಾನ ಇವುಗಳ ಮೇಲೆ ಪಂಗಡಗಳನ್ನಾಗಲಿ ಪ್ರತಿಷ್ಟೆಯನ್ನಾಗಲಿ ಮಾಡಿಕೊಳ್ಳುವದು ಹಾನಿಕಾರಕ ಮತ್ತು ಪ್ರಗತಿವಿರೋಧಕ ಎಂಬ ವಿಷಯವನ್ನು ಮನದಟ್ಟುಮಾಡಿಕೊಂಡು ಇಂದು ನಾವು ವರ್ಗಹೀನ ಮತ್ತು ಜಾತ್ಯತೀತವಾದ ಒಂದು ಸಮಾಜವನ್ನು ರಚಿಸಿಕೊಳ್ಳಲಿಕ್ಕೆ, ಅದರಂತೆಯ ನಮ್ಮ ಸಮಾಜಸಂಘಟನೆಯಲ್ಲಿಯೂ ಕುಲ, ಗೋತ್ರ, ಜಾತಿ, ಒಳಬಳಗ ಇಂತಹ ವರ್ಗಗಳ ಮೇಲೆ ಪಕ್ಷಪಂಗಡಗಳನ್ನು ಕಟ್ಟಿಕೊಂಡು ಕಚ್ಚಾಡದೆ ಲೌಕಿಕವಾದ, ಆರ್ಥಿಕ ಮತ್ತು ರಾಜಕೀಯ ವಿಚಾರಗಳ ಮೇಲೆ ನಿಂತಿರುವ ಧ್ಯೇಯಗಳಿಗನುಸರಿಸಿ ಕಟ್ಟಿಕೊಂಡಿರುವಂತೆಯೆ ನಾವು ಕೂಡ ನಮ್ಮ ನಾಡಿನಲ್ಲಿ ಮುಂದುವರಿದರೆ ಒಂದು ಭದ್ರವಾದ ಮತ್ತು ಬಂಧುರವಾದ ಜನಾಂಗವನ್ನು ನಿರ್ಮಿಸಬಹುದು ಎಂಬ ಸಿದ್ಧಾಂತವನ್ನು ಅರ್ಥಮಾಡಿಕೊಂಡು, ಕಾರ್ಯದಲ್ಲಿ ತರಲಿಕ್ಕೆ ಪ್ರಯತ್ನ ಮಾಡಬೇಕಾದುದು ಅಗತ್ಯವಾಗಿದೆ.

ಇಂತಹ ಮಹತ್ವದ ಮತ್ತು ರಾಷ್ಟ್ರಪೋಷಕವಾದ ವಿಷಯಗಳತ್ತ ಓದುಗರ ಮನಸ್ಸನ್ನು ಸೆಳೆಯುವ ಮತ್ತು ಒಲಿಸುವ ಆದರ್ಶವನ್ನು ಗ್ರಂಥ ಭಂಢಾರದಂತಹ ಸಾಮಾಜಿಕ ಸಂಘಸಂಸ್ಥೆಗಳು ಇಟ್ಟುಕೊಂಡಿರಬೇಕು. ಕೇವಲ ಮನರಂಜನೆಯ ನಾಲ್ಕು ಪುಸ್ತಕಗಳನ್ನು ಯಾವ ಅಂಗಡಿಯಲ್ಲಾದರೂ ನಾವು ಕಾಣಬಹುದು; ಎಂತಹ ಕಾರ್ಯಾಲಯದಲ್ಲಿಯೂ ನೋಡ

ಬಹುದು. ಆದರೆ ರಾಷ್ಟ್ರನಿರ್ಮಾಣದಂತಹ ಹೊಣೆಯು ಮತ್ತು ಹಿರಿಯ ಕಾರ್ಯದಲ್ಲಿ ನೆರವಾಗಬೇಕಾದರೆ ಗ್ರಂಥಭಂಡಾರಗಳೆ ಮೊದಲಾದ ಸಾಮಾಜಿಕ ಸಂಸ್ಥೆಗಳು ತಮ್ಮ ಸಾಧನಸಂಗ್ರಹ, ತಮ್ಮ ಸೇವಾಭಾವನೆ ಮತ್ತು ದೃಷ್ಟಿ ಇವುಗಳಲ್ಲಿ ಉಚ್ಚವಾದ ಮಟ್ಟವನ್ನು ಇಟ್ಟುಕೊಂಡಿರಬೇಕು. ತಮ್ಮ ವಾಚಕರು ಅಪೇಕ್ಷಿಸುವದು ಒಂದು, ತಾವು ನೀಡುವದು ಇನ್ನೊಂದು ಹೀಗಾದರೆ ಅಂತಹ ಗ್ರಂಥಾಲಯವು ಅಲ್ಪಕಾಲದಲ್ಲಿಯೆ ತನ್ನ ಆಕರ್ಷಣೆಯನ್ನು ಕಳೆದು ಕೊಳ್ಳುವದು. ಆ ಸಮಾಜದ ಧ್ಯೇಯಗಳನ್ನು ಪೂರೈಸಲಿಕ್ಕೆ ಬೇಕಾಗುವ ಬೌದ್ಧಿಕ ಸಹಾಯ ಮತ್ತು ಸಾಧನಗಳನ್ನೆಲ್ಲ ಒದಗಿಸುವಂತಹ ಧೋರಣೆ ಯನ್ನು ಗ್ರಂಥಭಂಡಾರಗಳು ಯಾವಾಗಲೂ ಇಟ್ಟುಕೊಂಡಿರುವದು ಅವುಗಳ ಮೂಲಮಂತ್ರ ಎಂದೆನ್ನಬಹುದು.

ಇಂತಹ ದೊಡ್ಡ ಗುರಿಯನ್ನಿಟ್ಟುಕೊಳ್ಳುವದರಿಂದ ತೊಂದರೆ ಯುಂಟಾಗುವದು ಹಣ ಮತ್ತು ಸೇವಕರ ಕಡೆಯಿಂದ. ಪ್ರಪಂಚದ ಎಲ್ಲ ಜ್ಞಾನವನ್ನು, ಆ ಜ್ಞಾನವನ್ನು ಶೀಘ್ರವಾಗಿಯೂ, ಸುಲಭವಾಗಿಯೂ ಪಡೆಯು ವಂತಹ ಎಲ್ಲ ಸಾಧನಸಲಕರಣೆಗಳನ್ನು ಇಂತಹ ಸಂಸ್ಥೆಯಲ್ಲಿ ತಂದು ದೊರಕಿಸ ಬೇಕೆಂದರೆ ಅದಕ್ಕೆ ಕುಬೇರನ ಬೊಕ್ಕಸವಾದರೂ ಸಾಲಲಿಕ್ಕಿಲ್ಲ ಎಂಬ ಒಂದು ಸಾಮಾನ್ಯವಾದ ಮಾತಂತೂ ಎಲ್ಲರಿಗೂ ಸ್ಪಷ್ಟವಾಗಿ ತಿಳಿದಿರುತ್ತದೆ. ಆದರೆ ತನ್ನ ವಾಚಕವೃಂದ, ತನ್ನ ಪರಿಸ್ಥಿತಿ, ತನ್ನ ಸಹಾಯಕರು–ದಾನಿಗಳು ತನ್ನ ಪ್ರಯತ್ನ ಇವುಗಳಲ್ಲಿ ಒಂದು ಸಾಮರಸ್ಯವನ್ನು ಇಟ್ಟುಕೊಂಡು ಉತ್ಸಾಹ ದಿಂದಲೂ, ಅವಿರತವಾಗಿಯೂ ದುಡಿದರೆ ಎಂತಹ ಭವ್ಯವೆನಿಸುವ ಆದರ್ಶ ವನ್ನಾದರೂ ಕರತಲದಲ್ಲಿ ಕಾಣಬಹುದು ಎಂಬ ಮಾತನ್ನು ನಾವು ನೆನಪಿ ನಲ್ಲಿಡಬೇಕು.

ಅಂತೆಯೆ ಗ್ರಂಥಭಂಡಾರಗಳ ಯಶಸ್ಸು–ಅಂದರೆ ಅವುಗಳು ತಮ್ಮ ಆದರ್ಶವನ್ನು ಪಡೆಯುವ ಗುಟ್ಟು–ಪುಸ್ತಕಗಳು, ಭಂಡಾರಿಗ ಮತ್ತು ವಾಚಕ ಈ ತ್ರಿವೇಣೀಸಂಗಮದ ಮೇಲೆ ಅವಲಂಬಿಸಿದೆ. ವಾಚಕರು ತಮ್ಮ ಉನ್ನತವಾದ ಮತ್ತು ಉದಾತ್ತವಾದ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲಿಕ್ಕೆ ಸಾಧನವಾಗ ಬಹುದಾದ ಸಂಗತಿಗಳನ್ನು ಅರಿಯಲಿಕ್ಕೆ ಅಲ್ಲಿಗೆ ಬಂದವರಾಗಿರಬೇಕು. ಅದರಲ್ಲಿ ಮನರಂಜನೆಯಂತಹ ಸಾಮಾನ್ಯವಾಗಿ ಕಾಣುವ ಆದರೂ ಒಂದು

ಜನಾಂಗದ ಪರಿಪೂರ್ಣತೆಗೆ ಪೋಷಕವಾಗುವಂತಹ ವಿಷಯವೂ ಅಡಕ ವಾಗಿರಬೇಕು. ಅದರಂತೆಯೆ ತಮ್ಮ ಮನಸ್ಸನ್ನು ಶುಚಿಗೊಳಿಸಿ, ಹಿರಿಯ ಹಿಗ್ಗನ್ನೂ, ಹೆಗ್ಗುರಿಯನ್ನು ಹೊಂದುವ ಹುಮ್ಮಸ್ಸನ್ನು ಪಡೆಯುವ ಉದ್ಯೋಗದಿಂದ ಇಂತಹ ಸಂಸ್ಥೆಗಳತ್ತ ನಡೆದು ಬರುವ ಪ್ರವೃತ್ತಿಯುಳ್ಳವ ರಾಗಿರಬೇಕು. ಹಾಗೆಯೆ ಅವರ ಆ ಆಶೆ–ಆಕಾಂಕ್ಷೆಗಳನ್ನು ಪೂರೈಸಲಿಕ್ಕೆ ಸಾಕಾಗಬಹುದಾದ ಮತ್ತು ತನ್ನ ಅಳವಿನಲ್ಲಿರುವ ಸಾಮುಗ್ರಿಗಳನ್ನು ಸುಗಮ ವಾಗಿಯೂ, ಶೀಘ್ರವಾಗಿಯೂ ಒದಗಿಸಿಕೊಡುವ ಮನೋಭಾವ, ಶಿಕ್ಷಣ, ಮತ್ತು ಸಲಕರಣೆಗಳುಳ್ಳ ಭಂಡಾರಿಗ ವರ್ಗವೂ ಅಷ್ಟೆ ಅವಶ್ಯಕವಾದ ಒಂದು ಘಟಕವಾಗಿಯೆ ಇದೆ. ತನ್ನ ಆಡಳಿತದಲ್ಲಿದ್ದ ವಿಷಯಸಂಗ್ರಹದ ಪೂರ್ಣ ಅರಿವು ಮತ್ತು ಅದನ್ನು ಆದಷ್ಟು ಹೆಚ್ಚು ಉಪಯುಕ್ತವಾದ ಮತ್ತು ಆಕರ್ಷವಾದ ರೀತಿಯಲ್ಲಿ ಅರ್ಪಿಸುವ ಹಂಬಲ ಇವುಗಳು ಯಾವ ಸಾಮಾಜಿಕ ಸಂಸ್ಥೆಯಲ್ಲಿಯ ಆಗಲಿ, ಅಲ್ಲಿಯ ಆಡಳಿತಗಾರರಲ್ಲಿ ಮತ್ತು ಕಾರ್ಯವಾಹ ಕರಲ್ಲಿ ಇರುವ ಆವಶ್ಯಕ ಮತ್ತು ಅಮೌಲ್ಯವಾದ ಗುಣಗಳು.

ಕೊನೆಯದಾದರೂ ಹೆಚ್ಚಿನ ಜೀವಾಳದ ಅಂಶವೆಂದರೆ ಪುಸ್ತಕಸಂಗ್ರಹ· ಭಂಡಾರದಲ್ಲಿ ಪುಸ್ತಕಗಳಿಲ್ಲದಿದ್ದರೆ ಅದೆಂತಹ ಪುಸ್ತಕಭಂಡಾರ ಎಂದು ಯಾರಾದರೂ ನಗೆಯಾಡಬಹುದು. ಆದರೆ ಪುಸ್ತಕಗಳಿದ್ದರೂ ಅದು ಎಷ್ಟೋ ಸಾರೆ ಪುಸ್ತಕಾಲಯವಾಗಿರುವದಿಲ್ಲ ಎಂಬ ವಿಷಯವನ್ನು ನಾವು ಇಲ್ಲಿ ತಿಳಿದು ಕೊಳ್ಳಬೇಕಾಗಿದೆ. ಆ ವಾಚಕ ವರ್ಗಕ್ಕೆ ಬೇಕಾದ ಪುಸ್ತಕಗಳು ಅಲ್ಲಿ ಲಭ್ಯ ವಾಗಿರದಿದ್ದರೆ ಬೇರೆ ಯಾವ ಗಂಭೀರ ಗ್ರಂಥಗಳಿದ್ದು ಏನು ಪ್ರಯೋಜನ ? ಮೊದಮೊದಲು ಬೇಡಿದಂತಹ ಎಲ್ಲ ಬಗೆಯ ಗ್ರಂಥಗಳನ್ನು ಒದಗಿಸುವದು ಎಲ್ಲ ಭಂಡಾರಗಳಿಗೆ ಸಾಧ್ಯವಾಗದಿದ್ದರೂ, ತಾವು ಓದಿಸಬೇಕೆಂದು ಮಾಡಿರುವ ಉಚ್ಚಕೋಟಿಯ ಪುಸ್ತಕಗಳತ್ತ ಓದುಗರ ಮನಸ್ಸನ್ನು ಎಳೆಯುವಂತೆ ಅವರಿಗೆ ಓದುವ ಚಟವನ್ನು ಹಚ್ಚುವದಕ್ಕಾದರೂ ಅವರು ಬೇಡಿದ ಪುಸ್ತಕ ಗಳನ್ನು ಕೆಲಕಾಲವಾದರೂ ಕೊಡುವದು ಅಪರಿಹಾರ್ಯವಾಗಿದೆ. ಅದರಂತೆಯೆ ತನ್ನ ಶಕ್ತಿಮೀರಿದ ಬೆಲೆಯ ಇಲ್ಲವೆ ಸಂಖ್ಯೆಯ ಪುಸ್ತಕಗಳನ್ನು ಒಂದು ವಾಚಕರ ಪಂಗಡವು ಬೇಡತೊಡಗಿದರೆ, ತನ್ನಲ್ಲಿರದಿದ್ದರೂ ಬೇರೆ ಕಡೆಯಿಂದ, ಬೇರೆ ರೀತಿಯಿಂದ ಪಡೆದುಕೊಡುವ ತೀವ್ರವಾದ ಆಕಾಂಕ್ಷೆಯುಳ್ಳ ಭಂಡಾರಿಗನು

ಅಲ್ಲಿದ್ದರೆ—ಆ ಭಂಡಾರದಲ್ಲಿ ವಾಚಕರಿಗೆ ಬೇಕಾದ ಯಾವ ಹೊತ್ತಿಗೆಯೂ ದೊರೆಯುತ್ತದೆ ಎಂದಂತೆಯೆ ಸೈ.

ಅಂತೆಯೆ ಆದರ್ಶಗ್ರಂಥಾಲಯ ಎಂದು ಅಂತಹ ಸಂಸ್ಥೆಗೆ ಮಾತ್ರ ನಾವು ಅನ್ನಬಹುದು; ಕೇವಲ ಅಂದಚೆಂದದ ಕಪಾಟು—ಫಲಕಗಳಾಗಲಿ; ಕುರ್ಚಿ ಮೇಜುಗಳ ಥಳಕಾಗಲಿ; ಸವಿನುಡಿಯ—ಮೃದುನಗೆಯ ಕಾರ್ಯದರ್ಶಿಗಳ ಕೌತುಕದ ಆದರೂ ಕಾರ್ಯಹೀನ ಮಾತುಗಳಾಗಲಿ ಅಲ್ಲ. ಅವು ಬೇಕಾಗುತ್ತದೆ ನಿಜ. ಒಪ್ಪತಕ್ಕ ಮಾತು. ಆದರೆ ಅವುಗಳೆಲ್ಲದರ ಹಿಂಬದಿಯಲ್ಲಿ ಗಟ್ಟಿಯಾಗಿರಬೇಕಾದುದು ಸಹಾಯಕ ಪ್ರವೃತ್ತಿ; ಹುಮ್ಮಸಿನ ಹೋರಾಟ; ಹಿರಿಯ ಗುರಿಯನ್ನು ಹೊಂದಬೇಕೆನ್ನುವ ಹಂಬಲ. ಮೊದಲು ನಾವು ಆ ವಿಷಯವಾಗಿ ಆದರ್ಶವಾದ ಸಂಸ್ಥೆಗಳನ್ನು ಮಾಡಿಕೊಳ್ಳಲಿಕ್ಕೆ ಉಚ್ಚವಾದ ಆದರ್ಶವನ್ನು ಇಟ್ಟುಕೊಂಡಿರಬೇಕು. ನಮ್ಮ ಸಂಕಲ್ಪ ಹಿರಿದಾಗಿರಬೇಕು. ಆ ಹಿರಿಯ ಸಂಕಲ್ಪವನ್ನು ಪಡೆಯಬೇಕು, ಈಡೇರಿಸಿಯೆ ತೀರಬೇಕು, ಆ ಉಚ್ಚವಾದ ಮತ್ತು ಬಲವಾದ ಸಿದ್ಧಿಯನ್ನು ಸಾಧಿಸಿಯೆ ಬಿಡಬೇಕು ಎಂಬ ಧ್ಯೇಯವುಳ್ಳವಾಗಿರಬೇಕು. ಆ ಸಿದ್ಧಿಗೆ ಸಾಧನೆಯು ಅಗತ್ಯ. ಸಾಧನವೆಂದರೆ—ಗ್ರಂಥಭಂಡಾರದ ಮಟ್ಟಿಗೆ ಹೇಳುವದಾದರೆ—ಒಂದು ಕಡೆಯಿಂದ ಶುದ್ಧವಾದ ಮತ್ತು ನಮ್ರವಾದ ಭಾವನೆಯುಳ್ಳ ಸೇವಕ ವರ್ಗ ಅಥವಾ ಭಂಡಾರಿಗ ವರ್ಗ; ಇನ್ನೊಂದು ಕಡೆಯಿಂದ ಗ್ರಂಥಗಳು, ಪತ್ರಿಕೆಗಳು, ಧ್ವನಿಮುದ್ರಿಕೆಗಳು, ನಕ್ಷೆಗಳು, ಚಿತ್ರಗಳು, ಚಿತ್ರಪಟಗಳು ಇವೆ ಮೊದಲಾದ ಸಲಕರಣೆಗಳು ಅದರಲ್ಲಿ ಸಮಾವೇಶಗೊಳ್ಳುತ್ತವೆ. ತನ್ನ ಹೊಣೆಗೆ ತಕ್ಕಂತೆ ತಕ್ಕ ಶಿಕ್ಷಣ ಮತ್ತು ತಕ್ಕ ಮನೋಭಾವವುಳ್ಳ ಸೇವಕ ವರ್ಗ ಸಾಮಾಜಿಕ ಸಂಸ್ಥೆಯ ಆಧಾರಸ್ತಂಭ ಎಂಬ ಮಾತನ್ನು ಎಷ್ಟು ಹೇಳಿದರೂ ಕಡಿಮೆಯೆ ಸಾಮಾಜಿಕ ಸಂಸ್ಥೆಗಳಲ್ಲಿ ಒಂದು ವಿಶಿಷ್ಟವಾದ ಅಂಶವೆಂದರೆ ಅಲ್ಲಿರುವ ವೈಯಕ್ತಿಕ ಸಂಪರ್ಕ ಮತ್ತು ಮಾನವೀಯ ಸಂಬಂಧ. ಈ ಬಗೆಯ ಸುಗಮವಾದ, ಸೌಹಾರ್ದಮಯವಾದ ಸೇವೆಯು ಇಲ್ಲದ ಸಾಮಾಜಿಕ ಸಂಘಟನೆಯು ಅಲ್ಪಾವಧಿಯಲ್ಲಿಯೆ ಒಂದು ವ್ಯಾಪಾರೀ ಸಂಘವಾಗಿಯಾಗಲಿ, ಒಂದು ನಿರ್ಜೀವ ಸಂಸ್ಥೆಯಾಗಿಯಾಗಲಿ ಪರಿಣಮಿಸಬಹುದು. ವೈಯಕ್ತಿಕವಾಗಿಯೂ, ಹೆಚ್ಚಿನ ಆತ್ಮೀಯತೆಯಿಂದಲೂ ಇಲ್ಲಿಯ ಸೌಕರ್ಯಗಳು ಸಿಗುತ್ತಿರುವವೆಂದೇ

ಇಂತಹ ಸಂಸ್ಥೆಗಳ ಸ್ಥಾನ ಸಮಾಜದಲ್ಲಿ ಹಿರಿದಾದುದಿರುತ್ತದೆ; ಇಂತಹ ಸ್ಥಳಗಳಲ್ಲಿ ಕಾರ್ಯಮಾಡುತ್ತಿರುವ ಜನರಿಗೆ ಹಿರಿಯ ಗೌರವವಿರುತ್ತದೆ.

ಇಂತು ಗ್ರಂಥಾಲಯದ ಆದರ್ಶ ಶುದ್ಧವಾದ, ಸಂಪೂರ್ಣವೆನಿಸುವ, ಸೇವೆ. ಅದು ಅಲ್ಲಿ ಓದಲಿಕ್ಕೆ ಬಂದ ವಾಚಕರನ್ನು ಸರಿಯಾಗಿಯೂ ಸಂತೋಷದಲ್ಲಿಯೂ ಬರಮಾಡಿಕೊಳ್ಳುವದರಲ್ಲಿಯೆ ಆಗಲಿ; ಅವರಿಗೆ ಕುಳಿತುಕೊಳ್ಳಲಿಕ್ಕೆ ಅಭಿಮಾನಪಡಲಿಕ್ಕೆ ಒಳ್ಳೆಯ ಅಭಿರುಚಿಯ ಮತ್ತು ಅನುಕೂಲತೆಯ ಆಸನಗಳನ್ನು, ಪುಸ್ತಕಗಳ ಕಪಾಟುಗಳೇ ಮೊದಲಾದ ಉಪಸ್ಕರಗಳನ್ನು ಒದಗಿಸುವದರಲ್ಲಿಯೆ ಆಗಲಿ; ಪುಸ್ತಕಗಳು-ಪತ್ರಿಕೆಗಳೆ ಮುಂತಾದ ಜ್ಞಾನ ಸಾಧನಗಳನ್ನು ಪೂರೈಸುವದರಲ್ಲಿಯೆ ಆಗಲಿ; ವಾಚಕರು ಕೇಳಿದ ಅನೇಕ ಪ್ರಶ್ನೆಗಳ-ಸಂದೇಹಗಳ ನಿವಾರಣೆಯನ್ನು ಆದಷ್ಟು ತೀವ್ರವಾಗಿಯೂ ದಕ್ಷತೆಯಿಂದಲೂ ಮಾಡುವದರಲ್ಲಿಯೆ ಆಗಲಿ; ಇಡಿಯ ಗ್ರಂಥಾಲಯದ ಆಡಳಿತವನ್ನು ವ್ಯವಸ್ಥಿತರೀತಿಯಲ್ಲಿಯೂ ಸಮಾಧಾನಕಾರಕವಾಗಿಯೂ ನೋಡಿಕೊಳ್ಳುವದರಲ್ಲಿಯೆ ಆಗಲಿ-ಒಂದು ಹಿರಿಯ ಮಟ್ಟದ-ಹಸನಾದ ಗುರಿಯ-ಸೇವೆ.

ಇಂತಹ ಆದರ್ಶಗಳನ್ನು ಇಟ್ಟುಕೊಂಡು ಮುಂದುವರಿಯುವ ಯಾವ ಸಂಸ್ಥೆಯಾದರೂ ಆದರ್ಶಸಂಸ್ಥೆಯಾಗಬಹುದು; ಅದರಲ್ಲಿ ಸಾಮಾಜಿಕ ಸಂಸ್ಥೆಗಳಲ್ಲಿಯೂ ಈ ಗುಣವನ್ನು ಹುರುಪಿನಿಂದಲೂ, ಜಾಗ್ರತಿಯಿಂದಲೂ ಕಾಪಾಡಿಕೊಂಡು ಬಂದರೆ ಅವು ಕೇವಲ ತಮ್ಮ ಸಾಧಕತೆಯನ್ನು ಪಡೆದಂತಾಗುವದಷ್ಟೆ ಅಲ್ಲದೆ ರಾಷ್ಟ್ರರಚನೆಯ ಕಾರ್ಯದಲ್ಲಿ ಅವು ತಮ್ಮ ಪಾಲಿನ ಕಾರ್ಯವನ್ನು ಮಾಡಿದಂತೆಯೂ ಆಗುವದು. ಆರ್ಥಿಕ ದುರ್ದೆಸೆಯಿರುವ ಈಗಿನ ಪರಿಸ್ಥಿತಿಯಲ್ಲಿ, ನಮ್ಮ ನಾಡಿನಲ್ಲಿ ಈಗ ಇನ್ನೊನ್ಮೆ ಅಂತಹ ಉಚ್ಚ ವರ್ಗದ ಕಾರ್ಯಕರ್ತರ ಒಂದು ಪಡೆ; ಅಂತಹ ಉನ್ನತವಾದ ಧೋರಣೆಯುಳ್ಳ ಸಂಸ್ಥೆಗಳು ನಿರ್ಮಾಣವಾಗಬೇಕು; ನೆಲೆಯಾಗಿ ನಿಲ್ಲಬೇಕು.



# ೨. ಇತಿಹಾಸ



ಇತಿಹಾಸವೆಂದರೆ ಆದದ್ದು, ಆಗಿಹೋದ ವಿಷಯವು. ಮನುಷ್ಯನು ಅದನ್ನು ಎರಡನೆಯವರಿಗೆ ಹೇಳಿಯಾಗಲಿ, ಇನ್ನೊಂದು ಮಾಧ್ಯಮದ ಮೇಲೆ ನಮೂದಿಸಿಯಾಗಲಿ ಇಡದೆ ಹೋದರೆ, ಅದು ಆದ ವಿಷಯದಾಗಿಯೆ ಮಾಯವಾಗುವದು. ಇಂದು ನಮಗೆ ಕತೆಯ ರೂಪದಲ್ಲಿ ಬೇರೆಯವರಿಂದ ಕೇಳುವ ಸಂಗತಿಯಾಗಲಿ, ಚರಿತ್ರೆಯ ರೂಪದಿಂದ ಅನೇಕ ಬಗೆಯ ಸಾಧನಗಳಲ್ಲಿ ನೋಡಿ, ಓದಿ, ತಿಳಿಯುವ ಸಾಮುಗ್ರಿಯಾಗಲಿ, ಘಟಿಸಿಹೋದ ಲಕ್ಷೋಪಲಕ್ಷ ಸನ್ನಿವೇಶಗಳಲ್ಲಿ ಕೆಲವು ಮಾತ್ರ. ಪ್ರಪಂಚದೊಳಗಿನ ಎಲ್ಲ ರಾಷ್ಟ್ರಗಳ, ಎಲ್ಲ ಜನಾಂಗಗಳ, ಎಲ್ಲ ಪ್ರಾದೇಶಿಕ ವಿಭಾಗಗಳ, ಎಲ್ಲ ಭೌಗೋಲಿಕ ಮಂಡಲಗಳ, ಎಲ್ಲ ಕಾಲಖಂಡಗಳ ಮತ್ತು ಎಲ್ಲ ವಸ್ತುಗಳ ಚರಿತ್ರೆಯನ್ನು ತಿಳಿಯುವದೆಂದರೆ ಅದೊಂದು ಅಸಾಧ್ಯವಾದ ಪ್ರಯತ್ನವೆಂದೇ ಹೇಳಬಹುದು. ಅದಕ್ಕೆ ಕಾರಣ ಎಂದರೆ ಗತಿಸಿದ ಎಷ್ಟೋ ಸುದ್ದಿಗಳಲ್ಲಿ ಕೇವಲ ಒಂದು ಸಣ್ಣ ಅಂಶವನ್ನು ಮಾತ್ರ ಮನುಷ್ಯನು ತನ್ನ ಮಿಕ್ಕ ಬಾಂಧವರಿಗೆ ಬಾಯಿಂದ ಹೇಳಿ ಕಿವಿಯಿಂದ ಕೇಳಿಸುತ್ತಾನೆ; ಆದಕ್ಕೂ ಸಣ್ಣ ಪ್ರಮಾಣದಲ್ಲಿ ಆತನು ಕಲ್ಲು, ಕಬ್ಬಿಣ, ಚರ್ಮ, ಕಟ್ಟಿಗೆ, ಕಾಗದ ಇವೇ ಮೊದಲಾದ ಉಪಕರಣಗಳ ಮೇಲೆ ಬರೆದಿಟ್ಟು ಅದನ್ನು ತನ್ನ ಹಿಂದಿನವರಿಗೆ ದೊರೆಯುವಂತೆ ಮಾಡಿದ್ದಾನೆ.

ಹೀಗೆ ಇತಿಹಾಸದಲ್ಲಿ ನಾವು ಸ್ಥೂಲವಾಗಿ ಎರಡು ವಿಧಗಳನ್ನು ಮಾಡಬಹುದು. ಒಂದು ಅಲಿಖಿತ ಇತಿಹಾಸ; ಇನ್ನೊಂದು ಲಿಖಿತ. ಪ್ರಪಂಚದೊಳಗಿನ ಎಲ್ಲ ಜನರು ಮೊದಲು ಮಾತನಾಡುವದನ್ನು ಕಲಿಯುವ ಮುಂಚೆ ತಮ್ಮ ಹೊಟ್ಟೆಗಾಗಿ ಹೋರಾಡುವದನ್ನು ಆರಂಭಿಸಿದರಷ್ಟೆ. ಆದರೆ ಒಮ್ಮೆ ಮಾತನಾಡುವದನ್ನು ಅವರು ಕಲಿತ ಕೂಡಲೆ ಅದರಲ್ಲಿ ತಮ್ಮ ದೈನಂದಿನ ಜೀವನದೊಳಗಿನ ಸುಖದುಃಖದ ಸಂಗತಿಗಳನ್ನು ಮಾತನಾಡತೊಡಗಿದರು. ಇದೇ ವಾಙ್ಮಯವಾಗಿ ಪರಿಣಮಿಸಿದೆ ಎಂದು ಸಾಮಾನ್ಯವಾಗಿ ತಿಳಿದುಕೊಳ್ಳಬಹುದು. ಇಂದು ತಮ್ಮ ಗ್ರಾಮೀಣ ಜೀವನದಲ್ಲಿ ಬಹುಮುಖವಾಗಿಯೂ

ಆಕರ್ಷಕವಾಗಿಯೂ ಜೀವಂತವಾಗಿಯೂ ಅಸ್ತಿತ್ವದಲ್ಲಿರುವ ಸಾಹಿತ್ಯವೆಲ್ಲ ಹೆಚ್ಚಾಗಿ ವಾಙ್ಮಯುವೆಂದೇ ಜ್ಞಾತವಾಗಿರುವದು. ಎಲ್ಲ ವಾಙ್ಮಯವು ಸಾಹಿತ್ಯ ವಾಗಿರದಿದ್ದರೂ ಎಲ್ಲ ಸಾಹಿತ್ಯವು ವಾಙ್ಮಯವಾಗಿರಬಹುದಾಗಿದೆ. ಇತಿಹಾಸದ ಪೂರ್ವಪಾತ್ರವು ಕೂಡ ಇಂತಹ "ಸಂಗತಿ" ಯೆ ಆಗಿರಲಿಕ್ಕೆ ಸಾಕು. ಆಗಿಹೋದ ವಿಷಯುವನ್ನು ಹೇಳುವದು ಒಂದು ಕತೆಯಂತೆ ಜನರಿಂದ ಕಟ್ಟಲ್ಪಟ್ಟಿತು; ಹೇಳಲ್ಪಟ್ಟಿತು. ಒಂದು ಕತೆಯಂತೆಯೆ ಆ ಹೇಳಿಕೆಯು ಕೂಡ ಜನರ ಮನಸ್ಸನ್ನು ಆಕರ್ಷಿಸಿತು; ವಿಕಸಿಸಿತು. ಅದು ಲಿಖಿತವಾಗಿರದಿದ್ದರೂ, ಇಂದು ಲಾವಣಿಗಳು, ನಾಣ್ಣುಡಿಗಳು, ಬೀಸುವ ಹಾಡುಗಳು, ರಾಶಿಯ ಪದ, ಉದಯರಾಗ, ಜನಪದ ಗೀತೆಗಳೆ ಮೊದಲಾದ ಪ್ರಕಾರಗಳಲ್ಲಿ ಜೀವಂತ ವಾಗಿರುವ ವಾಙ್ಮಯುದಂತೆ, ವೀರಕತೆ, ಮಾಸತಿಯರ ಕತೆ, ವೀರಕವನ, ಯುದ್ಧಗೀತಗಳೆ ಮೊದಲಾದ ರೀತಿಯಲ್ಲಿ ನಮ್ಮ ಪೂರ್ವಜರು ಗೈದ ಪರಾ ಕ್ರಮದ ಸಂಗತಿಗಳು ಕೂಡ ಚರಿತ್ರೆಯಾಗಿ ಉಳಿದಿವೆ. ಅಂತಹ ಅವಶೇಷ ಗಳಂತಿದ್ದ ಎಷ್ಟೋ ವದಂತಿಗಳು, ಸ್ಥಳಪುರಾಣಗಳು, ಹಿರಿಯರ ಸ್ಮರಣ-ಸನ್ನಿವೇಶಗಳು ಇಂದಿಗೂ ಅಧಿಕೃತವಾಗಬಹುದಾದ ಇತಿಹಾಸಕ್ಕೆ ಮೂಲ ಸಾಮುಗ್ರಿಯಾಗಿ ಪರಿಣಮಿಸುತ್ತಿವೆ. ಅಂತೆಯೆ ಲಿಖಿತವಾಗುವ ಮುಂಚೆ ಕೂಡ ಇತಿಹಾಸವು ಅಸ್ತಿತ್ವದಲ್ಲಿ ಅಮೂರ್ತ ಸ್ವರೂಪದಲ್ಲಾದರೂ ಇದ್ದಿತು ಎಂಬ ಮಾತನ್ನು ನಾವು ಇಲ್ಲಿ ಮೊದಲು ಸ್ಪಷ್ಟವಾಗಿ ತಿಳಿದುಕೊಂಡಿರಬೇಕು.

ಆ ಮೇಲೆ ಬರೆಯುವ ಕಲೆಯು ಶೋಧಿತವಾಗಿ, ಅದು ಆಚರಣೆಯಲ್ಲಿ ಬಂದಿತು. ಬರೆಹವು ಅಸ್ತಿತ್ವದಲ್ಲಿ ಬರಬೇಕಾದರೆ ಅದಕ್ಕೊಂದು ಲಿಪಿ, ಅದಕ್ಕೊಂದು ಭಾಷೆ, ಅದಕ್ಕೊಂದು ಪರಂಪರೆ ಅವಶ್ಯ ಎಂಬ ಮಾತನ್ನು ಬೇರೆಯಾಗಿ ಹೇಳಬೇಕಾಗಿಲ್ಲ. ಲಿಪಿಯು ಭಾಷೆಯ ಒಂದು ಕೃತ್ರಿಮ ಸಂಕೇತ ವಷ್ಟೆ. ಇಂದು ನಾವು ಲಿಪಿಯೆಂದು ಬಳಸುವ ಬೇರೆಬೇರೆ ಭಾಷೆಗಳ ಕೃತ್ರಿಮ ಸಂಕೇತಗಳು ದೇಶ, ಕಾಲ, ಪರಿಸ್ಥಿತಿಗಳಿಗೆ ಅನುರೂಪವಾಗಿ ಪರಿ ವರ್ತನ ಹೊಂದುತ್ತ ಇಂದಿನ ಒಂದು ರೂಪಕ್ಕೆ ಬಂದಿರುವದು ಎಲ್ಲರಿಗೂ ಗೊತ್ತಿದ್ದ ವಿಷಯುವಾಗಿದೆ. ಮೊದಮೊದಲು ಒಂದು ವಸ್ತುವನ್ನಾಗಲಿ, ಒಂದು ವ್ಯಕ್ತಿಯನ್ನಾಗಲಿ ಇನ್ನೊಬ್ಬರಿಗೆ ತಿಳಿಸಬೇಕಾದರೆ ಚಿತ್ರ ಇಲ್ಲವೆ ಅನ್ಯ ರೀತಿಯ ಸಂಕೇತವೆಂದು ಆರಂಭವಾದುದು ಇಂದು ಒಂದು ನಿಯಮಾವಳಿಗೆ

ಬದ್ಧವಾದ ಒಂದು ಪರಂಪರೆಯನ್ನು ಅನುಸರಿಸುವ, ಆದರೂ ಕೃತ್ರಿಮವಾದ ಸಂಕೇತವೆ ಲಿಪಿಯಾಗಿ ನಿಂತಿದೆ. ಈ ಸ್ಥಿತ್ಯಂತರದಲ್ಲಿ ಆ ಲಿಪಿಯು ವಸ್ತು ಮತ್ತು ವ್ಯಕ್ತಿಗಳನ್ನು ಪ್ರಕಟಿಸುವಂತೆಯೆ, ವಿಚಾರವನ್ನು ವ್ಯಕ್ತಗೊಳಿಸುವ ಒಂದು ಮಾರ್ಗವನ್ನು ಹುಡುಕಲಾಯಿತು. ಇದೇ ಭಾಷೆಯು ಇಲ್ಲವೆ ನುಡಿಯ ಆರಂಭವೆನ್ನಬಹುದು. ಪರಸ್ಪರ ಸಂಪರ್ಕದ ಕೃತ್ರಿಮ ಸಾಧನವಾದ ಭಾಷೆಯು ಇಲ್ಲವೆ ಮಾತು ಕ್ರಮವಾಗಿ ಒಂದು ಸರ್ವಮಾನ್ಯವಾದ ರೂಪವನ್ನು ತಳೆದಂತೆಯೆ, ಅದನ್ನು ಕೇವಲ ಮಾತಿನಲ್ಲಿ ಅಥವಾ ನುಡಿಯಲ್ಲಿ ವ್ಯಕ್ತಗೊಳಿಸುವದಕ್ಕೆ ನಿಲ್ಲದೆ ಇನ್ನೊಂದು ಕೃತ್ರಿಮ ಸಂಕೇತವಾದ ಲಿಪಿಯಲ್ಲಿ ಬರೆದಿಡುವ ಕಾರ್ಯವು ಆರಂಭವಾಯಿತು. ಹೀಗೆ ಆಡುವ ಮಾತುಗಳು ಕತೆಯಾಗಿ, ಇತಿಹಾಸವಾಗಿ, ಹಾಡುಗಳಾಗಿ, ನಾಟಕಗಳಾಗಿ ಪರಿಣಮಿಸುತ್ತಿದ್ದಂತೆಯೆ, ಅವುಗಳಿಗೆಲ್ಲ ಭಾಷೆ ಮತ್ತು ಲಿಪಿಗಳ ಕಟ್ಟುಗಳು ತಗಲಿ ಅವುಗಳು ಮುಂದೆ ಒಂದು ಉಚ್ಚಮಟ್ಟದ ಬರೆಹಗಳಾಗತೊಡಗಿದವು. ಮನುಷ್ಯನು ಮುಂದೆ ಈ ಬರೆದಿಟ್ಟ ಕೃತಿಗಳ ಮುಖಾಂತರವಾಗಿ ಪ್ರಪಂಚದ ಜ್ಞಾನವನ್ನು ಪಡೆದು, ಅವುಗಳಿಂದ ಅನೇಕಮುಖವಾಗಿ ಪ್ರೇರಣೆಯನ್ನಾಗಲಿ, ಉದ್ರೇಕವನ್ನಾಗಲಿ ಪಡೆದು ತಾನು ಅದನ್ನು ಮಿಕ್ಕಿಸುವ ಕೃತಿಗಳ ಶೋಧವನ್ನು, ರಚನೆಯನ್ನು ಮಾಡುವ ಸೆಣಸಾಟದಲ್ಲಿ ತೊಡಗಿದನು. ಈ ಬಗೆಯ ಪ್ರಯತ್ನವು ಪರಾಕಾಷ್ಠೆಯನ್ನು ಪಡೆಯಬೇಕಾದರೆ ಆ ಕಾಲದ ಮಾನವಸಮಾಜವು ಒಂದು ಉನ್ನತವಾದ ಮಟ್ಟವನ್ನು ಜೀವನದ ವಿವಿಧರಂಗಗಳಲ್ಲಿಯೂ ಮುಟ್ಟಿರಲಿಕ್ಕೆ ಬೇಕಾಗುವದು. ಅಂತೆಯೆ ಪ್ರಪಂಚದ ಇತಿಹಾಸದಲ್ಲಿ ಒಳ್ಳೆಯ ಸಾಹಿತ್ಯ, ಉಚ್ಚಕೋಟಿಯ ಜೀವನಕ್ರಮ, ಆದರ್ಶ ಪುರುಷವರ್ಗ ಇವೆಲ್ಲ ಕಾಣುವದು ಆ ಆ ಕಾಲಖಂಡದ ಏಳ್ಗೆಯಲ್ಲಿಯೆ; ಅದರಂತೆಯ ಒಂದು ಸಮಾಜದ ಉತ್ಕರ್ಷವಾಗುವದು ಕೂಡ ಅಸ್ತಿತ್ವದಲ್ಲಿದ್ದ ಸ್ಥಿತಿಯ ಅರಿವುಂಟಾಗಿ ನಾವು ತಾತ್ಕಾಲಿಕ ವಾತಾವರಣದಲ್ಲಿ ಎಂತಹ ಹಿರಿಯ ಹೊಣೆಯ ಬದುಕನ್ನು ಸಾಗಿಸಿಕೊಂಡಿರಬೇಕು ಎಂಬ ಚಿತ್ರಗಳನ್ನು ತೋರಿಸುವ ಸಾಹಿತ್ಯಕೃತಿಗಳಿಂದ ಎಂಬ ಮಾತನ್ನು ಇಲ್ಲಿ ಹೇಳಬಹುದು.

ಮನುಷ್ಯನ ಇತಿಹಾಸದಂತೆಯೆ, ಮನುಷ್ಯನ ಶಿಕ್ಷಣ, ಮನುಷ್ಯನ ಬೌದ್ಧಿಕ ಕ್ಷುಧೆಯ ಪರಿಹಾರ, ಮನುಷ್ಯನ ಉಚ್ಚವಿಚಾರಗಳ ಆವಿಷ್ಕರಣಗಳು

ಆಗುವ ಗ್ರಂಥಾಲಯದ ಇತಿಹಾಸವೂ ಆ ಕ್ರಮದಲ್ಲಿಯೇ ಸಾಗಿ ಇಂದು ನಮಗೆ ಉಪಲಬ್ಧವಾಗಿರುವದು. ಗ್ರಂಥರಚನೆಯಾಗುವ ಮೊದಲು ಭಾಷೆಯು ಜನನವಾಗಿರಲಿಕ್ಕೆ ಬೇಕು ಎಂಬ ವಿಷಯವಂತೂ ಸ್ವಯಂಸ್ಪಷ್ಟವಾದುದು. ಗ್ರಂಥರಚನೆಯಾಗದೆ ಗ್ರಂಥಾಲಯ ರಚನೆಯಾಗಬಹುದೆ ಎಂಬದೊಂದು ವಿಷಯವನ್ನು ಇಲ್ಲಿ ಯೋಚಿಸಬಹುದು. ಗ್ರಂಥರಚನೆಯಾಗುವದಕ್ಕಿಂತ ಮುಂಚೆ, ಅಂದರೆ ಸ್ಥೂಲರೂಪದಲ್ಲಿ ಒಂದು ಪುಸ್ತಕವನ್ನು ಬರೆಯುವದಕ್ಕಿಂತ ಮೊದಲು, ಅದಕ್ಕೊಂದು ಭಾಷೆಯ ಸಂಕೇತವನ್ನು ಕೊಟ್ಟು, ಅದನ್ನು ಪೀಳಿಗೆಯಿಂದ ಪೀಳಿಗೆಯು ಸ್ಮರಣಮಾರ್ಗವಾಗಿ ಜೀವಂತ ಇಡುವದಕ್ಕೆ ಬರುವದಲ್ಲವೆ? ಅಂತಹ ಪುಸ್ತಕಗಳು ಇಂದಿಗೂ ಕೂಡ ಅಸ್ತಿತ್ವದಲ್ಲಿರುವವು ಎಂದರೆ ಯಾರಿಗೂ ಆಶ್ಚರ್ಯವಾಗುವ ಕಾರಣವಿಲ್ಲ. ಈ ಸಂದರ್ಭದಲ್ಲಿ ಪುಸ್ತಕ ಇಲ್ಲವೆ ಗ್ರಂಥ ಎಂದರೆ ಆಧುನಿಕ ರೂಪದಲ್ಲಿ ಮುದ್ರಿತವಾಗಿ, ಗ್ರಥಿತವಾಗಿ ಕಾಣುವ ಹೊತ್ತಿಗೆಯೆಂದು ಮಾತ್ರ ತಿಳಿಯದೆ, ವಿಚಾರಕ್ರಾಂತಿಯನ್ನಾಗಲಿ, ಯೋಚನಾ ಪ್ರೇರಣೆಯನ್ನಾಗಲಿ ಉಂಟುಮಾಡುವ ಒಂದು ಜ್ಞಾನಕಿರಣವೆಂಬರ್ಥದಲ್ಲಿ ತಿಳಿದುಕೊಂಡರೆ ಮೇಲಿನ ಮಾತು ಮತ್ತು ವಾದವು ಅರ್ಥಪೂರ್ಣವಾಗುವದು. ಅದೇ ವಿಷಯವನ್ನು ಸ್ಪಷ್ಟಗೊಳಿಸುವ ಉದ್ದೇಶದಿಂದ ಭಾರತದ ಉಚ್ಚತಮ ಗ್ರಂಥಗಳಾದ ಅಥವಾ ವಿಚಾರಸಂಕಿರಣಗಳಾದ ವೇದ-ಉಪನಿಷತ್ತು-ಆಗಮ-ಸಂಹಿತೆ-ಬ್ರಾಹ್ಮಣ-ಆರಣ್ಯಕ-ಪುರಾಣ - ತಂತ್ರಗಳೆ ಮೊದಲಾದ ವಿಷಯಗಳನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳಬೇಕು. ಬರೆದಿಡುವ ಹವ್ಯಾಸದಲ್ಲಿ ವಿಶ್ವಾಸವಿಲ್ಲವೆಂದೊ, ಬರೆದಿಡುವ ಕಲೆಯು ಗೊತ್ತಿರದ ಮೂಲಕವಾಗಿಯೊ, ಬರೆದಿಟ್ಟ ಹೊತ್ತಿಗೆಗಳು ಹಾಳಾಗಿರಬಹುದೆಂದೊ ಮೊನ್ನೆ ಮೊನ್ನಿನವರೆಗೆ ಈ ಎಲ್ಲ ನಮ್ಮ ಅಮೌಲ್ಯವಾದ ಸಾಹಿತ್ಯವು ರಚಿತವಾಗಿದ್ದರೂ ಸೂಕ್ಷ್ಮಕಾಯವಾದ-ಸ್ಮರಣ ಗ್ರಂಥವಲ್ಲಿಯೇ-ಉಳಿದಿದ್ದಿಲ್ಲವೆ? ಅಂತೆಯೆ ವೇದಗಳ ನೆನಪು ತಪ್ಪದೆಯೂ ಸಂಪೂರ್ಣವಾಗಿಯೂ ಇರುವ ಒಬ್ಬ ವ್ಯಕ್ತಿಯು ಆಗಿನ ಕಾಲದಲ್ಲಿ ಮತ್ತು ಅಂತಹ ಸಂದರ್ಭದಲ್ಲಿ ಓಡಾಡುವ ಗ್ರಂಥಾಲಯವೆನ್ನಿಸಿಕೊಂಡರೆ ಅದರಲ್ಲಿ ಅಂತಹ ಆಶ್ಚರ್ಯವೇನು? ಮೊದಲಿನ ಕಾಲದ ಅಷ್ಟಾವಧಾನಿಗಳು ಮತ್ತು ಶತಾವಧಾನಿಗಳು ಮೊದಲಾದ ಜನರು ಇಂದಿನ ಮಹಾ

ಗ್ರಂಥಭಂಡಾರಿಗಳಿಗಿಂತ ಹೆಚ್ಚಿನ ಗೌರವಕ್ಕೆ ಪಾತ್ರರಾಗಿದ್ದರೆ ಅದೇನೂ ಅಯೋಗ್ಯವಲ್ಲ.

ಅಂತೆಯೆ ಅಂತಹ ಗ್ರಂಥಾಲಯಗಳನ್ನು, ಅಂದರೆ ಓಡಾಡುವ ಗ್ರಂಥಾಲಯಗಳನ್ನು ನೀವು ಪ್ರಪಂಚದ ಮೊದಲ ಗ್ರಂಥಭಂಡಾರಗಳೆಂದು ತಿಳಿಯಬಹುದು. ಇದು ಕೇವಲ ಭಾರತದಲ್ಲಿಯೆ ರೂಢವಾಗಿದ್ದ ಪದ್ಧತಿಯಾಗಿರಲಿ, ಅನ್ಯಭಾಗಗಳಲ್ಲಿಯೂ ಅಸ್ತಿತ್ವದಲ್ಲಿದ್ದ ಆಚರಣೆಯಾಗಿರಲಿ, ಇತಿಹಾಸದ ದೃಷ್ಟಿಯಿಂದ ವಿಚಾರ ಮಾಡುವಾಗ್ಗೆ ಇಂತಹ ವ್ಯವಸ್ಥೆಯಿದ್ದ ಕಾಲದ ಈ ವ್ಯಕ್ತಿಗಳೆ ಜಗತ್ತಿನ ಗ್ರಂಥಭಂಡಾರಗಳ ಆದ್ಯಪ್ರವರ್ತಕರೆಂದೂ, ಗ್ರಂಥಭಂಡಾರಿಗರ ಮೂಲ ಪುರುಷರೆಂದೂ ತಿಳಿಯಬಹುದು.

ಆದರೆ ಇಂದಿನ ಸಂದರ್ಭದಲ್ಲಿ ನಾವು ಈ ಬಗೆಯ ಗ್ರಂಥಾಲಯಗಳ ಇತಿಹಾಸ,ಪ್ರಕಾರ ಮತ್ತು ಅಂತರ್ವ್ಯವಸ್ಥೆ ಮೊದಲಾದ ಸಂಗತಿಗಳನ್ನು ತಿಳಿದುಕೊಳ್ಳಬೇಕಾಗಿರದೆ, ಆಧುನಿಕವೆನ್ನಿಸಬಹುದಾದ, ಅದಕ್ಕೆ ಸಮೀಪವೆನ್ನಿಸಬಹುದಾದ ಗ್ರಂಥಭಂಡಾರಗಳನ್ನು ಕುರಿತು ಅರಿತುಕೊಳ್ಳಬೇಕಾಗಿದೆ. ಈ ದೃಷ್ಟಿಯಿಂದ ವಿಚಾರ ಮಾಡಲಾಗಿ ಎಷ್ಟೋ ಸಂದರ್ಭಗಳಲ್ಲಿ ಗ್ರಂಥಭಂಡಾರಗಳೆಂದರೆ ಕೇವಲ ಪುಸ್ತಕಗಳನ್ನು ಸಂಗ್ರಹಿಸಿಟ್ಟ ಸದನಗಳೆಂದು ತಿಳಿಯದೆ ಹಿಂದಿನ ಕಾಲದಲ್ಲಿ ಗ್ರಂಥಗಳನ್ನು ರಚಿಸುವ ಸ್ಥಳ ಎಂಬುದಾಗಿಯೂ ಒಂದು ಅರ್ಥವಿದ್ದಿತು ಎಂಬುದನ್ನು ನಾವು ನೆನೆಪಿನಲ್ಲಿಟ್ಟುಕೊಳ್ಳಬೇಕು. ಆಗಿನ ಸಮಯದಲ್ಲಿ ಕೇವಲ ಗ್ರಂಥಗಳನ್ನು ಕಾಪಾಡುವದಷ್ಟೆ ಗ್ರಂಥಾಲಯದ ಆಗಿನ ಕಲ್ಪನೆಯ ಮೇರೆಗೆ ಆಗಿರದೆ, ಅವುಗಳ ಪ್ರತಿಗಳನ್ನು ಮಾಡುವದು, ಅವುಗಳ ರಚನೆಯನ್ನು ಮಾಡುವದು ಇವು ಕೂಡ ಗ್ರಂಥಭಂಡಾರಗಳ ಕಾರ್ಯಗಳಾಗಿದ್ದವು.

ಗ್ರಂಥಭಂಡಾರಗಳು ಪ್ರಪಂಚದಲ್ಲಿ ಅಸ್ತಿತ್ವದಲ್ಲಿದ್ದುದು ಇತಿಹಾಸ–ಪೂರ್ವ ಕಾಲದಲ್ಲಿ ಎಂಬ ಮಾತನ್ನು ನಾವು ಈ ಮೊದಲೆ ಒಂದು ಅರ್ಥದಲ್ಲಿ ಮನದಟ್ಟು ಮಾಡಿಕೊಂಡಿದ್ದೇವೆ. ಆದರೆ ಈಗ ಅದನ್ನು ಇನ್ನೊಂದು ಅಂದರೆ ಅದರ ಶಬ್ದಶಃ ಅರ್ಥದ ಮೇರೆಗೆ–ಕೂಡ ತಿಳಿದುಕೊಳ್ಳಬೇಕಾಗಿದೆ. ಇತಿಹಾಸವನ್ನು ಬರೆಯಲಿಕ್ಕೆ ಹಿಡಿದ ಕಾಲಖಂಡದ ಆರಂಭದಿಂದಲೂ ಗ್ರಂಥಭಂಡಾರಗಳು ಆ ಕಾಲದ ಸಮಾಜಜೀವನದ ಒಂದು ಉಪಯುಕ್ತ ಮತ್ತು ಮಹತ್ವ

ಪೂರ್ಣವಾದ ಘಟಕವೆನಿಸಿಕೊಂಡಿದ್ದವು. ಕಾಲಮಾನದ ಪ್ರಕಾರ ಯಾವ ರಾಷ್ಟ್ರದ ಗ್ರಂಥಾಲಯಗಳು ಮೊದಲು ಪ್ರಚಾರದಲ್ಲಿ ಬಂದವು, ಯಾವ ರಾಷ್ಟ್ರದಲ್ಲಿ ನಂತರ ಎಂಬದನ್ನು ನಿರ್ಣಯಾತ್ಮಕವಾಗಿ ಈಗ ಹೇಳುವದು ದುಃಸಾಧ್ಯವಾಗಬಹುದು. ಕೆಲವು ರಾಷ್ಟ್ರಗಳ ಇತಿಹಾಸವನ್ನು ಬರೆಯಲಿಕ್ಕೆ ಅವಶ್ಯಕವಾದ ಸಾಮುಗ್ರಿಗಳು ಸಾಧ್ಯವಾಗಿರಲಿಕ್ಕಿಲ್ಲ. ಇಲ್ಲವೆ ಇನ್ನು ಕೆಲವು ರಾಷ್ಟ್ರಗಳ ಐತಿಹಾಸಿಕ ಘಟನೆಗಳನ್ನು ನಿಶ್ಚಿತವಾಗಿ ಇಂತಹ ಒಂದು ಕಾಲಖಂಡಕ್ಕೆ ಹಾಕಬಹುದು ಎಂಬುದನ್ನು ಹೇಳುವದು ಅಶಕ್ಯವಾಗಿರಬಹುದು. ಅಂತೆಯೆ ಈಗ ದೊರೆಯುತ್ತಿವ ಚಾರಿತ್ರಿಕ ಸಾಧನಗಳ ಮೇಲಿಂದ, ಲಿಖಿತವಾದ ಸಾಹಿತ್ಯದ ಆಧಾರದ ಮೇಲಿಂದ ಪ್ರಾಚೀನವಾದ ಗ್ರಂಥಾಲಯಗಳು ಯಾವ ರಾಷ್ಟ್ರಗಳಲ್ಲಿ ಇದ್ದವು? ಅವುಗಳ ಆರಂಭ, ರಚನೆ, ಅಂತರ್ವ್ಯವಸ್ಥೆ, ಗ್ರಂಥಸಮುದಾಯ ಇವೆ ಮೊದಲಾದ ವಿಷಯಗಳ ಕುರಿತು ಇನ್ನು ಕೆಲವು ವಿಷಯಗಳನ್ನು ನೋಡಬಹುದು. ಹೀಗೆ ಈ ಕೆಳಗಿನ ಸಂಗತಿಗಳನ್ನು ನೋಡುವಾಗ್ಗೆ ಅವುಗಳನ್ನು ನಮೂದಿಸಿದ ಕ್ರಮದಲ್ಲಿಯೆ ಆ ಆ ಗ್ರಂಥಭಂಡಾರಗಳು ಹೆಚ್ಚು ಅಥವಾ ಕಡಿಮೆ ಪ್ರಾಚೀನವಾದುವು ಎಂಬ ಯಾವ ಅರ್ಥವನ್ನು ಮಾಡಿಕೊಳ್ಳದೆ ಗ್ರಂಥಾಲಯಗಳ ಉತ್ಕ್ರಾಂತಿಯಲ್ಲಿ ಅವು ಹೇಗೆ ಒಂದೊಂದು ಮಟ್ಟವನ್ನು ಸೂಚಿಸುತ್ತವೆ ಎಂಬುದನ್ನು ತಿಳಿದುಕೊಳ್ಳಬೇಕು.

ವಿಶ್ವದ ಇತಿಹಾಸದಲ್ಲಿ ಆ ಆ ಕಾಲದ ಸಾಮಾಜಿಕ ಪರಿಸ್ಥಿತಿಯು ಆ ಆ ಕಾಲದ ಸಾಹಿತ್ಯದಲ್ಲಿ ಪ್ರತಿಬಿಂಬಿಸುತ್ತದಷ್ಟೆ! ಅದೇ ಮಾತು ಗ್ರಂಥಭಂಡಾರಗಳಿಗೂ ಅಷ್ಟೆ ಪೂರ್ತಿಯಾಗಿ ಅನ್ವಯಿಸುತ್ತದೆ. ಮಾನವನ ಮೂಲ ಸಮಾಜವು ಈಗ ನಮಗೆ ಸಂಬಂಧಿಸಿದ ಮಟ್ಟಿಗೆ ದೈವನಿಷ್ಠವಾಗಿತ್ತು; ವಿಶ್ವಾಸಪೂರ್ಣವಾಗಿ ದೇವರ ಮೇಲೆ ಅವಲಂಬಿಸಿದಂತಹದಾಗಿತ್ತು. ಈಗಿನಂತೆ ಸಮಾಜದಲ್ಲಿ ಇರುವ ಸ್ಥಿತಿ ಬೇರೆ, ಮನೆಯಲ್ಲಿ ಕಾಣುವ ಗತಿ ಬೇರೆ, ಹೀಗೆ ಆಗಿರಲಿಲ್ಲ; ಅಥವಾ ಇಂದಿನ ಜೀವನದಲ್ಲಿ ಕಂಡುಬರುವಂತೆ ಧರ್ಮವೆಂದರೆ ಅದು ಕೇವಲ ಒಂದು ಪರಿಸ್ಥಿತಿಯಲ್ಲಿ ನೆನಪಿಗೆ ಬರಬೇಕಾದ ವಿಚಾರವಾಗಿದ್ದು ಮಿಕ್ಕ ಎಲ್ಲ ಸಾಮಾಜಿಕ ಸಂಬಂಧಕ್ಕಾಗಿ ಇಟ್ಟುಕೊಂಡ ಮಾನದಂಡವೆ ಬೇರೆಯಾಗಿರುವಂತಹ ಸಂದರ್ಭ ಇರಲಿಲ್ಲ. ಅಂತೆಯೆ ಆಗಿನ ಕಾಲದ ಗ್ರಂಥಗಳು ಹೆಚ್ಚಾಗಿ ಈ ವಿಷಯವನ್ನೆ ನಿರೂಪಿಸುವಂತಹವಾಗಿರುವದು

ಸ್ವಾಭಾವಿಕ, ನಿಸರ್ಗಬದ್ಧ, ಪ್ರಕೃತಿಯೋಗ್ಯ ಎಂದೆನ್ನಬಹುದು. ಆಗಿನ ಕಾಲದಲ್ಲಿ ಗ್ರಂಥಸಂಗ್ರಹಗಳು ಕೂಡ ಹೆಚ್ಚಾಗಿ ದೇವಾಲಯಗಳಲ್ಲಿಯೆ ಇದ್ದುದೂ ಅದಕ್ಕೆ ಒಂದು ಅನುರೂಪವಾದ ವೈಶಿಷ್ಟ್ಯವೆಂದೇ ಹೇಳಬಹುದು. ಅದಕ್ಕೆ ಕಾರಣವಾದ ಇನ್ನೂ ಒಂದು ವಿಷಯವೆಂದರೆ ಆಗಿನ ಕಾಲದ ಅರ್ಚಕ ಇಲ್ಲವೆ ಪೂಜಾರಿ ವರ್ಗವು ಹೆಚ್ಚಾಗಿ ಆ ಕಾಲದ ಸಾಹಿತ್ಯ ಮತ್ತು ಜ್ಞಾನ ಭಂಡಾರವನ್ನು ಅರಿಯಲಿಕ್ಕೆ ಅನುಕೂಲತೆಗಳನ್ನು ಪಡೆದುದಾಗಿದ್ದುದರಿಂದ ಮತ್ತು ಈ ಅರ್ಚಕವೃಂದವು ತನ್ನ ವಾಸವನ್ನು ಬಹುತರವಾಗಿ ದೇವಾಲಯದಲ್ಲಿಯೆ ಮಾಡಿಕೊಂಡಿರುವದರಿಂದ ಆಗಿನ ಕಾಲದ ಎಲ್ಲ ಸರಸ್ವತೀಭಂಡಾರಗಳು ದೇವಾಲಯಗಳಲ್ಲಿ ಇದ್ದುದು ಅರ್ಥಪೂರ್ಣವೆನಿಸದಿರದು. ಈ ಪರಂಪರೆಯು ಭಾರತವೆ ಮೊದಲಾದ ರಾಷ್ಟ್ರಗಳಲ್ಲಿ ಇಂದಿಗೂ ನಡೆದುಕೊಂಡು ಬಂದುದು ನಮಗೆ ಕಂಡುಬರುವದು. ಈಗಿನ ನಮ್ಮ ಅನೇಕ ಮಠಗಳಲ್ಲಿ ಮತ್ತು ಅಲ್ಲಲ್ಲಿ ಹರಡಿರುವ ಮಂದಿರಗಳಲ್ಲಿ, ಪುರಾತನವಾದ ಸಂಸ್ಥೆಗಳಲ್ಲಿ ಇಂದಿಗೂ ಹಳೆಯ ತಾಳೆಯ ಗರಿಗಳನ್ನಾಗಲಿ, ಗ್ರಂಥಗಳನ್ನಾಗಲಿ ಹೆಚ್ಚಿನ ಜಾಗ್ರತೆಯಿಂದಲೂ ಗೌರವದಿಂದಲೂ ನೋಡಿಕೊಂಡು ಬಂದುದು ಎಲ್ಲೆಲ್ಲಿಯೂ ತಿಳಿದ ಮಾತಾಗಿದೆ.

ಇಂತಹ ಗ್ರಂಥಸಂಗ್ರಹಗಳು ಹಿಂದಿನ ಕಾಲದ ಇಜಿಪ್ತ ದೇಶದಲ್ಲಿ ಕೂಡ ವಿಪುಲವಾಗಿ ಇದ್ದವು. ಅಲ್ಲಿ ಆಗಿನ ಕಾಲದ ಮಂದಿರಗಳು ಕೇವಲ ಅರ್ಚಕರ ನಿವಾಸಗಳಷ್ಟೆ ಆಗಿರದೆ ಪಟ್ಟಣದ ಮುಖ್ಯ ಕಾರ್ಯಾಲಯವೂ, ಆ ಭಾಗದ ಎಲ್ಲ ಧಾನ್ಯಗಳ ಹಿರಿಯ ಕಣಜವುಳ್ಳ ಸ್ಥಳವೂ ಆಗಿದ್ದಿತು. ಈ ಅಂಶವನ್ನು ದೃಷ್ಟಿಗೆ ತೆಗೆದುಕೊಂಡು ವಿಚಾರಮಾಡಿದಾಗ್ಗೆ ಒಂದು ಕಡೆಯಿಂದ ದೇವಾಲಯವು ಆಗಿನ ಸಮಾಜದ ಜೀವನದಲ್ಲಿ ಎಂತಹ ಮಹತ್ವದ ಸ್ಥಾನವನ್ನು ಪಡೆದಿದ್ದಿತು ಎಂಬುದು ತಿಳಿದುಬಂದರೆ ಇನ್ನೊಂದು ಬದಿಯಿಂದ ಅನ್ನ-ಸಂರಕ್ಷಣೆಗಳಂತಹ ಜೀವಾಳದ ವಿಷಯಗಳ ಗುಂಪಿನಲ್ಲಿಯೆ ಹೇಗೆ ಗ್ರಂಥ ಭಂಡಾರದ ಅಥವಾ ಜ್ಞಾನಸದನದ ಸಮಾವೇಶವಾಗಿದ್ದಿತು ಎಂಬುದೂ ಗೋಚರವಾಗುವದು. ಈ ದೇವಸ್ಥಾನಗಳು ಕೇವಲ "ಗ್ರಂಥಗಳ ಮನೆ" ಯಷ್ಟೆ ಆಗಿರದೆ, ಶಿಕ್ಷಣ ಮಂದಿರಗಳಾಗಿರುತ್ತಿದ್ದವಲ್ಲದೆ ಅಲ್ಲಿ ತರುಣ ಜನರಿಗೆ ಪುಸ್ತಕಗಳ ಪ್ರತಿಗಳನ್ನು ಮಾಡುವ ಕೆಲಸಕ್ಕಾಗಿ ಪ್ರೋತ್ಸಾಹ ಮತ್ತು ಸೌಕರ್ಯಗಳು ದೊರೆಯುತ್ತಿದ್ದವು.

ಇಜಿಪ್ತದ ಮೊದಲಿನ ಗ್ರಂಥಭಂಡಾರಗಳು ಹೀಗೆ ದೇವಾಲಯುಗಳ ಸಾನ್ನಿಧ್ಯದಲ್ಲಿದ್ದಂತೆಯೆ, ಕೆಲವು ಮಹತ್ವದ ಪುಸ್ತಕಗಳು ಅಲ್ಲಿಯ ಗೋರಿಗಳಾದ ಪಿರ್ಯಾಮಿಡ್‌ಗಳಲ್ಲಿಯೂ ಇದ್ದುದು ತಿಳಿದುಬರುತ್ತದೆ. ಸಂರಕ್ಷಣೆ ಮತ್ತು ಸ್ವಾಭಿಮಾನದ ದೃಷ್ಟಿಯಿಂದ ಗೋರಿಗಳಿದ್ದ ಈ ಪಿರ್ಯಾಮಿಡ್‌ಗಳು ಯೋಗ್ಯ ಸ್ಥಾನಗಳಾಗಿದ್ದುದರಿಂದ ಅಲ್ಲಿ ಆ ಕಾಲದ ಗ್ರಂಥಗಳನ್ನು ಹುದುಗಿಸಿಡುವದು ಆಗಿನ ಪದ್ಧತಿಯಾಗಿದ್ದಿರಬಹುದು. ಹೀಗೆ ಮಂದಿರಗಳಲ್ಲಿಯಾಗಲಿ, ಗೋರಿಗಳಲ್ಲಿಯಾಗಲಿ ದೊರೆತ ಗ್ರಂಥಸಂಗ್ರಹಗಳಲ್ಲಿ ಹೆಚ್ಚಾಗಿ ಧರ್ಮ, ಸಮಾಜರಚನೆ, ವೈದ್ಯಕ, ತತ್ವಜ್ಞಾನ, ದಾರ್ಶನಿಕ ಇವೆ ಮೊದಲಾದ ಶಾಸ್ತ್ರಗಳ ಗ್ರಂಥಗಳು ಸಮಾವೇಶವಾಗಿರುತ್ತವೆ.

ಈ ಬಗೆಯ ಗ್ರಂಥರಾಶಿಗಳು ಇಜಿಪ್ತದ ಮಂದಿರಗಳಲ್ಲಿ ಕೇಂದ್ರೀಕೃತವಾಗಿರಲಿಕ್ಕೆ, ಇಲ್ಲವೆ ಅರ್ಚಕರಿಂದ ಮಾತ್ರ ರಚಿತವಾಗಿರಲಿಕ್ಕೆ ಇನ್ನೂ ಒಂದು ಕಾರಣವೆಂದರೆ, ಅವುಗಳನ್ನು ಬರೆದಿಟ್ಟಿದ್ದ "ಪ್ಯಾಪಿರಸ್" ಎಂಬ ಸಾಧನದ ಸ್ವಾಮಿತ್ವ. ಈ ಪ್ಯಾಪಿರಸ್ ಎಂಬ ಲೇಖನಸಾಮುಗ್ರಿಯು ನೈಲ್ ನದಿಯು ದಡದಲ್ಲಿ, ಆಗಿನ ಕಾಲದಲ್ಲಿ ಬೆಳೆಯುತ್ತಿದ್ದ ಒಂದು ಗಿಡದ ತೊಗಟೆಯಿಂದ ಮಾಡಿದ ಪತ್ರವಿಶೇಷವಾಗಿರುತ್ತಿತ್ತು. ಈ ಪ್ಯಾಪಿರಸ್ ಪತ್ರವನ್ನು ಸಿದ್ಧ ಮಾಡುವ ಕಲೆ ಮತ್ತು ಅಧಿಕಾರವು ಹೆಚ್ಚಾಗಿ ಅರ್ಚಕಮಹಾಶಯರ ಆಧೀನದಲ್ಲಿರುತ್ತಿತ್ತು. ಅಂತೆಯೆ ಪ್ಯಾಪಿರಸ್ಸಿನ (ಅದರಿಂದಲೇ ಪೇಪರ್ ಎಂಬ ಇಂಗ್ಲಿಶ್ ಶಬ್ದವು ಬಂದಿರುತ್ತದೆ) ಸಹಾಯದಿಂದ ರಚಿಸುತ್ತಿದ್ದ ಗ್ರಂಥಗಳು ಪೂಜಾರಿಗಳ ಸ್ವಾಮಿತ್ವದಲ್ಲಿ, ಅಂದರೆ ದೇವಾಲಯುಗಳಲ್ಲಿ ಸಹಜವಾಗಿಯೆ ಇರುತ್ತಿದ್ದವು. ಇತ್ತೀಚಿನ ಸಂಶೋಧನಗಳಿಂದ ಇಜಿಪ್ತದ ಇಂತಹ ಗ್ರಂಥಭಂಡಾರಗಳ ವಿಷಯುವಾಗಿ ಕೆಲವು ರಮ್ಯವಾದ ವಿವರಗಳು ದೊರೆತಿವೆ. ಅಲ್ಲಿ ಇದ್ದ ಒಂದು ಗ್ರಂಥಭಂಡಾರದ ಹೆಬ್ಬಾಗಿಲಿನ ಮೇಲೆ "ಇದು ಆತ್ಮದ ಔಷಧಿ" ಎಂಬ ಅಕ್ಷರಗಳನ್ನು ಕೆತ್ತಿದುದು ದೊರೆತಿರುವದಂತೆ. ಅದರಂತೆಯೆ ಥೀಬ್ಸ ಎಂಬಲ್ಲಿ ತಂದೆಮಕ್ಕಳ ಇಬ್ಬರ ಗೋರಿಗಳೆರಡನ್ನೂ ಕಂಡು ಹಿಡಿದಿದ್ದು ಅವರಿಬ್ಬರೂ ಗ್ರಂಥಭಂಡಾರಿಗಳಾಗಿದ್ದುದು ಅದರ ಬೇರೆ ಲೇಖನಗಳಿಂದ ತಿಳಿದುಬರುತ್ತಿದೆ. ಅದರಿಂದ ಭಂಡಾರಿಗನ ಸ್ಥಾನವು ಆನುವಂಶಿಕವಾಗಿದ್ದಿತು ಎಂಬ ಇನ್ನೊಂದು ಸಂಗತಿಯು ತಿಳಿದುಬರುತ್ತದೆ. ಆದರೆ ಇದಕ್ಕೂ ಹೆಚ್ಚು ಆಶ್ಚರ್ಯ

ವನ್ನೂ ಸಂತೋಷವನ್ನು ಹುಟ್ಟಿಸುವಂತಹ ಇನ್ನೊಂದು ವಿಷಯದ ಸಮಾಚಾರವು ಅಲ್ಲಿ ದೊರೆತಿರುತ್ತದೆ. ಅದೆಂದರೆ ಅಲ್ಲಿ ಇದ್ದ ಸಂಗ್ರಹಗಳಲ್ಲಿಯ ಪುಸ್ತಕಗಳ ಸೂಚಿಕೆಗಳಿದ್ದುದು. ಆ ಸೂಚಿಕೆಗಳನ್ನು ಸಿದ್ಧಗೊಳಿಸಲಿಕ್ಕೆ ಆಗಿನ ಕಾಲದ ವಿಶಿಷ್ಟ ಲಿಪಿಸಂಕೇತವನ್ನು ಬಳಸಿದ್ದಾರೆ. ಅವುಗಳಲ್ಲಿ ವಿಶೇಷವಾಗಿ ಮೊದಲನೆಯ ಪಟ್ಟಿಕೆಯಲ್ಲಿ ಹನ್ನೆರಡು ಪೆಟ್ಟಿಗೆಗಳ ತುಂಬ ಗ್ರಂಥಗಳಿದ್ದ ಬಗ್ಗೆಯೂ ಎರಡನೆಯ ಪಟ್ಟಿಕೆಯಲ್ಲಿ ಇಪ್ಪತ್ತೆರಡು ಪೆಟ್ಟಿಗೆಗಳ ತುಂಬ ಪುಸ್ತಕಗಳಿದ್ದ ಬಗ್ಗೆಯೂ ಉಲ್ಲೇಖಗಳಿವೆ. ಮೊದಲನೆಯದರಲ್ಲಿ ಆಡಳಿತ, ರಾಜ್ಯರಚನೆ, ದೇವಾಲಯ ವ್ಯವಸ್ಥೆ, ನಗರರಕ್ಷಣೆ, ನಕ್ಷತ್ರಮಂಡಲ, ಸ್ಥಳ ಪುರಾಣಗಳೆ ಮೊದಲಾದ ವಿಷಯಗಳ ಮೇಲೆ ರಚಿತವಾಗಿದ್ದ ಪುಸ್ತಕಗಳಿದ್ದರೆ, ಎರಡನೆಯದರಲ್ಲಿ ಸಾಮುದ್ರಿಕ, ಜ್ಯೋತಿಷ, ಜಲಯಾನ, ಅಂತ್ಯಸಂಸ್ಕಾರ, ಆತ್ಮಸಂರಕ್ಷಣೆ, ವೈದ್ಯಕ ಇವೇ ಮೊದಲಾದ ವಿಷಯದ ಗ್ರಂಥಗಳಿರುತ್ತವೆ.

ಇಜಿಪ್ತದೊಳಗಿನ ಗ್ರಂಥಾಲಯಗಳ ವಿಷಯವಾಗಿಯೆ ನಮಗೆ ಇಷ್ಟು ಮನೋರಂಜಕವಾದ ವಿವರಗಳು ದೊರೆಯುತ್ತಿದ್ದರೆ, ಅಸೀರಿಯನ್ ಮತ್ತು ಬ್ಯಾಬಿಲೋನಿಸಿಯನ್ ಗ್ರಂಥಭಂಡಾರಗಳ ಬಗ್ಗೆ ದೊರೆಯುವ ಸಮಾಚಾರವು ಇನ್ನೂ ಹೆಚ್ಚು ದಿವ್ಯವಾಗಿದೆ. ಇಜಿಪ್ತದ ಲೇಖಕರಂತೆ ಇಲ್ಲಿಯವರು ಪ್ಯಾಪಿರಸ್ ಪತ್ರವನ್ನು ಲೇಖನ ಸಾಮಗ್ರಿಯೆಂದು ಉಪಯೋಗಿಸುತ್ತಿರಲಿಲ್ಲ. ಆ ಪ್ಯಾಪಿರಸ್ ಗಿಡವು ನೈಲ್ ನದಿಯ ದಂಡೆಯ ಒಂದು ವೈಶಿಷ್ಟ್ಯ; ಎಲ್ಲ ಕಡೆಯಲ್ಲಿ ಆ ಸೌಕರ್ಯ ಹೇಗೆ ದೊರೆಯಬೇಕು ? ಇನ್ನು ಪ್ರಪಂಚದ ಮಿಕ್ಕ ಕೆಲವು ರಾಷ್ಟ್ರಗಳಂತೆ ಇಲ್ಲಿ ತಕ್ಕ ಕಲ್ಲುಗಳಾಗಲಿ ಬೇರೆ ಸಾಧನಗಳಾಗಲಿ ಸಿಗುತ್ತಿರಲಿಲ್ಲ. ಆದರೆ ಇಲ್ಲಿ ಮಣ್ಣು ಹೇರಳವಾಗಿದ್ದು ಅದು ಸಾಕಷ್ಟು ಅನುಕೂಲವೂ ಆಗಿತ್ತು. ಅಂತೆಯೆ ಇಲ್ಲಿಯ ಪುಸ್ತಕಗಳೆಂದರೆ ಮಣ್ಣಿನ ಇಟ್ಟಂಗಿಯ ಮೇಲೆ ಬರೆದಿಟ್ಟ ಲೇಖಗಳಾಗಿವೆ. ಅವುಗಳು ಹಸಿಯಿದ್ದಾಗ್ಗೆ, ಒಂದು ಲೆಕ್ಕಣಿಕೆಯ ಅಚ್ಚುಗಳನ್ನು ಹಾಕಿ, ಆ ಪಡಿಯಚ್ಚಿನ ಆಧಾರದಿಂದ ಲಿಪಿಯನ್ನು ಮೂಡಿಸುತ್ತಿದ್ದರಂತೆ. ಇಂತಹ ಇಟ್ಟಂಗಿಗಳು ತ್ರಿಕೋಣಾತ್ಮಕವಾಗಿದ್ದು ಒಂದೊಂದು ಗ್ರಂಥಕ್ಕೆ ಇಂತಹ ಅನೇಕ ಇಟ್ಟಂಗಿಗಳು ಬೇಕಾಗುತ್ತಿದ್ದವಂತೆ.

ಆ ಆ ವಿಷಯ ಮತ್ತು ಆ ಆ ಗ್ರಂಥಕ್ಕೆ ಬೇಕಾಗುವ ಇಟ್ಟಂಗಿಗಳನ್ನು ಒಂದೆಡೆ ಕಟ್ಟಿಡುವ ಪದ್ಧತಿಯೆ ಆಗಿನ ಗ್ರಂಥಭಂಡಾರ ರಚನೆಯಾಗಿತ್ತು.

ಒಂದು ಇಟ್ಟಂಗಿಯ ಮೇಲಿನ ಬರೆಹವನ್ನು ಇನ್ನೊಂದರಲ್ಲಿ ಮುಂದುವರಿಸು ವಾಗ್ಗೆ, ಮೊದಲಿನ ಇಟ್ಟಂಗಿಯ ಮೇಲಿರುವ ಕೊನೆಯ ಸಾಲನ್ನು ಅನಂತರ ದರಲ್ಲಿ ಮೇಲೆ ಬರೆದಿಡುವ ಪದ್ಧತಿಯು ಆಗ್ಗೆ ಇದ್ದುದನ್ನು ಕಂಡರೆ, ಈಗಿನ ಗ್ರಂಥಗಳ ಮೊದಲರೂಪವು ಹೇಗೆ ಅದರಲ್ಲಿ ಚಿತ್ರಿತವಾಗಿತ್ತು ಎಂಬದು ತಿಳಿದು ಬರುವದು. ಇಂತಹ ಗ್ರಂಥಗಳ, ಗ್ರಂಥರಾಶಿಗಳ ಇಲ್ಲವೆ ಗ್ರಂಥಾಲಯುಗಳ ಸಾವಿರಾರು ಇಟ್ಟಂಗಿಗಳು ಇಂದು ಸಿಕ್ಕಿದ್ದು ಅವುಗಳ ಆಧಾರದಿಂದ ಆಗಿನ ಜ್ಞಾನದ ಲಾಭವನ್ನು ಪಡೆಯಲಿಕ್ಕೆ ನಮಗೆ ಈಗ ಸಾಧ್ಯವಾಗಿದೆ. ಆ ಬಗೆಯ ಗ್ರಂಥಗಳಲ್ಲಿ ವ್ಯಾಕರಣ, ಶಬ್ದಕೋಶ, ಕಾವ್ಯ, ಚರಿತ್ರೆ, ವಿಜ್ಞಾನ, ಧರ್ಮ ಇವೇ ಮೊದಲಾದ ವಿಷಯುಗಳು ಅಡಕವಾಗಿದ್ದವು. ಇಂತಹ ಉಚ್ಚವಿಷಯ ಗಳ ಗ್ರಂಥಗಳನ್ನು ಕೂಡ ಆಗಿನವರು ರಚಿಸಿರಬೇಕಾಗಿದ್ದರೆ ಅವರ ನಾಗರಿ ಕತೆಯು ಎಂತಹ ಉನ್ನತ ಸ್ಥಿತಿಯನ್ನು ಮುಟ್ಟಿತ್ತು ಎಂಬುದರ ಕಲ್ಪನೆಯು ನಮಗೆ ಬಾರದಿರದು.

ಈ ಇಟ್ಟಂಗಿ-ಹೊತ್ತಿಗೆಗಳ ಭಾಷೆಯು ಮೊದಲು ಅಕ್ಕಾಡ ಎಂಬ ಭಾಷೆ ಯಾಗಿತ್ತು. ಆದರೆ ಮುಂದೆ ಬ್ಯಾಬಿಲೋನಿಯನ್ ಮತ್ತು ಅಸೀರಿಯನ್ ಭಾಷೆಗಳ ಪ್ರಭಾವ ಬೆಳೆದು, ಆ ಆ ಭಾಷೆಗಳಿಗೆ ತಕ್ಕ ಸ್ಥಾನ ದೊರೆಯಿತು. ಬ್ಯಾಬಿಲೋನಿಯನ್ ಜನರಿಗಿಂತ ಅಸೀರಿಯನ್‌ರು ಹೆಚ್ಚಿನ ಜ್ಞಾನಪಿಪಾಸು ಗಳೂ ವಿದ್ಯಾಪಕ್ಷಪಾತಿಗಳೂ ಆಗಿದ್ದರು. ಅಂತೆಯೆ ಅವರ ಕಾಲದ ರಾಜಧಾನಿ ಗಳಾದ ಅಶುರ್ ಮತ್ತು ನಿನೆವ ಎಂಬ ಪಟ್ಟಣಗಳಲ್ಲಿ ಜಗತ್ತಿನ ಅತಿ ಪ್ರಾಚೀನ ಗ್ರಂಥಾಲಯುಗಳಲ್ಲಿ ಕೆಲವಿದ್ದದು ಇಂದು ನಮಗೆ ಗೋಚರವಾಗು ತ್ತದೆ. ಇವಲ್ಲದೆ ಕಿಶ್, ಸಿಪ್ಪಾರ, ಅಕ್ಕಾಡ ಮತ್ತು ಉರ್ ಎಂಬ ನಗರಗಳಲ್ಲಿ ಕೂಡ ಭವ್ಯವಾದ ಗ್ರಂಥಭಂಡಾರಗಳಿದ್ದ ಬಗ್ಗೆ ಉಲ್ಲೇಖಗಳಿವೆ.

ಆದರೆ ಬ್ಯಾಬಿಲೋನಿಯನ್ ಅರಸರಲ್ಲಿ ಶ್ರೇಷ್ಠನಾದ ಹಮ್ಮುರಾಬಿ ಎಂಬವನ "ಕಲ್ಪ" (Code) ವನ್ನೊಳಗೊಂಡ ಅವನ ಗ್ರಂಥಾಗಾರವೂ, ನಿನೆವದಲ್ಲಿ ಅಸೀರಿಯನ್ ಅರಸರು ಆರಂಭಮಾಡಿ ಮುಂದೆ ಅಶುರ್‌ಬನಿಪಾಲ ಎಂಬ ಅರಸನು ಪೋಷಿಸಿ ಉಚ್ಚಸ್ಥಿತಿಗೆ ತಂದಿದ್ದ ಸರಸ್ವತೀ ಭಂಡಾರವೂ ಆ ಕಾಲದ ಇತಿಹಾಸದಲ್ಲಿಯೆ ಅತಿ ಮುಖ್ಯ ಸ್ಥಾನವನ್ನು ಪಡೆದಿವೆ.

ಇತ್ತ ಗ್ರೀಕ ಮತ್ತು ರೋಮನ್ ಗ್ರಂಥಭಂಡಾರಗಳು ಇವಕ್ಕಿಂತ ಹೆಚ್ಚು ಪ್ರಗತಿಯನ್ನು ಸಾಧಿಸಿದ್ದವು ಎಂಬ ಮಾತಿನಲ್ಲಿ ಏನೂ ಸಂಶಯವಿಲ್ಲ. ಪ್ರಪಂಚದ ಆಧುನಿಕ ಗ್ರಂಥಭಂಡಾರಗಳಿಗೆ ಗ್ರೀಕ ಬುದ್ಧಿಮತ್ತೆಯೆ ತವರು ಎಂದು ಸಾಮಾನ್ಯವಾಗಿ ಹೇಳಬಹುದು. ಇಂದಿನ ಪಾಶ್ಚಾತ್ಯ ಜ್ಞಾನಭಂಡಾರವು ಹೆಚ್ಚಾಗಿ ಗ್ರೀಕರಿಂದ ಬಂದುದು ಎಂಬ ಮಾತನ್ನು ನಾವು ನೆನಪಿನಲ್ಲಿಡ ಬೇಕು. ಆದರೆ ಪುಸ್ತಕಗಳನ್ನು ರಚಿಸುವ ಕ್ರಮ ಗ್ರೀಸದಲ್ಲಿ ಆರಂಭವಾಗು ವದಕ್ಕಿಂತ ಮುಂಚೆಯೆ ಹೋಮರ್ ಮತ್ತು ಹೇಸ್ಯಡ್ ಕವಿಗಳ ಮಹಾಕೃತಿ ಗಳನ್ನು ಹಾಡಿ ತೋರಿಸುವ ಗಮಕಿಗಳ ಪರಂಪರೆಯು ಆ ದೇಶದಲ್ಲಿ ಇತ್ತು, ಎಂಬುದಕ್ಕೆ ಆಧಾರಗಳಿವೆ. ಆದರೂ ಮುಂದೆ ಸ್ವಲ್ಪೇ ದಿನಗಳಲ್ಲಿ ಓದುಬಾರ ದವನು ನಗೆಗೀಡಾಗುವಂತಹ ಸನ್ನಿವೇಶವು ಪ್ರಾಪ್ತವಾಗಿತ್ತು. ಅಥೆನ್ಸ್ ನಗರದಲ್ಲಿ ಸ್ತ್ರೀಯರು ಮತ್ತು ದಾಸ್ಯದಲ್ಲಿದ್ದವರು ಕೂಡ ಜ್ಞಾನಾರ್ಜನೆಯಿಂದ ವಂಚಿತರಾಗಿರಲಿಲ್ಲ; ಮತ್ತು ಆ ನಗರದಿಂದ ಇತರ ವಸಾಹತುಗಳಿಗೆ ಪುಸ್ತಕ ಪ್ರತಿಗಳು ಹೋಗುತ್ತಿದ್ದವು. ಗ್ರೀಕ ಲೇಖಕರಾದ ಪ್ಲೇಟೊ, ಯುರಿಪಿಡಿಸ್, ಯುಕ್ಲಿಡ್ ಮೊದಲಾದವರೆಲ್ಲರೂ ಪುಸ್ತಕಪ್ರಿಯರಾಗಿದ್ದರು; ಆ ಕಾಲದಲ್ಲಿದ್ದ ಗ್ರಂಥಾಲಯಗಳು ಹೆಚ್ಚಾಗಿ ಖಾಸಗೀ ಗ್ರಂಥಸಂಗ್ರಹಗಳಾಗಿದ್ದವು.

ಆದರೆ ಮುಂದೆ ಎಚಿಲಿಸ್, ಸೊಫೊಕ್ಲಿಸ್, ಯುರಿಪಿಡಿಸ್ ಮೊದಲಾದ ನಾಟಕಕಾರರ ಕೃತಿಗಳಿಂದ ಪ್ರೇರಣೆ-ಪ್ರೋತ್ಸಾಹಗಳನ್ನು ಪಡೆದು ಅಸಂಖ್ಯಾತ ಸಾರ್ವಜನಿಕ ಗ್ರಂಥಭಂಡಾರಗಳೂ ಅಸ್ತಿತ್ವದಲ್ಲಿ ಬಂದುವು. ಶ್ರೇಷ್ಠವಾದ ಜ್ಞಾನವಾಪಿಯೆಂದು ಹೆಸರಾದ ಅಲೆಕ್ಸಾಂಡ್ರಿಯಾ ನಗರದ ಮತ್ತು ಶಿಕ್ಷಣ ಕೇಂದ್ರವಾದ ರೋಡ್ಸ್ ನಗರದ ವಿಶ್ವವಿದ್ಯಾಲಯದ ಗ್ರಂಥಭಂಡಾರಗಳು ಆಗಿನ ಕಾಲದ ಉಚ್ಚವರ್ಗದ ಸಂಸ್ಥೆಗಳಾಗಿದ್ದವು.

ಅದರಂತೆಯೆ ರೋಮ ಸಾಮ್ರಾಜ್ಯದ ಕಾಲದಲ್ಲಿ ಪುಸ್ತಕಾಲಯಗಳು ಅತ್ಯಂತ ಊರ್ಜಿತ ಸ್ಥಿತಿಯನ್ನು ಕಂಡಿದ್ದವು ಎಂದೆನ್ನಬಹುದು. ರೋಮನ್ನರು ಮೂಲದಲ್ಲಿ ಕೃಷಿಕ ಜೀವನದಲ್ಲಿ ತೊಡಗಿದ್ದರೂ, ಅವರು ಗ್ರೀಕರನ್ನು ಗೆದ್ದ ಮೇಲೆ ಅವರಿಂದ ಜ್ಞಾನಪಿಪಾಸೆಯನ್ನು ಪಡೆದರು. ಅರಿಸ್ಟೋಟಲ್‌ನ ಗ್ರಂಥ ಸಂಗ್ರಹದ ಕತೆಯು ಆ ಕಾಲದ ಒಂದು ಮನೋಜ್ಞವಾದ ಸಂದರ್ಭವನ್ನು ಸೂಚಿಸುತ್ತದೆ. ಮುಂದೆ ರೋಮ ನಗರದಲ್ಲಿ ಸ್ಥಾಪಿತವಾದ ಮೊದಲನೆಯ

ಸಾರ್ವಜನಿಕ ಗ್ರಂಥಾಲಯವು ಪೋಲಿಯೊ ಎಂಬ ಮುಂದಾಳುವಿನಿಂದ ಆರಂಭ ವಾಯಿತು. ಆತನು ರಾಜಕೀಯ ಕ್ಷೇತ್ರದಿಂದ ವಿರಾಮ ಪಡೆದು ಗ್ರಂಥ ಭಂಡಾರಕ್ಕೆ ತನ್ನ ಜೀವನವನ್ನು ಧಾರೆಯೆರೆದನು. ಓಕ್ಟೇವಿಯನ್, ಜೂಲಿಯಸ್ ಸೀಝರ್, ಆಗಸ್ಟಸ್ ಮುಂತಾದ ರಾಜರೆಲ್ಲರೂ ರೋಮ್ ನಗರದ ಗ್ರಂಥ ಭಂಡಾರವನ್ನು, ರಾಜ್ಯದಲ್ಲಿ ಬೇರೆ ಗ್ರಂಥಾಲಯಗಳನ್ನು ಸ್ಥಾಪಿಸಲಿಕ್ಕೆ ಸ್ಫೂರ್ತಿಯನ್ನಿತ್ತರು. ಆಗಿನ ಕಾಲದಲ್ಲಿ ಮೊದಲು ಗ್ರಂಥಾಲಯಗಳು ಹೆಚ್ಚಾಗಿ ಅರಮನೆ ಮತ್ತು ದೇವಾಲಯಗಳಲ್ಲಿಯೆ ಇರುತ್ತಿದ್ದರೂ, ರೋಮನ್ ಸಾಮ್ರಾಜ್ಯವು ನಗರರಾಜ್ಯವಾಗಿದ್ದುದರಿಂದ ಅಲ್ಲಿ ನಗರ ಗ್ರಂಥಭಂಡಾರಗಳು ವೆಗ್ಗಳವಾಗಿ ಅಸ್ತಿತ್ವದಲ್ಲಿದ್ದವು. ಪಿಡ್ನಾ, ರೋಮ್, ಎಫೆಸಸ್ ಮತ್ತು ಕಾನ್ ಸ್ಟಂಟಿನೋಪಲ್ ಮೊದಲಾದ ನಗರಗಳು ರೋಮನ್ ಕಾಲಖಂಡದ ಉತ್ತಮ ವಾದ ಜ್ಞಾನಪುಷ್ಕರಿಣಿಗಳಾಗಿದ್ದವು.

ಇತ್ತ ನಾವು ಆಸ್ಯಖಂಡದ ಇತಿಹಾಸವನ್ನು ಅಭ್ಯಸಿಸಲಾಗಿ ನಮಗೆ ಕೇವಲ ಲೇಖನ ಕಲೆಯಲ್ಲಿ ಅಷ್ಟೆ ಕ್ರಾಂತಿಕಾರವಾದ ಕಾರ್ಯವು ಇಲ್ಲಿ ಆದುದು ಕಂಡುಬರುವದಲ್ಲದೆ ಗ್ರಂಥಾಲಯ ವಿಷಯದಲ್ಲಿಯೂ ಸಾಕಷ್ಟು ಆಶ್ಚರ್ಯವೆನಿಸುವಂತಹ ಪ್ರಗತಿಯಾದುದು ತಿಳಿದುಬರುತ್ತದೆ. ಕಾಗದದ ಹುಟ್ಟುಮನೆಯಾದ ಚೀನದಲ್ಲಿಯಾಗಲಿ, ತತ್ವಜ್ಞಾನ, ಧಾರ್ಮಿಕ ಜೀವನ ಇವುಗಳ ತವರೆನಿಸಿದ ಭಾರತದಲ್ಲಿಯಾಗಲಿ ಗ್ರಂಥರಚನೆ ಮತ್ತು ಗ್ರಂಥಾಲಯ ವ್ಯವಸ್ಥೆಗಳ ಬಗೆಯಲ್ಲಿಯೂ ಮಾರ್ಗದರ್ಶಕ ಎನ್ನಿಸುವಂತಹ ಕಾರ್ಯವು ಸಂಭವಿಸಿದ್ದುದು ಸಹಜವೇ ಎಂದೆನ್ನಬಹುದು.

ಚೀನವಲ್ಲಿ ಕಾಗದವನ್ನು ನಿರ್ಮಿಸುವ ಕಲೆಯು ಕ್ರಿಸ್ತಪೂರ್ವ ಕಾಲ ದಲ್ಲಿಯೆ ಹುಡುಕಿತೆಗೆಯಲ್ಪಟ್ಟಿದ್ದರೂ ಭಾರತದಂತೆಯೆ ಅಲ್ಲಿ ಕೂಡ ಬರೆ ದಿಡುವ ಪ್ರಯತ್ನ ಆರಂಭವಾದುದು ತಡವಾಗಿಯೆ. ಅದಕ್ಕಿಂತ ಮುಂಚೆ ಭಾರತದಲ್ಲಿ ಭೂರ್ಜಪತ್ರ, ಕಾರ್ಪಾಸಪಟ, ಕಟ್ಟಿಗೆ, ತಾಮ್ರ, ಹಿತ್ತಾಳೆ, ಬೆಳ್ಳಿ, ಚಿನ್ನ, ತಾಡಪತ್ರ, ಚರ್ಮ, ಕಲ್ಲು, ಮಣ್ಣಿನ ಇಟ್ಟಂಗಿಗಳು ಇವೆ ಮೊದಲಾದವುಗಳ ಮೇಲೆ ಬರೆದಿಡುವ ರೂಢಿಯಿದ್ದರೆ, ಇಜಿಪ್ತವೆ ಮೊದಲಾದ ರಾಷ್ಟ್ರಗಳಲ್ಲಿ ಪ್ಯಾಪಿರಸ್‌ದ ಮೇಲೆಯೂ ಅಸೀರಿಯಾ-ಬ್ಯಾಬಿಲೋನಿಯಾಗಳಲ್ಲಿ ಮಣ್ಣಿನ ಇಟ್ಟಂಗಿಗಳ ಮೇಲೆಯೂ ಬರೆದಿಡುವ ಪರಿಪಾಠವನ್ನಿಟ್ಟುಕೊಂಡಿ

ದ್ದರು. ಭಾರತದಲ್ಲಿ ಲೇಖನಕಲೆಯು ಬಹಳ ದಿನಗಳಿಂದ ಪ್ರಚಾರದಲ್ಲಿದ್ದಿತು ಎಂಬುದಕ್ಕೆ ನಮ್ಮ ಶಾಸ್ತ್ರ,ವೇದ–ಪುರಾಣಗಳಲ್ಲಿ ಸಾಕಷ್ಟು ಆಧಾರಗಳು ದೊರೆಯುತ್ತವೆ. ಪಾಣಿನಿಯ ಎಂಟನೆಯ ಅಧ್ಯಾಯದಲ್ಲಿ ಲಿಪಿ ಮತ್ತು ಲಿಪಿಕಾರ ಎಂಬ ಶಬ್ದಗಳ ಉಲ್ಲೇಖಗಳಿವೆ.

ಆದರೆ ಬರೆದಿಡುವ ಅಭ್ಯಾಸವು ಸಾರ್ವತ್ರಿಕವಾದುದು ಬುದ್ಧಕಾಲ ಮತ್ತು ಜೈನಕಾಲಗಳಲ್ಲಿ ಬುದ್ಧಭಿಕ್ಷುಗಳು ತಾವು ಬರೆಯುವ ಕೆಲಸವನ್ನು ಒಂದು ಪವಿತ್ರಕಾರ್ಯವೆಂದು ತಿಳಿದಿರುತ್ತಿದ್ದರು. ಚೀನದ ಪ್ರವಾಸಿಗಳಾದ ಫಾಹಿಯಾನ್, ಇತ್ಸಿಂಗ ಮತ್ತು ಹುಯೆನ್‌ತ್ಸಂಗ ಇವರೇ ಮೊದಲಾದ ಯಾತ್ರಿಕರ ಸಂಗಡ, ಭಾರತೀಯ ಜ್ಞಾನಭಂಡಾರವನ್ನು ಅರಸಿ, ಅದರೊಳಗಿನ ಅನರ್ಘ್ಯರತ್ನಗಳ ಪ್ರತಿಗಳನ್ನು ಮಾಡಿಕೊಂಡು ಹೋಗುವ ಕಾರ್ಯಕ್ಕಾಗಿ ಬೇರೆ ಸಹಯಾತ್ರಿಕರೂ ಬಂದಿದ್ದರು. ಆ ಕಾಲದ ಪ್ರಯಾಣಿಕರ ಲೇಖನ ಮತ್ತು ದಿನಚರಿಗಳ ಸಹಾಯದಿಂದ ನಮಗೆ ಆಗಿನ ಕಾಲದ ಕೆಲವು ಗ್ರಂಥ ಭಂಡಾರಗಳ ಬಗ್ಗೆ ತುಸು ಸಮಾಚಾರವು ದೊರೆಯುತ್ತದೆ.

ಇಂತಹ ಜ್ಞಾನಕೇಂದ್ರಗಳಲ್ಲಿ ನಾಲಂದವು ಅತಿ ಮುಖ್ಯವಾದುದೆಂದು ಹೇಳಬಹುದು. ಈಗಿನ ಬಿಹಾರ ರಾಜ್ಯದಲ್ಲಿದ್ದ ಈ ಸ್ಥಳದ ವಿಷಯವಾಗಿ ಇತ್ಸಿಂಗನ ವರದಿಗಳಲ್ಲಿ ಮತ್ತು ಸ್ಮರಣಪತ್ರಗಳಲ್ಲಿ ಕೆಲವು ಅಂಶಗಳು ತಿಳಿದು ಬರುತ್ತವೆ. ಈ ವಿದ್ಯಾಕೇಂದ್ರವು ಈಗಿನ ವಿಶ್ವವಿದ್ಯಾಲಯದಂತಹ ಒಂದು ಸಂಸ್ಥೆಯಾಗಿತ್ತಷ್ಟೆ ಅಲ್ಲದೆ ಅಲ್ಲಿಗೆ ಪ್ರಪಂಚದ ಹಿರಿಯ ರಾಷ್ಟ್ರಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರು. ಅದು ಬುದ್ಧಧರ್ಮದ ಒಂದು ಕ್ಷೇತ್ರವೂ ಆಗಿದ್ದುದರಿಂದ ಪೂರ್ವಖಂಡದ ರಾಷ್ಟ್ರಗಳಿಗೆ ಅದೊಂದು ಯಾತ್ರಾಸ್ಥಳವಾದಂತಾಗಿತ್ತು. ಇಲ್ಲಿ ಕೇವಲ ಸಾಹಿತ್ಯನಿರ್ಮಾಣವಾಗುತ್ತಿತ್ತಷ್ಟೆ ಅಲ್ಲದೆ ಗ್ರಂಥ 'ರಚನೆ'ಯೂ ನಡೆಯುತ್ತಿತ್ತು. ಪುಸ್ತಕದ ವಿಷಯವನ್ನು ಅಲ್ಲಿಯ ಆಚಾರ್ಯರು ಸಭೆಯಲ್ಲಿ ಸಮಾವೇಶಹೊಂದಿ ಚರ್ಚಿಸುತ್ತಿದ್ದಂತೆಯೆ ಗ್ರಂಥರಚನೆಯ ಕ್ರಮದಲ್ಲಿ ಶುದ್ಧಾಶುದ್ಧ ಭಾಗಗಳ ವಿಷಯವಾಗಿಯೂ ವಿಚಾರವಿನಿಮಯವು ನಡೆಯುತ್ತಿತ್ತು. ಈ ಕಾಲದಲ್ಲಿ ವಿಶ್ವವಿದ್ಯಾಲಯಗಳಂತಹ ಕೇಂದ್ರಗಳಷ್ಟೆ ಅಲ್ಲದೆ ವೈಯಕ್ತಿಕವಾಗಿ ಕೂಡ ಮಾಡಿಕೊಂಡಿದ್ದ ಗ್ರಂಥಸಂಗ್ರಹಗಳಿರುತ್ತಿ

ದ್ದವು. ವಿಶ್ವವಿದ್ಯಾಲಯದಲ್ಲಿ ಕುಲಪತಿಗಳ ಮಾರ್ಗದರ್ಶನದಲ್ಲಿಯೆ ಗ್ರಂಥ ರಚನೆ ಮತ್ತು ಗ್ರಂಥಾಲಯ ವ್ಯವಸ್ಥೆಯು ಸಾಗುತ್ತಿತ್ತು.

ಅದರಂತೆಯೆ ಇನ್ನೊಂದು ಹಿರಿಯ ವಿದ್ಯಾಕೇಂದ್ರವೆಂದರೆ ಈಗ ಪಾಕಿಸ್ತಾನದ ಭಾಗದಲ್ಲಿ ಹೋಗಿರುವ ತಕ್ಷಶಿಲಾ ವಿಶ್ವವಿದ್ಯಾಲಯ. ನಾಲಂದವು ಬುದ್ಧಧರ್ಮದ ಕೇಂದ್ರವಾಗಿದ್ದರೆ ಇದು ಜೈನಧರ್ಮದ ಹೆಬ್ಬೊಳಲಾಗಿತ್ತು. ಇಲ್ಲಿ ಆಗಿನ ಕಾಲದ ಸಕಲಶಾಸ್ತ್ರ ಮತ್ತು ಕಲೆಗಳನ್ನು ಕಲಿಸುವ ಏರ್ಪಾಡು ಗಳಿದ್ದರೂ ಆ ವಿಶ್ವವಿದ್ಯಾಲಯವು ಹೆಚ್ಚಾಗಿ ವೈದ್ಯಕ ವಿಷಯದಲ್ಲಿ ಹೆಸರು ವಾಸಿಯಾಗಿತ್ತು. ಅಲ್ಲಿಯು ಗ್ರಂಥಭಂಡಾರಿಗನಿಗೆ ಗ್ರಂಥಾಲಯ ವ್ಯವಸ್ಥೆಯಷ್ಟೆ ಅಲ್ಲದೆ ವಿದ್ಯಾರ್ಥಿಗಳಿಗೆ ಮಾರ್ಗದರ್ಶನಮಾಡುವ ಕಾರ್ಯವೂ ಇರುತ್ತಿತ್ತು. ಈ ವಿದ್ಯಾನಗರದಲ್ಲಿ ಗ್ರಂಥಲೇಖನದ ಕಾರ್ಯವಾಗುವ ಸ್ಥಳವು ಘಟಿಕಾ ಶಾಲೆಯಾಗಿತ್ತು. ಈ ಕಾಲದಲ್ಲಿ ಧನವಂತರಿಗೆ ಪುಸ್ತಕಗಳ ಪ್ರತಿಗಳನ್ನು ಪಡೆಯುವ ಸೌಕರ್ಯವಿತ್ತು; ಆ ವ್ಯವಹಾರವನ್ನು ಮಾಡುವವರಿಗೆ ಪುಸ್ತಕೋಪಕ್ರಯಿಗಳು ಎಂದೆನ್ನುತ್ತಿದ್ದರು.

ಇಂತಹವೆ ಆದರೂ ಇದಕ್ಕೂ ಹೆಚ್ಚಿನ ಪ್ರಗತಿಯನ್ನು ಸಾಧಿಸಿದ ಇನ್ನೂ ಒಂದೆರಡು ಸಂಸ್ಥೆಗಳೆಂದರೆ ಬಂಗಾಲದ ವಿಕ್ರಮಶಿಲಾ ಮತ್ತು ಓದನಪುರೀ ವಿದ್ಯಾಕೇಂದ್ರಗಳು ಹಾಗೂ ಇತ್ತ ಕನ್ನಡನಾಡಿನಲ್ಲಿ ವಿಜಾಪುರ ಜಿಲ್ಲೆಯ ಇಂಡೀ ತಾಲೂಕಿನಲ್ಲಿದ್ದ ಸಾಲೋಟಗಿ ವಿಶ್ವವಿದ್ಯಾಲಯ, ಮಳಖೇಡದ ಹತ್ತಿರಿರುವ ನಾಗಾಯಿಯಲ್ಲಿ ಸ್ಥಾಪಿಸಿದ ಘಟಿಕಾಶಾಲೆ ಮತ್ತು ಮೈಸೂರಲ್ಲಿದ್ದ ಬಳ್ಳಿಗಾಲಿ ವಿಶ್ವವಿದ್ಯಾನಿಲಯಗಳಂತಹ ಸ್ಥಳಗಳು. ಕನ್ನಡನಾಡಿನ ಗ್ರಂಥಾಲಯಗಳ ಬಗೆಯಲ್ಲಿ ಈಗ ಸಾಕಷ್ಟು ಸಮಾಚಾರ ಸಿಕ್ಕಿರದಿದ್ದ ಅವುಗಳ ಗ್ರಂಥಸಂಗ್ರಹವೆ ಮೊದಲಾದ ಸಂಗತಿಗಳ ಬಗ್ಗೆ ಇನ್ನೂ ಸಂಶೋಧನ ನಡೆಯಬೇಕಾಗಿದೆ. ಆದರೆ ವಿಕ್ರಮಶಿಲಾ ಮತ್ತು ಓದನಪುರೀ ಜ್ಞಾನಮಂದಿರಗಳ ಬಗೆಯಲ್ಲಿ ಕೆಲಮಟ್ಟಿಗೆ ವಿವರಗಳು ಉಪಲಬ್ಧವಾಗಿವೆ. ಈ ವಿಶ್ವವಿದ್ಯಾಲಯಗಳು ಅಕ್ಷರಶಃ "ವಿಶ್ವ"ವಿದ್ಯಾಲಯಗಳಾಗಿದ್ದು ಪ್ರಪಂಚದ ಎಲ್ಲ ಜ್ಞಾನದ ಲಾಭವೂ ಇಲ್ಲಿ ಆಗುತ್ತಿತ್ತೆಂದೇ ಅನೇಕ ರಾಷ್ಟ್ರಗಳ ವಿದ್ಯಾರ್ಥಿಗಳು ಇತ್ತ ವಿದ್ಯಾರ್ಜನೆಗಾಗಿ ಬರುತ್ತಿದ್ದರು. ವಿಕ್ರಮಶಿಲಾ ಜ್ಞಾನಕೇಂದ್ರದಲ್ಲಿ ವ್ಯಾಕರಣ, ತರ್ಕ, ತಂತ್ರ, ದರ್ಶನ ಮುಂತಾದ ಶಾಸ್ತ್ರಗಳಲ್ಲಿ ದೀಪಾಂಕರ ಶ್ರೀಜ್ಞಾನರೇ

ಮೊದಲಾದ ಜಗದ್ವಿಖ್ಯಾತ ವಿದ್ವಾಂಸರಿಂದ ಶಿಕ್ಷಣವು ದೊರೆಯುತ್ತಿತ್ತು. ನಾಲ್ಕೈದು ನೂರು ವರ್ಷಗಳ ವರೆಗೆ ಈ ಕೇಂದ್ರವು ಯಾತ್ರಾಸ್ಥಳವಾಗಿತ್ತು. ಒಂದು ಕಾಲಕ್ಕೆ ಮೂರು ಸಾವಿರ ವಿದ್ಯಾರ್ಥಿಗಳು ಓದುತ್ತಿದ್ದು, ಇಲ್ಲಿಯ ಪಂಡಿತರು ಮುಂದೆ ತಿಬೇಟ, ಚೀನ, ಸಿಂಹಳ, ಬ್ರಹ್ಮದೇಶಗಳೇ ಮೊದಲಾದ ರಾಷ್ಟ್ರಗಳಿಗೆ ತೆರಳುತ್ತಿದ್ದರು. ಇಲ್ಲಿ ಗ್ರಂಥಲೇಖನ, ಗ್ರಂಥನಿರ್ಮಾಣ ಮತ್ತು ಗ್ರಂಥಾನುವಾದ ಕಾರ್ಯವು ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿತ್ತು. ರಾಜಾಶ್ರಯದಲ್ಲಿ ಬಾಳಿದ ಈ ವಿದ್ಯಾನಗರಗಳು ಭಾರತದ ಚರಿತ್ರೆಯಲ್ಲಿಯೆ ಹಿರಿಯ ಸ್ಥಾನವನ್ನು ಪಡೆದಿವೆ ಎಂದೆನ್ನಬಹುದು.

ಕ್ರಿಸ್ತಶಕ ಪೂರ್ವಕಾಲದಿಂದ ಕ್ರಿಸ್ತಶಕದ ಮೊದಲನೆಯ ವರ್ಷ ಸಹಸ್ರವು ತೀರುವ ವರೆಗೆ ಪ್ರಪಂಚದ ಇತಿಹಾಸದಲ್ಲಿ ಗ್ರಂಥಭಂಡಾರ ಮತ್ತು ಜ್ಞಾನದಾನದ ಸ್ಥಿತಿಯು ಇಷ್ಟು ಸ್ಫೂರ್ತಿದಾಯಕವೂ ಪ್ರಗತಿಶೀಲವೂ ಆಗಿದ್ದರೆ ಅದರ ಮುಂದಿನ ಒಂದು ಸಾವಿರ ವರ್ಷಗಳಲ್ಲಿ ಹೆಚ್ಚಿನ ಗೈಮೆಯೇನೂ ಕಂಡು ಬಾರದಿದ್ದುದು ವಿಶೇಷವಾಗಿ ಆಶ್ಚರ್ಯವನ್ನು, ವಿಷಾದವನ್ನು ಹುಟ್ಟಿಸದಿರದು. ಈ ಬಗೆಯ ಪರಿಸ್ಥಿತಿಯು ಹೆಚ್ಚಾಗಿ ಭಾರತದಲ್ಲಿ ಒಂದು ಸಾವಿರ ವರ್ಷಗಳ ಮಟ್ಟಿಗೆ ಅಸ್ತಿತ್ವದಲ್ಲಿದ್ದುದು ಕಂಡುಬಂದರೆ ಯುರೋಪ ಮೊದಲಾದ ಭಾಗದ ರಾಷ್ಟ್ರಗಳಲ್ಲಿ ಸಾಮಾನ್ಯವಾಗಿ ಐದಾರು ನೂರು ವರ್ಷಗಳ ವರೆಗೆ ಹರಡಿಕೊಂಡಿತ್ತು. ಯುರೋಪದೊಳಗಿನ ಅನೇಕ ಧಾರ್ಮಿಕ ಯುದ್ಧಗಳ ಮತ್ತು ಅಂತಃಕಲಹದ ಪರಿಣಾಮವಾಗಿಯೆ ಆಗಲಿ, ಅಲ್ಲಿ ನಡೆದಿದ್ದ ವಿಚಾರ ಮತ್ತು ಉದ್ಯೋಗಕ್ರಾಂತಿಯ ಮೊದಲಿನ ಸಾಮಾಜಿಕ ಗೊಂದಲದ ಫಲವೆಂದೇ ಆಗಲಿ, ಗ್ರಂಥಾಲಯದ ಆಂದೋಲನವು ಬಹುಮಟ್ಟಿಗೆ ಸಾವಕಾಶವಾಗಿ ಮುಂದುವರಿಯಿತು. ಇತ್ತ ಭಾರತದಲ್ಲಿಯ ಸ್ಥಿತಿಯು ವಿಚಿತ್ರವಾಗಿಯೆ ಇದ್ದಿತೆನ್ನಬಹುದು. ಮಧ್ಯಕಾಲದ ಭಾರತದಲ್ಲಿ ಮೊಗಲರೆ ಮೊದಲಾದ ಮುಸಲ್ಮಾನರ ಆಡಳಿತದಲ್ಲಿ ಒಂದು ಬಗೆಯ ಸುಕಾಲವೂ ಶಾಂತಿಯೂ ಕಂಡುಬರುತ್ತಿದ್ದರೂ ಆಗ್ಗೆ ಹೆಚ್ಚು ಪರಿಣಾಮಕಾರಿಯಾದ ಮತ್ತು ಚಿರಂತನ ವೆನಿಸುವ ಶಿಕ್ಷಣಕಾರ್ಯವು ವಿಶೇಷವಾಗಿ ನಡೆಯದಿದ್ದುದು ಸೋಜಿಗದ ಸಂಗತಿ.

ಆದರೆ ಯುರೋಪದಲ್ಲಿ ಮಾತ್ರ ಮಧ್ಯಯುಗದ ದಾಸ್ಯ, ವೈಮನಸ್ಯ ಮತ್ತು ಆಲಸ್ಯಗಳು ಮರೆಯಾಗುತ್ತಿದ್ದಂತೆಯೆ ವಿಚಾರಕ್ರಾಂತಿಯು ಒಂದು ದೊಡ್ಡ ಗಾಳಿಯೆ ಅಲ್ಲಿ ಬೀಸತೊಡಗಿತು. ಲ್ಯಾಟಿನ್ ಮತ್ತು ಗ್ರೀಕ್ ಭಾಷೆ ಯನ್ನರಿತ ಧರ್ಮಸಚಿವರು ಧಾರ್ಮಿಕ ಕಾಟವನ್ನು ತಪ್ಪಿಸಿಕೊಳ್ಳಲಿಕ್ಕೆಂದು ಪಶ್ಚಿಮ ಯುರೋಪಕ್ಕೆ ಓಡಿಬಂದಂತೆ, ಅಲ್ಲಿ ಗ್ರೀಕ್ ಮತ್ತು ಲ್ಯಾಟಿನ ಭಾಷೆಯ ಪ್ರಸಾರವು ಒಂದು ಬದಿಯಿಂದ ಭರದಿಂದ ಸಾಗಿತಷ್ಟೆ ಅಲ್ಲದೆ ಇನ್ನೊಂದು ಬದಿಯಿಂದ ಗ್ರೀಕ್ ಮತ್ತು ರೋಮನ್ ಭಾಷೆಗಳಲ್ಲಿದ್ದ ಅನೇಕ ಗ್ರಂಥಗಳ ಅನುವಾದಗಳಾಗಿ ಪ್ರಾಚೀನ ವಾಙ್ಮಯ ಮತ್ತು ಪೂರ್ವಯುಗದ ಸಾಹಿತ್ಯದ ಪರಿಚಯವು ಜನಸಾಮಾನ್ಯರಿಗೆ ಆಗತೊಡಗಿತು. ಈ ಸ್ಥಿತ್ಯಂತರದ ಫಲವಾಗಿಯೆ ಯುರೋಪಖಂಡದಲ್ಲಿ, ಅದರಲ್ಲಿಯೂ ವಿಶೇಷವಾಗಿ ಜರ್ಮನಿ, ಫ್ರಾನ್ಸ್, ಇಂಗ್ಲಂಡ, ಹಾಲಂಡ್, ಸ್ಪೇನ ಮುಂತಾದ ರಾಷ್ಟ್ರಗಳಲ್ಲಿ ಶಿಕ್ಷಣದ ಪ್ರಸಾರವು ಭರದಿಂದ ಸಾಗಿತಷ್ಟೆ ಅಲ್ಲದೆ ಉದ್ಯಮದಲ್ಲಿ ಕೂಡ ಅದ್ಭುತವಾದ ಪರಿವರ್ತನೆಯು ಉಂಟಾಯಿತು. ಜನರು ಹೊಸ ವಿಷಯಗಳನ್ನು ಅರಿಯ ಹತ್ತಿದರು; ಹೆಚ್ಚು ಹೊಸ ವಿಚಾರಗಳನ್ನು ತಿಳಿಯಹತ್ತಿದರು; ಅದಕ್ಕೂ ಹಿರಿಯ ಯೋಜನೆಗಳನ್ನು ಮಾಡಹತ್ತಿದರು; ಇನ್ನೂ ಎತ್ತರದ ಯೋಜನೆ ಗಳನ್ನು ಹಾಕಹತ್ತಿದರು. ಈ ಎಲ್ಲ ಚಟುವಟಿಕೆಗೆ ಮೂಲವಾದ, ಈ ಎಲ್ಲ ಪುನರುಜ್ಜೀವನದ ಸೂತ್ರವಾದ, ಈ ಎಲ್ಲ ನವನಿರ್ಮಾಣದ ಮಂತ್ರವಾದ ಜ್ಞಾನಪ್ರಸಾರವು ಯುರೋಪದ ಎಲ್ಲ ರಾಷ್ಟ್ರಗಳಲ್ಲಿ ಉಚ್ಚವಾದ ಗ್ರಂಥ ಭಂಡಾರಗಳು, ಉತ್ತಮವಾದ ವಿದ್ಯಾಕೇಂದ್ರಗಳು ಇವುಗಳಿಂದಲೇ ಆಯಿತು ಎಂದೆನ್ನಬಹುದು.

ಈ ಕಾಲದ ಇಂತಹ ಅಪ್ರತಿಮವಾದ ಚಲನವಲನದ ಉತ್ತಮ ನಿದರ್ಶನಗಳೆಂದು ಹೆಸರಾಗಿ ಇಂದಿಗೂ ಕೂಡ ಜ್ಞಾನಪ್ರಪಂಚದಲ್ಲಿ ಉತ್ಕೃಷ್ಟ ವಾದ ಸೇವೆಯನ್ನು ಸಲ್ಲಿಸುತ್ತಿರುವ ಕೆಲವು ಗ್ರಂಥಭಂಡಾರಗಳ ಆರಂಭ, ರಚನೆ, ಸಂಗ್ರಹ, ವೈಶಿಷ್ಟ್ಯ ಮೊದಲಾದ ವಿಷಯಗಳನ್ನು ಇಲ್ಲಿ ಇನ್ನು, ನೋಡಬಹುದು. ಇಂತಹ ಸಂಸ್ಥೆಗಳಲ್ಲಿ ಅತ್ಯಂತ ಪ್ರಾಚೀನವೂ, ಅದ್ಭುತವೂ, ಆದುದೆಂದರೆ ಫ್ರಾನ್ಸ್ ದೇಶದ ರಾಷ್ಟ್ರೀಯ ಗ್ರಂಥಾಲಯ. ಅದಕ್ಕೆ ಬಿಬ್ಲಿ ಯೋಥೆಕಾ ನ್ಯಾಶನಲ್ ಎಂದು ಫ್ರೆಂಚ್‌ಭಾಷೆಯಲ್ಲಿ ಹೆಸರು; ಅದರ ಸ್ಥಾಪ

ನೆಯ ಕಾಲದ ವಿಷಯವಾಗಿ ನಿರ್ದಿಷ್ಟವಾದ ಅಭಿಪ್ರಾಯವು ದೊರೆಯು ದಿದ್ದರೂ ಅದು ೧೦೮೦ ನೆಯ ಇಸ್ವಿಯಷ್ಟರಲ್ಲಿ ಒಂದು ಮೂರ್ತಸ್ವರೂಪವನ್ನು ತಳೆದಿದ್ದು ಈಗ ಅದರಲ್ಲಿ ಅಯ್ವತ್ತು ಲಕ್ಷಕ್ಕೆ ಮಿಕ್ಕಿದ ಪುಸ್ತಕಸಂಗ್ರಹವಿದೆ. ಈ ಗ್ರಂಥಾಲಯವು ಮೊದಲು ಫ್ರಾನ್ಸ್‌ದೇಶದ ಅರಸರ ಸ್ವಂತದ ಗ್ರಂಥ ಸಂಗ್ರಹಗಳ ರೂಪದಲ್ಲಿ ಆರಂಭವಾಗಿದ್ದರೂ ಕ್ರಮವಾಗಿ ಅದಕ್ಕೆ ದೇಶದ ಪ್ರಮುಖ ರಾಜಕಾರಣಿಗಳು, ಅಧಿಕಾರಿಗಳು, ರಾಜವಂಶೀಯರು, ಬುದ್ಧಿ ಜೀವಿಗಳೇ ಮೊದಲಾದವರ ಪುಸ್ತಕಗಳು, ರಾಜ್ಯದ ಮುಖ್ಯ ಕಾಯದೆ ಕಟ್ಟಳೆಗಳು, ಯುದ್ಧ—ಸಂಧಿಗಳೆ ಮೊದಲಾದ ಅಸಾಮಾನ್ಯ ಪ್ರಸಂಗಗಳ ಚರಿತ್ರೆಗಳು, ಬರೆಹಗಳು, ದಿನಚರಿಗಳು, ನಕಾಶಗಳು ಮುಂತಾದವುಗಳು ಸಮಾವೇಶ ಹೊಂದಿ ಇಂದಿಗೂ ಅದು ಪ್ರಪಂಚದ ಒಂದು ಆದರ್ಶ ಗ್ರಂಥ ಭಂಡಾರವೆನಿಸಿದೆ. ಈ ಭಂಡಾರದ ಕಟ್ಟಡ, ಇಲ್ಲಿ ಓದುಗರಿಗೆ ಸಲ್ಲಿಸಲಾಗುವ ಸೇವೆ, ಇಲ್ಲಿ ದೊರೆಯುವ ವ್ಯಾಸಂಗ ಸಾಧನಗಳು, ಇವೆಲ್ಲ ವೈಶಿಷ್ಟ್ಯಪೂರ್ಣ ವಾಗಿವೆ. ಈ ಗ್ರಂಥಾಲಯದಲ್ಲಿ ಪ್ರಪಂಚದ ನಾಲ್ವತ್ತಕ್ಕಿಂತ ಹೆಚ್ಚು ಭಾಷೆ ಗಳೊಳಗಿನ ಪುಸ್ತಕಗಳ ಸೂಚಿಕೆಗಳಿದ್ದು ಇಲ್ಲಿ ಇನ್ನೂರು ಜನರು ಕೆಲಸ ಮಾಡುತ್ತಾರೆ.

ಇದರಷ್ಟೆ ಜನಪ್ರಿಯವೂ, ವ್ಯಾಪಕವೂ ಆದ ಇನ್ನೊಂದು ಸಂಸ್ಥೆ ಯೆಂದರೆ ಇಂಗ್ಲಂಡದ ರಾಷ್ಟ್ರೀಯ ಗ್ರಂಥಾಲಯ. ಈ ಸಂಸ್ಥೆಯ ಹೆಸರಿನಲ್ಲಿ ಗ್ರಂಥಾಲಯ ಎಂಬ ಶಬ್ದವು ಕೂಡ ಕಾಣದಿದ್ದರೂ ಬ್ರಿಟಿಷ ಮ್ಯೂಜಿಯಮ್ ಎಂದು ಪ್ರಖ್ಯಾತಿಯನ್ನು ಪಡೆದ ಈ ಗ್ರಂಥಭಂಡಾರವು ಪ್ರಾಮುಖ್ಯವಾಗಿ ಒಬ್ಬ ವ್ಯಕ್ತಿಯ ಉತ್ಸಾಹ, ಪುಸ್ತಕಪ್ರೀತಿ ಮತ್ತು ಔದಾರ್ಯದ ಫಲವಾಗಿರು ತ್ತದೆ. ಸರ್ ಹಾನ್ಸ್ ಸ್ಲೋನ್ ಎಂಬ ವೈದ್ಯವೃತ್ತಿಯ ವ್ಯಕ್ತಿಯು ತನ್ನ ಅಮೌಲ್ಯವಾದ ಅಯ್ವತ್ತು ಸಾವಿರ ಪುಸ್ತಕಗಳನ್ನು ಇಂತಹದೊಂದು ಸಂಗ್ರಹ ವನ್ನಾಗಿ ಪರಿವರ್ತಿಸಲಿಕ್ಕೆಂದು ಅರ್ಪಿಸಿದನು. ಅತ್ಯಲ್ಪ ಬೆಲೆಯಲ್ಲಿ ಸರಕಾರವು ಕೊಂಡ ಈ ಗ್ರಂಥರಾಶಿಯು ಇಂದು ಅಯ್ವತ್ತು ಲಕ್ಷದ ಸಂಖ್ಯೆಯನ್ನು ದಾಟಿದೆ. ಮುಂದೆ ಅರಸರ ಗ್ರಂಥಗಳು, ದಂಡಾಳುಗಳ ಪುಸ್ತಕಗಳು, ಮುಂದಾಳುಗಳ ಸಂಗ್ರಹಗಳು ಮುಂತಾದವು ಸೇರಿಕೊಂಡು, ೧೭೫೩ ರಲ್ಲಿ ಆರಂಭವಾದ ಈ ಜ್ಞಾನಭಂಡಾರವು ಜಾಣಾಕ್ಷ ಮತ್ತು ಸೇವಾತತ್ಪರ

ಭಂಡಾರಿಗರ ಕಾರ್ಯದಿಂದ ಜಗದ್ವಿಖ್ಯಾತಿಯನ್ನು ಪಡೆದಿದೆ. ಈ ಗ್ರಂಥಾಲಯದ ವರ್ತುಲಾಕಾರದ ಓದುಮನೆ, ಇಲ್ಲಿ ದೊರೆಯುವ ಪೌರ್ವಾತ್ಯ ಸಾಹಿತ್ಯದ ಸಾಧನಗಳು, ಇದರಲ್ಲಿ ವಾಚಕರಿಗೆ ಕೊಡಲಾಗುವ ಸೌಕರ್ಯಗಳು ಗ್ರಂಥಾಲಯ ಪ್ರಪಂಚದಲ್ಲಿಯೆ ಮೇಲ್ಪಂಕ್ತಿಯನ್ನು ಹಾಕಿವೆ. ಪ್ರಾಚೀನ ವಸ್ತುಗಳ ವಿಭಾಗ, ಶಾಸ್ತ್ರಗಳ ವಿಭಾಗ, ಚಿತ್ರಸಂಗ್ರಹ, ಭೂಪಟಗಳ ವಿಭಾಗ, ಸಂಗೀತ ವಿಭಾಗ, ಮುದ್ರಿತ ಪುಸ್ತಕಗಳ ಸಂಗ್ರಹ, ಹಸ್ತಪ್ರತಿಗಳ ವಿಭಾಗ, ಚಿತ್ರಗ್ರಂಥಗಳ ವಿಭಾಗ ಮೊದಲಾದ ಅನೇಕ ವಿಭಾಗಗಳು ಈ ಗ್ರಂಥಾಲಯದಲ್ಲಿರುತ್ತವೆ. ಪುಸ್ತಕಗಳು, ಪುಸ್ತಕಭಾಗಗಳು ಲೇಖನಗಳು ಮೊದಲಾದವುಗಳ ಛಾಯಾಚಿತ್ರಗಳನ್ನು ತೆಗೆದು ವಾಚಕರಿಗೆ ಕೊಡುವ ಒಂದು ವಿಶಿಷ್ಟ ಸೇವೆಯು ತುಂಬಾ ಲೋಕಪ್ರಿಯವಾಗಿದೆ. ಇಂದಿಗೂ ಸ್ವತಂತ್ರವಾದ ಸಂಸ್ಥೆಯೆಂದು ಕಾರ್ಯಮಾಡುತ್ತಿರುವ ಬ್ರಿಟಿಷ ಮ್ಯೂಜಿಯಮ್ ಗ್ರಂಥಭಂಡಾರವು ರಾಷ್ಟ್ರದ ಗ್ರಂಥಾಲಯ ವ್ಯವಸ್ಥೆಯಲ್ಲಿ ಒಂದು ಅಪೂರ್ವವೂ, ಅದ್ವಿತೀಯವೂ ಆದ ಸ್ಥಾನವನ್ನು ಪಡೆದಿದೆ.

ಇದರ ಅನಂತರ ಒಂದು ಪೀಳಿಗೆಯಾದ ಮೇಲೆ ಸ್ಥಾಪಿತವಾಗಿದ್ದರೂ ಈ ಸಂಸ್ಥೆಗಿಂತ ಹೆಚ್ಚಿನ ಪರಿಣಾಮವನ್ನು, ಪ್ರಭಾವವನ್ನು ಪ್ರಪಂಚದಲ್ಲಿ ಬೀರಿದ ಇನ್ನೊಂದು ಗ್ರಂಥಾಲಯವೆಂದರೆ ಅಮೇರಿಕೆಯ ಕಾಂಗ್ರೆಸ್ ಗ್ರಂಥಭಂಡಾರವು. ಇದು ೧೮೦೦ ರಲ್ಲಿ ಆರಂಭವಾಗಿದೆ. ಮೊದಲು ಕೇವಲ ಸಣ್ಣ ಪ್ರಮಾಣದಲ್ಲಿಯೆ ಅಮೇರಿಕೆಯ ರಾಷ್ಟ್ರೀಯ ಶಾಸನಸಭೆಯಾದ ಕಾಂಗ್ರೆಸ್ಸಿನ ಗ್ರಂಥಸಂಗ್ರಹವೆಂದು ಜನ್ಮತಾಳಿದ ಈ ಸಂಸ್ಥೆಯು ಈಗ ಅಮೇರಿಕೆಯ ರಾಷ್ಟ್ರೀಯ ಗ್ರಂಥಾಲಯವಾಗಿದೆ. ಇದರಲ್ಲಿ ಎಪ್ಪತ್ತು ಲಕ್ಷಕ್ಕೂ ಮೇಲ್ಪಟ್ಟ ಪುಸ್ತಕಗಳಿವೆ. ಕ್ರಮವಾಗಿ ಅದು ರಾಷ್ಟ್ರಾಧ್ಯಕ್ಷರು, ದೇಶದ ಲಕ್ಷ್ಮೀಪುತ್ರರು, ಪ್ರತಿಭಾವಂತರು ಮತ್ತು ಸೇವಾಧುರೀಣರು ಇವರ ಆಶ್ರಯ ಮತ್ತು ಸಹಕಾರದಿಂದ ತನ್ನ ಸೇವೆ ಮತ್ತು ಸಾಧನಗಳಿಗಾಗಿ ವಿಶ್ವವಿಖ್ಯಾತಿಯನ್ನು ಪಡೆದಿದೆ. ಈ ಗ್ರಂಥಾಲಯದ ಚತುಷ್ಕೋಣಾಕೃತಿಯ ಕಟ್ಟಡವು ಅನುಕೂಲವೂ, ಸುಂದರವೂ ಆಗಿದೆ. ಮಧ್ಯದಲ್ಲಿದ್ದ ಇಲ್ಲಿಯ ಗೋಲಕವು (Rotunda) ಗ್ರಂಥಾಲಯ ಜಗತ್ತಿನಲ್ಲಿ ಹೆಸರಾದುದಾಗಿದೆ. ಈ ಬಗೆಯ ರಚನೆಯನ್ನು ನಮ್ಮ ದೇಶದಲ್ಲಿ ಕಾಶಿಯ ಹಿಂದೂ ವಿಶ್ವವಿದ್ಯಾಲಯದ

ಗ್ರಂಥಭಂಡಾರದ ಕಟ್ಟಡಕ್ಕಾಗಿ ಅನುಸರಿಸಲಾಗಿದೆ. ಈ ಗ್ರಂಥಭಂಡಾರದಲ್ಲಿಯ ವೈಶಿಷ್ಟ್ಯಗಳೆಂದರೆ ಸರಕಾರದಿಂದ ಸ್ವಾಮಿತ್ವದ ಪುಸ್ತಕಪ್ರತಿಗಳನ್ನು ಪಡೆಯುವದು, ಸ್ಮಿತ್ಸೋನಿಯನ್ ಇನ್‌ಸ್ಟಿಟ್ಯೂಟ ಎಂಬ ಸಂಘಟನೆಯು ಮುಖಾಂತರ ವಿದ್ವತ್ಸಂಘಗಳಿಂದ ಪುಸ್ತಕಗಳನ್ನು ಪಡೆದು ಏರ್ಪಡಿಸಿಕೊಂಡಿರುವ ಅಂತರ್‍ರಾಷ್ಟ್ರೀಯ ಗ್ರಂಥವಿನಿಮಯ, ಇಲ್ಲಿ ಸಿದ್ಧಗೊಳಿಸಿದ ಪುಸ್ತಕಗಳ ವರ್ಗೀಕರಣ ಮತ್ತು ಸೂಚೀಕರಣದ ಸಾಧನ ಮತ್ತು ಉಪಕರಣಗಳನ್ನು ರಾಷ್ಟ್ರದೊಳಗಿನ ಇನ್ನು ಅಯ್ದು ಸಾವಿರಕ್ಕಿಂತ ಹೆಚ್ಚು ಗ್ರಂಥಭಂಡಾರಗಳಿಗೆ ಒದಗಿಸುವದು, ಪ್ರಚಾರ ಗ್ರಂಥ ಮತ್ತು ಪ್ರಕಾಶನ ಮಾಲಿಗಳು ಮುಂತಾದವುಗಳಾಗಿರುತ್ತವೆ. ಈ ಗ್ರಂಥಾಲಯದ ಆಡಳಿತ ವ್ಯವಸ್ಥೆಯು ನೇರವಾಗಿ ಕಾಂಗ್ರೆಸ್ಸಿನ ಅಧೀನವಾಗಿದೆ. ಈ ಸಂಸ್ಥೆಯಲ್ಲಿ ವಾಚನಮಂದಿರ, ಆರೋಹಣ ವಿಭಾಗ, ಸೂಚೀಸದನ, ವರ್ಗೀಕರಣ ವಿಭಾಗ ಮತ್ತು ಪಟ್ಟಿಕಾಭವನ ಎಂಬ ಅಯ್ದು ಪ್ರಮುಖ ಶಾಖೆಗಳಿದ್ದು ಹಸ್ತಪ್ರತಿಗಳು, ಭೂಪಟಗಳು, ಸಂಗೀತ, ನಿಯತಕಾಲಿಕೆಗಳು, ಅಧಿಲೇಖನ (Document) ಗಳು, ಛಾಯಾಚಿತ್ರ ಮೊದಲಾದ ವಿಷಯಗಳನ್ನೊಳಗೊಂಡ ಹದಿನಾರು ಸಂಶೋಧನ ಸಮಿತಿಗಳಿರುತ್ತವೆ.

ವಯಸ್ಸಿನಿಂದ ಚಿಕ್ಕದಾಗಿದ್ದರೂ ವರ್ಚಸ್ಸಿನಲ್ಲಿಯೂ ಗ್ರಂಥಸಂಖ್ಯೆಯಲ್ಲಿಯೂ ಇದಕ್ಕೂ ಹೆಚ್ಚಿನದಾದ ಗ್ರಂಥಾಲಯವೆಂದರೆ ರಸಿಯದ ರಾಜಧಾನಿಯಾದ ಮಾಸ್ಕೋದಲ್ಲಿದ್ದ ಲೆನಿನ್ ಗ್ರಂಥಭಂಡಾರ. ಇದು ೧೮೬೨ ರಲ್ಲಿ ಸ್ಥಾಪಿತವಾಗಿದ್ದು ಈ ಸಂಗ್ರಹದಲ್ಲಿ ಅದಕ್ಕಿಂತ ಎಷ್ಟೋ ಶತಮಾನಗಳ ಹಿಂದಿನ ಪುಸ್ತಕಗಳೆಲ್ಲ ಸೇರಿ ಒಂದು ಕೋಟಿಗಿಂತ ಹೆಚ್ಚು ಗ್ರಂಥಗಳಿವೆ. ಈ ಗ್ರಂಥಭಂಡಾರದ ಆರಂಭವು ಪೋಲಂಡದವರಾದ ಝುಲುಸ್ಕಿ ಬಂಧುಗಳ ಪ್ರಯತ್ನದ ಮತ್ತು "ಕ್ಯಾಥರೀನ್ ದಿ ಗ್ರೇಟ್" ಸಾಮ್ರಾಜ್ಞಿಯ ಉತ್ಸಾಹದ ಫಲವಾಗಿ ಆಗಿದ್ದು ಈಗ ಅದು ಗ್ರಂಥಜಗತ್ತಿನಲ್ಲಿಯೆ ಅತಿ ದೊಡ್ಡ ಸಂಸ್ಥೆಯಾಗಿದೆ. ಪ್ರತಿಭಾನ್ವಿತರಾದ ಭಂಡಾರಿಗರು ಮತ್ತು ಸಹಾನುಭೂತಿಯುಳ್ಳ ಅರಸರು ಇವರ ಅನ್ಯೋನ್ಯ ಸಹಕಾರದಿಂದ ಈ ಗ್ರಂಥಾಲಯವು ರಾಷ್ಟ್ರದಲ್ಲಿ ಅತ್ಯುಪಯುಕ್ತವಾದ ಒಂದು ಸಂಸ್ಥೆಯಾಗಿಯೂ ವಿಶ್ವದಲ್ಲಿ ಅನುಕರಣೀಯವಾದ ಒಂದು ಸ್ಥಳವಾಗಿಯೂ ಪರಿಣಮಿಸಿದೆ. ಇಲ್ಲಿಯ ಗ್ರಂಥಸಂಗ್ರಹವನ್ನು

ರಚಿಸಿದ ವ್ಯವಸ್ಥೆಯೂ, ಈ ಸಂಸ್ಥೆಯ ಕಟ್ಟಡದ ಸೌಂದರ್ಯವೂ ಮನ ಮೆಚ್ಚುವಂತಹವಾಗಿವೆ. ಪ್ರಾಚೀನ ಗ್ರಂಥಗಳು, ಹಸ್ತಪ್ರತಿಗಳು, ವಾಚನ ಮಂದಿರ, ಮೂಲಶಾಸ್ತ್ರಗಳು, ಭಾಷಾಶಾಸ್ತ್ರ, ಪ್ರಾಚ್ಯಸಂಗ್ರಹ, ವಿಶಿಷ್ಟ ಗ್ರಂಥ ಸಂಗ್ರಹಗಳು ಮತ್ತು ರಸಿಯದ ಮೇಲೆ ಬರೆದ ಇತರ ಭಾಷಾಗ್ರಂಥಗಳು ಹೀಗೆ ಕಾಲಾನುಕ್ರಮವಾದ ವ್ಯವಸ್ಥೆಯಲ್ಲಿ ಈ ಭಂಡಾರದೊಳಗಿನ ಪುಸ್ತಕ ಗಳೆಲ್ಲ ಇಡಲಾಗಿವೆ. ರಾಜ್ಯಕ್ರಾಂತಿಯ ನಂತರ ಈ ಗ್ರಂಥಾಲಯವು ರಾಷ್ಟ್ರೀಯ ಜೀವನದಲ್ಲಿ ಅತ್ಯುಚ್ಚವಾದ ಒಂದು ಅಂಗವಾಗಿದೆ.

ಪ್ರಪಂಚದಲ್ಲಿ ಇಂಗ್ಲಂಡದಂತೆಯೆ ಒಂದು ಚಿಕ್ಕ ರಾಷ್ಟ್ರವಾದರೂ ಹಿರಿಯ ಸ್ಥಾನವನ್ನು ಗಳಿಸಿದ ಜಪಾನಿನ ರಾಷ್ಟ್ರೀಯ ಗ್ರಂಥಾಲಯವೊಂದು ಇಂದಿನ ಪ್ರಮುಖ ಗ್ರಂಥಾಲಯ ಪಂಚಕದಲ್ಲಿ ಬರುತ್ತದೆ. ಇದು ನಿಜ ವಾಗಿಯೂ ೧೮೭೨ ರಲ್ಲಿ ಜನ್ಮತಾಳಿದ್ದರೂ ಇದಕ್ಕೆ ರಾಷ್ಟ್ರೀಯ ಮಹತ್ವವೂ, ರಾಷ್ಟ್ರೀಯ ಗ್ರಂಥಾಲಯ ಎಂಬ ಮನ್ನಣೆಯೂ ದೊರೆತು ಇದರ ಸ್ಥಾಪನೆಯು ೧೮೪೮ ರಲ್ಲಿ ಆಗಿರುವದೆಂದೆ ಗಣಿಸಬೇಕಾಗಿದೆ. ಈ ಪೌರ್ವಾತ್ಯ ಗ್ರಂಥಾ ಲಯದ ವೈಶಿಷ್ಟ್ಯಗಳೆಂದರೆ ಇದು ವಿಭಾಗ ವಿಭಾಗವಾಗಿ ಬೆಳೆದುದು ಮತ್ತು ಈ ಸಂಗ್ರಹದಲ್ಲಿದ್ದ ಅಸಂಖ್ಯ ಪೌರ್ವಾತ್ಯ ಸಾಹಿತ್ಯಕೃತಿಗಳು ಇದ್ದುದು. ಈ ಗ್ರಂಥಾಲಯದ ಅಂಗವಾಗಿಯೆ ಅಂತರ್ರಾಷ್ಟ್ರೀಯ ಗ್ರಂಥವಿನಿಮಯ ಕಾರ್ಯ ಮತ್ತು ಗ್ರಂಥಾಲಯ ಶಿಕ್ಷಣದ ಪ್ರಸಾರದ ಕೆಲಸಗಳು ನಡೆಯುತ್ತವೆ. ಈ ಸಂಸ್ಥೆಯು ಜಪಾನ ಸರಕಾರದ ವಿದ್ಯಾವಿಭಾಗದ ಆಡಳಿತದಲ್ಲಿರುತ್ತದೆ ಯಲ್ಲದೆ ಆ ವಿಭಾಗದಿಂದ ರಾಷ್ಟ್ರೀಯ ಸ್ವಾಮಿತ್ವದ ಪುಸ್ತಕಗಳನ್ನು ಪಡೆ ಯುತ್ತದೆ. ಇದರೊಳಗಿನ ಚೀನ ಸಾಹಿತ್ಯಸಂಗ್ರಹವು ಅಪ್ರತಿಮವಾಗಿದೆ. ಅಲಭ್ಯಗ್ರಂಥಗಳು, ಹಸ್ತಪ್ರತಿಗಳು, ಅಪ್ರಕಟಿತ ಕೃತಿಗಳು, ಅಧಿಲೇಖನಗಳು, ಕೌಟುಂಬಿಕ ಸಂಗ್ರಹಗಳು, ಧಾರ್ಮಿಕ ಗ್ರಂಥಗಳು ಮುಂತಾದವು ಈ ಗ್ರಂಥ ಭಂಡಾರದ ಅಭಿಮಾನಪೂರ್ಣ ಗ್ರಂಥಸಂಗ್ರಹಗಳಾಗಿವೆ. ಪಾಶ್ಚಾತ್ಯ ಸಾಹಿತ್ಯದ ವಿಭಾಗವೊಂದು ಈ ಸಂಸ್ಥೆಯಲ್ಲಿ ಅತ್ಯಂತ ಆಸಕ್ತಿಯಿಂದ ನಿರ್ಮಿತವಾಗಿದೆ. ವಿಶಿಷ್ಟ ವಿಷಯಗಳು ಮತ್ತು ಕಾಲಖಂಡಗಳನ್ನೊಳ ಗೊಂಡ ಪುಸ್ತಕಗಳ ಸಂಖ್ಯೆಯು ಈ ಗ್ರಂಥಭಂಡಾರದಲ್ಲಿ ಹತ್ತು ಲಕ್ಷವನ್ನು ಮೀರಿದೆ. ಈ ಗ್ರಂಥಭಂಡಾರವು ಒದಗಿಸುವ ವಿವಿಧ ವಿಷಯಗಳ ಸೂಚಿಕೆ

ಗಳು ಮತ್ತು ಗ್ರಂಥಗಳ ಛಾಯಾಚಿತ್ರ ಪ್ರತಿಗಳು ಹೆಚ್ಚಿನ ಆಕರ್ಷಕ ಸೇವಾ ಕಾರ್ಯಗಳಾಗಿವೆ.

ಪ್ರಪಂಚದ ಆಯ್ದು ಹಿರಿಯ ಸಂಸ್ಥೆಗಳ ಹುಟ್ಟು ಮತ್ತು ಬದುಕುಗಳನ್ನು ನೋಡಿಯಾದ ಮೇಲೆ ಇನ್ನು ನಾವು ನಮ್ಮ ನಾಡಿನ ಗ್ರಂಥಾಲಯಗಳತ್ತ ಹೊರಳಬಹುದು. ಮೊದಲಾಗಿ ಇಲ್ಲಿ ನಾಲ್ಕೈದು ಸಂಸ್ಥೆಗಳ ವಿಷಯವಾಗಿ ಮಾತ್ರ ಕೆಲವು ಸಂಗತಿಗಳನ್ನು ತಿಳಿಯುವದು ಸಾಧ್ಯ ಮತ್ತು ಆವಶ್ಯಕವಾಗಿದೆ. ಭಾರತದಲ್ಲಿ ಗ್ರಂಥಾಲಯಗಳು ಅಸ್ತಿತ್ವದಲ್ಲಿದ್ದು ಅನೇಕ ಸಹಸ್ರ ವರ್ಷಗಳಾಗಿದ್ದರೂ ಆಧುನಿಕ ರಾಷ್ಟ್ರೀಯ ಮತ್ತು ವ್ಯಾಪಕವಾದ ರೀತಿಯಲ್ಲಿ ಇಂತಹ ಸಂಸ್ಥೆಗಳು ಹುಟ್ಟಿದುದು ತೀರ ಇತ್ತೀಚೆಗೆ ಎಂದೆನ್ನಬಹುದು. ಆದರೆ ಭಾರತದ ಗ್ರಂಥಾಲಯಗಳು ಅಲ್ಲಿಯ ಇತರ ಸಂಸ್ಥೆಗಳಂತೆಯೆ ಅಸ್ಥಿರವೂ ಅನಿಶ್ಚಿತವೂ ಆಗಿರುತ್ತವೆ. ಅದಕ್ಕೆ ಕಾರಣ ದೇಶದೊಳಗಿನ ರಾಜಕೀಯ ಮತ್ತು ಸಾಂಸ್ಕೃತಿಕ ವಾತಾವರಣದಲ್ಲಿರುತ್ತಿದ್ದ ಅನಿಶ್ಚಿತತೆಯೆ ಆಗಿದ್ದರೂ, ಗ್ರಂಥಾಲಯಗಳ ಹುಟ್ಟುಸಾವುಗಳ ಸಂಖ್ಯಾ ಬಾಹುಲ್ಯವು ತುಸು ವಿಷಾದವನ್ನು, ನಿರುತ್ಸಾಹವನ್ನು ಉಂಟುಮಾಡುತ್ತದೆ.

ಅಂತೆಯೆ ಭಾರತೀಯ ಗ್ರಂಥಭಂಡಾರಗಳಲ್ಲಿ ಆವುಗಳು ಹುಟ್ಟಿದ ವರ್ಷದಿಂದ ಮಾತ್ರ ಆ ಸಂಸ್ಥೆಗಳ ಹಿರಿಮೆಯನ್ನು ಅರಿಯದೆ ಅವುಗಳು ಸಂಗ್ರಹಿಸಿದ ಪುಸ್ತಕಗಳ ಸಂಖ್ಯೆ, ಅವುಗಳಲ್ಲಿ ದೊರೆಯುತ್ತಿರುವ ಗ್ರಂಥಗಳ ಮತ್ತು ಗ್ರಂಥ ವಿಷಯಕ ಸೌಲಭ್ಯಗಳು, ಆ ಸಂಸ್ಥೆಗಳಲ್ಲಿ ಗೈಯುತ್ತಿರುವ ಹಣದ ವೆಚ್ಚ ಮತ್ತು ಅವುಗಳಿಂದ ಜನತೆಯು ನಿಜವಾಗಿಯೂ ಪಡೆಯುತ್ತಿರುವ ಪ್ರಯೋಜನ ಇವುಗಳಿಂದ ಭಾರತದೊಳಗಿನ ಕೆಲವು ದೊಡ್ಡ ಗ್ರಂಥಾಲಯಗಳ ಚರಿತ್ರೆಯನ್ನು ಅಭ್ಯಸಿಸುವದು ಸೂಕ್ತವೆನಿಸಬಹುದು. ಈ ದೃಷ್ಟಿಯಿಂದ ಇಲ್ಲಿ ಕಲ್ಕತ್ತೆಯಲ್ಲಿರುವ ರಾಷ್ಟ್ರೀಯ ಗ್ರಂಥಾಲಯ, ಶಾಂತಿನಿಕೇತನದಲ್ಲಿರುವ ವಿಶ್ವಭಾರತೀ ಗ್ರಂಥಭಂಡಾರ, ಕಾಶಿಯಲ್ಲಿರುವ ಹಿಂದೂ ವಿಶ್ವವಿದ್ಯಾಲಯದ ಗ್ರಂಥಾಲಯ, ಮುಂಬಯಿಯಲ್ಲಿರುವ ಪ್ರಾಂತೀಯ ಕೇಂದ್ರ ಗ್ರಂಥಭಂಡಾರ ( ಹಿಂದಿನ ರಾಯಲ್ ಏಶಿಯಾಟಿಕ್ ಸೊಸೈಟಿಯ ಗ್ರಂಥಸಂಗ್ರಹ) ಮತ್ತು ಮದರಾಸಿನಲ್ಲಿರುವ ವಿಶ್ವವಿದ್ಯಾಲಯ ಪುಸ್ತಕಭಂಡಾರ ಇವುಗಳ ಚರಿತ್ರೆಯ ಕೆಲವು ಉಪಯುಕ್ತ ಮತ್ತು ಸಂಕ್ಷಿಪ್ತ ಸಂಗತಿಗಳನ್ನು ಅರಿಯಬಹುದು.

ರಾಷ್ಟ್ರೀಯ ಗ್ರಂಥಭಂಡಾರವೆಂದು ಸ್ವಾತಂತ್ರ್ಯದ ನಂತರ ಹೆಸರನ್ನು ಪಡೆದ ಮುಂಚಿನ ಸಾಮ್ರಾಜ್ಯ ಗ್ರಂಥಾಲಯದ ಆರಂಭವು ನಮ್ಮ ಮೊದಲಿನ ಆಳರಸರ ಅನುಕೂಲತೆಗಾಗಿ ಕಲ್ಕತ್ತೆಯಲ್ಲಿ ಈಗ ಐವತ್ತು ವರ್ಷಗಳ ಹಿಂದೆಯೆ ಆಗಿದೆ; ರಾಜಧಾನಿಯ ಸ್ಥಳವು ಕಲ್ಕತ್ತೆಯಿಂದ ಈ ಇಪ್ಪತ್ತು ವರ್ಷಗಳ ಪೂರ್ವದಲ್ಲಿಯೆ ದೆಹಲಿಗೆ ಬದಲಾಗಿದ್ದರೂ ಆ ಗ್ರಂಥಭಂಡಾರವು ಮೊದಲಿನ ಸ್ಥಳದಲ್ಲಿಯೆ ಇರುತ್ತದೆ. ಇತ್ತ ಕಲ್ಕತ್ತೆಯ ಜನಸಂಖ್ಯೆ, ಬಂಗಾಲ ಮತ್ತು ಭಾರತದ ಮಿಕ್ಕ ಸ್ಥಾನಗಳಲ್ಲಿರುವ ಸಾಕ್ಷರ ಮತ್ತು ವಿದ್ಯಾನ್ವಿತ ಜನರು ಈ ಭಂಡಾರದಿಂದ ಪಡೆಯುತ್ತಿರುವ ಸೌಕರ್ಯ ಮತ್ತು ಲಾಭ ಇವುಗಳಷ್ಟೆ ಅಲ್ಲದೆ ಈಗ ಈ ಗ್ರಂಥಾಲಯವು ಇರುವ ಬೆಲ್ವೆಡಿಯರ್ ಭವನ ಎಂಬ ನಿವಾಸದ ಸೌಂದರ್ಯ ಮತ್ತು ಅನುಕೂಲತೆ ಇವೆಲ್ಲ ದೃಷ್ಟಿಯಿಂದ ನೋಡಲಾಗಿ ಭಾರತದ ಈ ರಾಷ್ಟ್ರೀಯ ಗ್ರಂಥಾಲಯವು ಕಲ್ಕತ್ತೆಯಲ್ಲಿಯೆ ಇರುವದು ಉಚಿತ ಮತ್ತು ಸಾರ್ಥಕ ಎಂದೆನ್ನುವ ಒಂದು ಅಭಿಪ್ರಾಯವೂ ಯೋಚಿಸುವಂತಹದಾಗಿದೆ. ಆದರಂತೆಯೆ ನಿಜವಾಗಿಯೂ ಒಂದು ರಾಷ್ಟ್ರೀಯ ಮತ್ತು ಕೇಂದ್ರ ಗ್ರಂಥಭಂಡಾರವು ಸಲ್ಲಿಸಬಹುದಾದ ಸೇವೆ ಮತ್ತು ಬೀರ ಬಹುದಾದ ಪ್ರಭಾವ ಈ ಸಂಸ್ಥೆಯಿಂದ ಸಾಕಷ್ಟು ಪ್ರಮಾಣದಲ್ಲಿ ದೊರೆ ಯುತ್ತಿಲ್ಲ ಎಂಬ ಇನ್ನೊಂದು ಅಭಿಪ್ರಾಯವನ್ನು ನಾವು ತಿಳಿದುಕೊಳ್ಳ ಬಹುದು. ಆದರೂ ಈ ಗ್ರಂಥಾಲಯದಲ್ಲಿರುವ ಐದು ಲಕ್ಷಕ್ಕಿಂತ ಹೆಚ್ಚು ಪುಸ್ತಕ ಮತ್ತು ಪತ್ರಿಕೆಗಳ ಸಂಗ್ರಹ, ಇಲ್ಲಿ ನಡೆಯುತ್ತಿರುವ ಗ್ರಂಥಾಲಯೀನ ಸಂಶೋಧನ ಮತ್ತು ಶಾಸ್ತ್ರೀಯ ಕಾರ್ಯ, ಕೇಂದ್ರ ಸರಕಾರವು ಈ ಸಂಸ್ಥೆಯ ವಿಷಯವಾಗಿ ಪಡುತ್ತಿರುವ ಅಭಿಮಾನ, ಇಲ್ಲಿ ಉಚ್ಚವರ್ಗದ ವಿದ್ಯಾರ್ಥಿಗಳಷ್ಟೆ ಅಲ್ಲದೆ ಸಾಮಾನ್ಯ ವಾಚಕರಿಗೆ ಕೂಡ ಸಿಕ್ಕುತ್ತಿರುವ ವಾಚನ ಸೌಕರ್ಯ ಗಳು ಇವೆಲ್ಲ ಕಾರಣಗಳಿಗಾಗಿ ಈ ಸಂಸ್ಥೆಯು ಭಾರತೀಯ ಗ್ರಂಥಾಲಯಗಳಲ್ಲಿ ಅಷ್ಟೆ ಅಲ್ಲದೆ ಗ್ರಂಥಾಲಯ ಜಗತ್ತಿನಲ್ಲಿಯೆ ಮೇಲಿನ ಸ್ಥಾನವನ್ನು ಪಡೆ ದಿರುವದು. ಈ ಗ್ರಂಥಾಲಯದ ಮುಖ್ಯ ಭಂಡಾರಿಗರು ಕನ್ನಡಿಗರಾದ ಶ್ರೀ. ಕೇಶವನ್ ಅವರು ಇರುವದೊಂದು ನಮಗೆ ಹೆಚ್ಚಿನ ಅಭಿಮಾನಕ್ಕೆ ಕಾರಣ ವಾಗಿದೆ. ಈ ಗ್ರಂಥಾಲಯವು ೧೯೦೨ ರಲ್ಲಿ ಸ್ಥಾಪಿತವಾಗಿದ್ದು ೧೯೪೯–೫೦ ರಲ್ಲಿ ಇದು ಮೂರುಕಾಲು ಲಕ್ಷ ರೂಪಾಯಿಗಳ ವೆಚ್ಚವನ್ನು ಮಾಡಿದೆ.

ಎರಡನೆಯ ದೊಡ್ಡ ನಮ್ಮ ಗ್ರಂಥಾಲಯವಾದ ವಿಶ್ವಭಾರತಿಯ ಗ್ರಂಥಭಂಡಾರವು ಒಂದು ರೀತಿಯಿಂದ ಅಪ್ರತಿಮವಾದ ಒಂದು ಸಂಸ್ಥೆಯಾಗಿದೆ. ಈಗ ಈ ಗ್ರಂಥಾಲಯವು ಇಂದು ಕೇಂದ್ರ ವಿಶ್ವವಿದ್ಯಾಲಯವಾದ ವಿಶ್ವಭಾರತಿಯ ಗ್ರಂಥಭಂಡಾರವಾಗಿದ್ದರೂ, ೧೯೦೫ ರಲ್ಲಿ ಇದು ಸ್ಥಾಪಿತವಾಗುವಾಗ್ಗೆ ಆದರ ಸಂಸ್ಥಾಪಕರಾದ ಕವೀಂದ್ರ ರವೀಂದ್ರನಾಥ ಠಾಕೂರರು ತಮ್ಮ ಕನಸಿನ ಕಲ್ಪನೆಯಾದ ವಿಶ್ವಭಾರತಿಯಂತೆಯೆ ಈ ಗ್ರಂಥಾಲಯವು ಅದ್ವಿತೀಯವಾಗಬೇಕು ಎಂಬ ಆಶಯದಿಂದ ಇದನ್ನು ಆರಂಭಿಸಿದರು. ಹೊರಗಿನಿಂದ ಈ ಗ್ರಂಥಾಲಯದ ಕಟ್ಟಡವು ಅಂತಹ ಆಕರ್ಷಣೆಯುಳ್ಳದಾಗಿರದಿದ್ದರೂ ಎರಡು ಲಕ್ಷಕ್ಕೆ ಮೇಲ್ಪಟ್ಟ ಸಂಗ್ರಹವು ಇದರಲ್ಲಿದ್ದು ಭಾರತದ ಸಾಂಸ್ಕೃತಿಕ ಸಂಪತ್ತನ್ನು ವಿವಿಧಮುಖವಾಗಿಯೂ, ಸೌಂದರ್ಯಪೂರ್ಣವಾಗಿಯೂ ತೋರಿಸುತ್ತದೆ. ಕೇವಲ ಒಂದು ವಿಶ್ವವಿದ್ಯಾಲಯದ ಗ್ರಂಥಸಂಚಯವೆನ್ನಿಸದೆ ಸಾಹಿತ್ಯ, ಸಂಗೀತ, ಕಲೆಗಳು, ಹಸ್ತಪ್ರತಿಗಳು, ವಿದೇಶದಲ್ಲಿ ಭಾರತವು ಬೀರಿದ ಸಾಂಸ್ಕೃತಿಕ ಪ್ರಭಾವ ಈ ವಿಷಯಗಳ ವೈಶಿಷ್ಟ್ಯವನ್ನು ಈ ಸಂಸ್ಥೆಯು ಪಡೆದದ್ದಾಗಿದೆ. ಕಳೆದ ವರ್ಷ ಈ ಗ್ರಂಥಾಲಯದಲ್ಲಿ ಇಪ್ಪತ್ತು ಸಾವಿರ ರೂಪಾಯಿಗಳ ವೆಚ್ಚವಾಗಿದ್ದು, ಆದರಲ್ಲಿ ೪ ದಷ್ಟು ಪುಸ್ತಕಗಳ ಸಲುವಾಗಿ ಮಾಡಿದ್ದಾಗಿದೆ. ಉಚ್ಚವ್ಯಾಸಂಗದ ತೀರ್ಥಸ್ಥಳವಾಗಿದೆ ಈ ಕೇಂದ್ರ.

ಮೊದಲಿನಿಂದಲೇ ಭಾರತೀಯ ವಿದ್ಯೆಯ ಹಿರಿಯ ಕ್ಷೇತ್ರವೊಂದಾದ ಕಾಶಿಯಲ್ಲಿ ದಿವಂಗತ ಮದನ ಮೋಹನ ಮಾಲವೀಯ ಅವರು ಹಿಂದೂ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದ ಮೇಲೆ ಅದು ಮತ್ತಷ್ಟು ಮಹತಿಯನ್ನು ಪಡೆಯಿತು. ಪ್ರಪಂಚದ ಅನೇಕ ರಾಷ್ಟ್ರಗಳಿಂದ ವಿದ್ಯಾರ್ಜನೆಗಾಗಿ ಬರುತ್ತಿದ್ದ ಯುವಕರ ಅನುಕೂಲತೆಗಾಗಿ ಅಲ್ಲಿ ಶ್ರೀಮಂತ ಸಯಾಜಿರಾವ ಗಾಯಕವಾಡ ಅವರ ಔದಾರ್ಯದ ಫಲವಾಗಿ ಒಂದು ಉತ್ತಮವಾದ ಗ್ರಂಥಭಂಡಾರವನ್ನು ೧೯೨೭ ರಲ್ಲಿ ಸ್ಥಾಪಿಸಿದ್ದಾರೆ. ಶ್ರೀ. ಸಯಾಜಿರಾವ ಗಾಯಕವಾಡ ಅವರು ತಮ್ಮ ದಾನಗಳಷ್ಟೆ ಅಲ್ಲದೆ ಬಡೋದೆಯಂತಹ ಹಿಂದುಳಿದ ಸಂಸ್ಥಾನದಲ್ಲಿ ಕೂಡ ಎಷ್ಟೊ ಪ್ರಗತಿಶೀಲ ಕಾರ್ಯಗಳನ್ನು ಕೈಕೊಂಡು ಅತ್ಯಲ್ಪ ಕಾಲದಲ್ಲಿಯೆ ಆದನ್ನು ಉನ್ನತಗೊಳಿಸಿದವರು. ಗ್ರಂಥಾಲಯ ಪ್ರಪಂಚದಲ್ಲಿಯೂ

ಬಡೋದೆಯು ಇವರ ಆಶ್ರಯದ ಫಲವಾಗಿ ಉಚ್ಚಸ್ಥಾನವನ್ನು ಗಳಿಸಿದೆ. ಬನಾರಸದ ಈ ಸರಸ್ವತೀ ಭಂಡಾರದ ಕಟ್ಟಡವನ್ನು ಅಮೇರಿಕೆಯ ಕಾಂಗ್ರೆಸ್ಸಿನ ಗ್ರಂಥಾಲಯದ ಮಾದರಿಯ ಮೇಲೆ ರೂಪಿಸಿದ್ದರೂ ಈಗ ಪೂರ್ತಿಯಾಗಿರುವದು ಮೂಲ ಕಲ್ಪನೆಯ ಒಂದು ಕಾಲು ಭಾಗ ಮಾತ್ರ. ಆದರೂ ಸಂಸ್ಕೃತ, ಪ್ರಾಕೃತ, ಪಾಲಿ, ಅರ್ಧಮಾಗಧಿಗಳೆ ಮೊದಲಾದ ಪೌರ್ವಾತ್ಯ ಸಾಹಿತ್ಯಗಳು, ದರ್ಶನ, ಗಣಿತ, ವೈದ್ಯಕಗಳೆ ಮೊದಲಾದ ಪ್ರಾಚ್ಯಶಾಸ್ತ್ರಗಳು, ಇತರ ಆಧುನಿಕ ಶಾಸ್ತ್ರಗಳು ಈ ವಿಷಯಗಳಿಗಾಗಿ ಹೆಸರಾದ ಈ ಗ್ರಂಥಸಂಕಲನದಲ್ಲಿ ಒಂದೂ ಮುಕ್ಕಾಲು ಲಕ್ಷಕ್ಕಿಂತ ಹೆಚ್ಚು ಪುಸ್ತಕಗಳಿವೆ. ವರ್ಷವೊಂದಕ್ಕೆ ಒಂದೂವರೆ ಲಕ್ಷ ರೂಪಾಯಿಗಳ ವೆಚ್ಚವು ಈ ಗ್ರಂಥಾಲಯದಲ್ಲಿ ಆಗುತ್ತಿದ್ದು ಅದರಲ್ಲಿ ಒಂದುಮೂರಾಂಶವು ಪುಸ್ತಕಗಳಿಗಾಗಿ ವಿನಿಯೋಗಿಸಲ್ಪಡುತ್ತದೆ. ಕೇವಲ ಪತ್ರಿಕೆಗಳಿಗಾಗಿ ಇಲ್ಲಿ ಮೂವತ್ತುಸಾವಿರ ರೂಪಾಯಿಗಳ ವೆಚ್ಚವಿರುತ್ತದೆ.

ಇತ್ತ ಮುಂಬಯಿಯ ಪ್ರಾಂತೀಯ ಕೇಂದ್ರ ಗ್ರಂಥಾಲಯದ ಇತಿಹಾಸವೊಂದು ಬೇರೆಯಾಗಿಯೆ ಇರುತ್ತದೆ. ಇದು ೧೮೦೪ ರಲ್ಲಿ ಹುಟ್ಟಿದ ಸಂಸ್ಥೆ; ರಾಯಲ್ ಏಶಿಯಾಟಿಕ್ ಸೊಸೈಟಿಯ ಗ್ರಂಥಭಂಡಾರವಾಗಿದ್ದುದು ಮುಂಬಯಿ ಸರಕಾರವು ೧೯೪೦ ರಲ್ಲಿ ಸ್ಥಾಪಿಸಿದ ಗ್ರಂಥಾಲಯ ಅಭಿವೃದ್ಧಿ ಸಮಿತಿಯ ಸೂಚನೆಯ ಮೇರೆಗೆ ಇದನ್ನು ಪ್ರಾಂತೀಯ ಕೇಂದ್ರ ಗ್ರಂಥಭಂಡಾರವನ್ನಾಗಿಸಿದ್ದಾರೆ. ಮುಂಬಯಿಯ ಭವ್ಯವೂ ಪ್ರಶಸ್ತವೂ ಆಗಿರುವ ನಗರಭವನದಲ್ಲಿ ಈ ಗ್ರಂಥಸಂಗ್ರಹವಿರುತ್ತದೆ. ಬೃಹನ್ಮುಂಬಯಿಯ ವಾಚನಸೌಕರ್ಯಗಳಿಗಾಗಿ ಈ ಸ್ಥಳವು ವಿಖ್ಯಾತವಾಗಿದೆ. ಒಟ್ಟು ಒಂದೂವರೆ ಲಕ್ಷಕ್ಕೆ ಮೇಲ್ಪಟ್ಟ ಪುಸ್ತಕಗಳು ಇಲ್ಲಿವೆ. ಸಾಹಿತ್ಯ, ಶಾಸನಸಾಸ್ತ್ರ, ಚರಿತ್ರೆಗಳೆ ಮೊದಲಾದ ವಿಷಯಗಳು ಇಲ್ಲಿಯ ವೈಶಿಷ್ಟ್ಯಪೂರ್ಣ ಸಂಗ್ರಹಗಳಲ್ಲಿವೆ. ಈ ಸಂಸ್ಥೆಯ ವಾರ್ಷಿಕ ವೆಚ್ಚವು ಒಂದು ಲಕ್ಷ ರೂಪಾಯಿಯಷ್ಟಿರುತ್ತದೆ. ಇಲ್ಲಿ ಕೇವಲ ವಾಚನ ವ್ಯವಸ್ಥೆಯಷ್ಟೆ ಇರುತ್ತದಲ್ಲದೆ, ವಿವಿಧ ಉಪನ್ಯಾಸಗಳು, ಚರ್ಚೆಗಳು, ಪ್ರಕಟನೆಗಳು ಈ ಸಂಸ್ಥೆಯ ಆಶ್ರಯದಲ್ಲಿ ಜರುಗುತ್ತವೆ. ಇಡಿಯ ಮುಂಬಯಿ ಪ್ರಾಂತದಲ್ಲಿರುವ ಎಲ್ಲ ಗ್ರಂಥಭಂಡಾರಗಳಿಗೆ ಇದೊಂದು ಮಾರ್ಗದರ್ಶನ ಮಾಡುವ ಕೇಂದ್ರವೆನ್ನಿಸಿಕೊಂಡಿದೆ.

ಕೊನೆಯದಾಗಿ ಮದರಾಸು ವಿಶ್ವವಿದ್ಯಾಲಯದ ಗ್ರಂಥಸಂಗ್ರಹವನ್ನು ತೆಗೆದುಕೊಳ್ಳಬಹುದು. ವಿಸ್ತಾರದಲ್ಲಿ ಚಿಕ್ಕದೂ, ಆಡಂಬರದಲ್ಲಿ ಆಸ್ಥೆಯಿಲ್ಲದ್ದೂ ಆದ ಈ ಸಂಸ್ಥೆಯು ಓದುಗರಿಗೆ ಒದಗಿಸುವ ಅನುಕೂಲತೆಗಳಿಗಾಗಿ ಲೋಕ ಪ್ರಿಯತೆಯನ್ನು ಪಡೆದಿದೆ. ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೆಂದು ಪ್ರಾಮುಖ್ಯವಾಗಿ ಈ ಗ್ರಂಥಾಲಯವು ಏರ್ಪಟ್ಟಿದ್ದರೂ ಬೇರೆ ನಾಗರಿಕರಿಗೂ ಇದರ ಸೌಲಭ್ಯವನ್ನು ಪಡೆಯುವ ಸೌಕರ್ಯ ಇಲ್ಲಿದೆ. ಈ ಗ್ರಂಥಾಲಯದ ಆಶ್ರಯದಲ್ಲಿಯೆ ಹೆಚ್ಚು ಪ್ರಗತಿಶೀಲ ಎನ್ನಿಸಿದ ದ್ವಿಬಿಂದು ವರ್ಗೀಕರಣ ಪದ್ಧತಿ, ಹೆಚ್ಚು ಅನುಕೂಲವಾದ ಸೂಚೀಕರಣ ಶಾಸ್ತ್ರ, ಮಿತವ್ಯಯವನ್ನು ತೋರಿಸುವ ಆಡಳಿತದ ನಿಯಮಗಳು ಮುಂತಾದವು ಹುಡುಕಿ ತೆಗೆಯಲ್ಪಟ್ಟು ಈ ಸಂಸ್ಥೆಯ ಮುಖಾಂತರವಾಗಿಯೆ ಪ್ರಚಾರದಲ್ಲಿ ಬಂದಿವೆ. ಈ ಗ್ರಂಥಾಲಯದಲ್ಲಿ ಒಂದೂವರೆ ಲಕ್ಷದಷ್ಟು ಗ್ರಂಥಗಳ ಸಂಗ್ರಹವಿದೆ; ವರ್ಷಕ್ಕೆ ಇದು ಕೇವಲ ಅಯ್ದು ಸಾವಿರ ರೂಪಾಯಿಗಳನ್ನು ಖರ್ಚುಮಾಡುತ್ತಿದ್ದು ಅದರಲ್ಲಿ ಮೂರು ಸಾವಿರ ರೂಪಾಯಿಗಳನ್ನು ಪುಸ್ತಕಗಳಿಗಾಗಿ ಉಪಯೋಗಿಸುತ್ತಾರೆ. ಗ್ರಂಥಭಂಡಾರಿಗರ ವರ್ಗಗಳನ್ನು ನಡೆಯಿಸುವದೊಂದು ಈ ಸಂಸ್ಥೆಯ ಹಿರಿಯ ಸೇವೆಯಾಗಿದೆ.

ಈ ವರೆಗೆ ನೋಡಿದ ವಿವಿಧ ಗ್ರಂಥಾಲಯಗಳ ಚರಿತ್ರೆ ಮತ್ತು ಚಿತ್ರಗಳಿಂದ ನಮ್ಮ ಕನ್ನಡ ನಾಡಿಗೂ ಒಂದು ಕೇಂದ್ರ ಗ್ರಂಥಭಂಡಾರವು ಅಗತ್ಯವಾಗಿರುವದು ಎಂಬ ವಿಚಾರ ಬಾರದಿರದು. ಈಗ ಕನ್ನಡನಾಡಿನಲ್ಲಿ ಎರಡು ವಿಶ್ವವಿದ್ಯಾಲಯ ಗ್ರಂಥಭಂಡಾರಗಳೂ, ಒಂದು ಪ್ರಾದೇಶಿಕ ಗ್ರಂಥಾಲಯವೂ, ಹತ್ತೆಂಟು ಸಾರ್ವಜನಿಕ ಗ್ರಂಥಭಂಡಾರಗಳೂ, ನೂರಾರು ಸಾಮಾನ್ಯ ಗ್ರಂಥಭಂಡಾರಗಳೂ ಇರುತ್ತವೆ. ಆದರೆ ಇಡಿಯ ಕನ್ನಡನಾಡಿನ ಬೇಡಿಕೆಗಳನ್ನು ಪೂರೈಸುವ ಧ್ಯೇಯ ಮತ್ತು ಸೌಕರ್ಯಗಳುಳ್ಳ ಸಂಸ್ಥೆಯು ಇವುಗಳಲ್ಲಿ ಒಂದೂ ಆಗಿರದಿರುವದೊಂದು ಕೊರತೆಯಾಗಿದೆ; ಕೊರೆತಯೆನಿಸಿದೆ.

ಆದರೆ ಈ ಬಗೆಯ ಒಂದು ಪ್ರಾಂತೀಯ ಸಂಘಟನೆಯು ಜನ್ಮತಾಳಬೇಕಾದರೆ ಅದಕ್ಕಿಂತ ಮುಂಚಿತವಾಗಿ ಕರ್ನಾಟಕ ಪ್ರಾಂತದ ನಿರ್ಮಾಣವಾಗಬೇಕು ಎಂಬ ಒಂದು ಮಾತನ್ನು ಯಾರಾದರೂ ಮುಂದೊಡ್ಡಬಹುದು. ಈಗ ಅಯ್ದು ವರ್ಷಗಳ ಹಿಂದೆ ಇಪ್ಪತ್ತಕ್ಕಿಂತ ಹೆಚ್ಚು ಆಡಳಿತಗಳಲ್ಲಿ

ಹರಿದು ಹಂಚಿ ಹೋಗಿದ್ದ ಕನ್ನಡನಾಡು ಈಗ ಅಯ್ದು ಆಡಳಿತಗಳಲ್ಲಿ ಸಮಾವೇಶಗೊಂಡಿದೆ. ಈ ವಿಭಜನೆಯು ಕೂಡ ಇಷ್ಟರಲ್ಲಿಯೆ ಮಾಯವಾಗಿ ಒಂದು ಪ್ರಾಂತವು ಹುಟ್ಟುವದು ಅಗತ್ಯ ಮತ್ತು ಸಾಧ್ಯವಾಗಿದೆ. ಅಂತೆಯೆ ಅಂತಹದೊಂದು ಪ್ರಾಂತವು ಅಸ್ತಿತ್ವದಲ್ಲಿ ಬರುವದು ಖಂಡಿತ ಎಂದು ನಂಬಿದ ಇಂತಹ ಸಂದರ್ಭದಲ್ಲಿ ನಮ್ಮ ಕೇಂದ್ರ ಗ್ರಂಥಭಂಡಾರದ ರೂಪರೇಷೆಯು ಎಂತಹದಾಗಿರಬೇಕು ಎಂಬುದನ್ನು ತಿಳಿಯುವದು ಅವಶ್ಯವಾಗಿದೆ.

ಮೊದಲನೆಯದಾಗಿ ಈ ಬಗೆಯ ಕೇಂದ್ರ ಗ್ರಂಥಭಂಡಾರವು ನಮ್ಮ ಸಾಂಸ್ಕೃತಿಕ ಜೀವನದ ಒಂದು ಪ್ರತೀಕವಾಗಿರಬೇಕು. ನಮ್ಮ ಇಪ್ಪತ್ತು ಜಿಲ್ಲೆಗಳಷ್ಟು ಪ್ರದೇಶದಲ್ಲಿಯಷ್ಟೆ ಅಲ್ಲದೆ ಕನ್ನಡನಾಡಿನ ವಿಷಯವಾಗಿ ಮತ್ತು ಕನ್ನಡಿಗರು, ಎಲ್ಲಿಂದಲೇ ಆಗಲಿ, ಬರೆದ ಎಲ್ಲ ಪುಸ್ತಕಗಳ ಮತ್ತು ಪ್ರಕಟಿಸಿದ ಸಕಲಪತ್ರಿಕೆಗಳ ಪ್ರತಿಗಳು ಇಲ್ಲಿ ಉಪಲಬ್ಧವಾಗಬೇಕು. ಕನ್ನಡ ವಾಚಕರಿಗೆ ಬೇಕಾಗುವ ಆಧುನಿಕ ಎಲ್ಲ ಶಾಸ್ತ್ರಗಳ ಮತ್ತು ಕಲೆಗಳ ಸರ್ವೋಚ್ಚ ಗ್ರಂಥ ಸಂಗ್ರಹವು ಇಲ್ಲಿ ಇರುವದು ಸಹಜವಾದುದು. ವರ್ಗೀಕರಣ ಮತ್ತು ಸೂಚೀ ಕರಣದ ವಿಷಯದಲ್ಲಿ ಈ ಸಂಸ್ಥೆಯು ನಾಡಿನ ಎಲ್ಲ ಗ್ರಂಥಾಲಯಗಳಿಗೆ ಸಹಾಯಕ ಮತ್ತು ಮಾರ್ಗದರ್ಶಕವಾಗಿರಬೇಕು. ಇವಷ್ಟೇ ಅಲ್ಲದೆ ನಮ್ಮ ಜನರು ಪ್ರಾವೀಣ್ಯವನ್ನು ಪಡೆದಿರುವ ಯಾವುದಾದರೊಂದು ಶಾಸ್ತ್ರದಲ್ಲಿ ಯಾಗಲಿ, ಕಲೆಯಲ್ಲಿಯಾಗಲಿ ರಾಷ್ಟ್ರೀಯ ಕಾರ್ಯವಿನಿಮಯದ ಮೇರೆಗೆ ಎಲ್ಲ ಗ್ರಂಥಗಳನ್ನು ಸಂಗ್ರಹಿಸುವ ಹೊಣೆಯುಳ್ಳದ್ದಾಗಿರಬೇಕು. ಇತ್ತ ಪ್ರಪಂಚದ ಎಲ್ಲ ಜ್ಞಾನದ ಬಗ್ಗೆ ತವರುಮನೆಯಂತೆ ಕನ್ನಡಿಗರಿಗೆಲ್ಲ ಆಕರ್ಷಕವಾಗಿರ ಬೇಕಾದ ಈ ಸಂಸ್ಥೆಯು ರಾಷ್ಟ್ರದ ಗ್ರಂಥಾಲಯ ವ್ಯವಸ್ಥೆಯಲ್ಲಿ ಒಂದು ಪ್ರಮುಖ ಅಂಗವಾಗಿರಬೇಕು. ನಾಡಿನ ವಿದ್ಯಾಪ್ರಸಾರ ಕಾರ್ಯದಲ್ಲಿ ಅನಿ ವಾರ್ಯವಾದ ಗ್ರಂಥಾಲಯ ಆಂದೋಲನಕ್ಕೆ ಇಂತಹ ಸಂಸ್ಥೆಯು ಸ್ವಾಭಾವಿಕ ವಾಗಿಯೆ ಸ್ಫೂರ್ತಿಯಾಗಿರಬೇಕು. ಇಂತಹದೊಂದು ಕೇಂದ್ರ ಭಂಡಾರವು ನಮ್ಮ ಪ್ರಾಂತದಲ್ಲಿ ಶೀಘ್ರವಾಗಿ ಹುಟ್ಟಲಿ ಎಂದು ಆಶಿಸೋಣ.

# ೩. ಆಂದೋಲನ



ಗ್ರಂಥಾಲಯ ಆಂದೋಲನವೆಂದರೆ ಏನು? ಅದೊಂದು ವಿಶಿಷ್ಟವಾದ ಮತ್ತು ಪ್ರತ್ಯೇಕವಾದ ಉದ್ದೇಶ ಮತ್ತು ಕಾರ್ಯಯೋಜನೆಯುಳ್ಳ ಸ್ವತಂತ್ರವಾದ ಚಳುವಳಿಯೊ, ಅಥವಾ ರಾಷ್ಟ್ರದ ಧ್ಯೇಯಗಳನ್ನೇ ಹೆಚ್ಚು ಸರಳವಾಗಿಯೂ ಸುಲಭವಾಗಿಯೂ ಸಾಧಿಸಿಕೊಳ್ಳಲಿಕ್ಕೆ ಅನುಸರಿಸಿದ ಕ್ರಮವೊ? ಈ ಬಗೆಯಾದ ಸಮಸ್ಯೆಯನ್ನು ನಾವು ಸಮಸ್ಯೆಯಾಗಿ ಭಾವಿಸುವದಾದರೆ ಅದನ್ನು ತಿಳಿದುಕೊಳ್ಳಲಿಕ್ಕೆ ನಮ್ಮ ದೇಶದೊಳಗೆ ಅಸ್ತಿತ್ವದಲ್ಲಿದ್ದರೂ ಪರಿಣಾಮಕಾರಿಯಾಗದ ಗ್ರಂಥಾಲಯ ಚಳುವಳಿಯ ಕಳೆದ ಒಂದೂವರೆ ನೂರು ವರ್ಷಗಳ ಚರಿತ್ರೆಯನ್ನು ನೋಡಬಹುದು. ಇತ್ತ ಅದೊಂದು ರಾಷ್ಟ್ರೀಯ ಜೀವನದ ಪೂರಕವಾದ ಆಂದೋಲನ ಎಂಬ ಮಾತನ್ನು ಒಪ್ಪುವಂತಿದ್ದರೆ ಪ್ರಪಂಚದ ಮಿಕ್ಕ ರಾಷ್ಟ್ರಗಳಲ್ಲಿ ಜನರ ಸಾಂಸ್ಕೃತಿಕ ಉತ್ಕರ್ಷೆ ಮತ್ತು ವಿಕಾಸಗಳಿಗಾಗಿ ಗ್ರಂಥಾಲಯ ಆಂದೋಲನವು ಎಂತಹ ಘನಿಷ್ಠವಾದ ಮತ್ತು ಜೀವಾಳದ ಸಹಾಯವನ್ನು ನೀಡಿತು ಎಂಬುದನ್ನು ಅರಿತುಕೊಳ್ಳಬಹುದು.

ಆಧುನಿಕ ಕಲ್ಪನೆಯ ಗ್ರಂಥಾಲಯ ಆಂದೋಲನವು ನಮ್ಮ ದೇಶದಲ್ಲಿ ಇನ್ನೂ ಅಸ್ತಿತ್ವದಲ್ಲಿ ಬಂದೇ ಇಲ್ಲ ಎಂಬ ಮಾತು ಯಾರಿಗಾದರೂ ಆಶ್ಚರ್ಯವನ್ನುಂಟುಮಾಡಬಹುದು. ಭಾರತದ ತುಂಬೆಲ್ಲ ಇಷ್ಟು ಗ್ರಂಥಭಂಡಾರಗಳು ಹುಟ್ಟಿರುತ್ತವೆ; ದಾನಿಗಳು, ಸಮಾಜಸೇವಾಧುರಂಧರರು, ಸರಕಾರ ಗ್ರಂಥಭಂಡಾರಗಳ ಅಭಿವೃದ್ಧಿಗಾಗಿ ಎನಿತೊಂದು ಪರಿಶ್ರಮ–ಸಾಹಸ–ವೆಚ್ಚಗಳನ್ನು ಗೈಯುತ್ತಲಿದ್ದಾರೆ; ಭಾರತದ ವಿವಿಧ ಪ್ರಾಂತಗಳಲ್ಲಿ ಗ್ರಂಥಾಲಯ ಸಂಘಗಳು ಎಂಬ ಸಂಸ್ಥೆಗಳು ರೂಪುಗೊಂಡು ಈಗ ಎಷ್ಟೋ ವರ್ಷಗಳಿಂದ ಕಾರ್ಯನಿರತವಾಗಿವೆ; ಗ್ರಂಥಾಲಯ ಶಾಸ್ತ್ರ, ಗ್ರಂಥಾಲಯ ವರ್ಗಗಳು, ಗ್ರಂಥಾಲಯ ಸಂಶೋಧನ ಮುಂತಾದ ವಿಷಯವಾಗಿ ಇಷ್ಟೊಂದು ಮಾತು ಈಗ ಅನೇಕ ದಶಕಗಳಿಂದ ಕೇಳಿಬರುತ್ತದೆ; ಹೀಗಿದ್ದರೂ ಇನ್ನೂ ನಮ್ಮ

ದೇಶದಲ್ಲಿ ಗ್ರಂಥಾಲಯ ಆಂದೋಲನವೆ ಆರಂಭವಾಗಿಲ್ಲ; ಬೇರೊಡೆದಿಲ್ಲ ಎಂಬ ಅನರ್ಥದ ಮಾತಿನಿಂದ ಏನು ಉಪಯೋಗ? ಎಂದು ಯಾರಾದರೂ ಸೋಜಿಗಬಟ್ಟು ಕೇಳಬಹುದು. ಆದರೆ ಈ ಪ್ರಶ್ನೆಗೆ ಉತ್ತರವನ್ನು ಪಡೆಯು ವವರು ನಮ್ಮ ದೇಶದೊಳಗಿನ ಈಗಿನ ಅನೇಕ ಗ್ರಂಥಾಲಯಗಳ ಉಗಮ ಮತ್ತು ಅವು ಆರಂಭವಾದ ಕಾಲ ಹಾಗೂ ಅವು ಅಸ್ತಿತ್ವದಲ್ಲಿ ಬಂದ ಉದ್ದೇಶ ಇವುಗಳನ್ನು ಮೊದಲು ಅರ್ಥಮಾಡಿಕೊಳ್ಳಬೇಕು. ಆಮೇಲೆ ಈ ಮಾತಿನ ಸತ್ಯತೆಯು ತಾನೇ ಹೊಳೆಯುವದು.

ಭಾರತದಲ್ಲಿ ಹೊಸ ಬಗೆಯ ಗ್ರಂಥಾಲಯಗಳು ಮತ್ತು ಪಾಶ್ಚಾತ್ಯ ಪದ್ಧತಿಯ ಗ್ರಂಥಾಲಯ ಸಂಘಗಳು ಗ್ರಂಥಪ್ರಸಾರ ಮತ್ತು ಗ್ರಂಥಸೇವೆ ಯನ್ನು ಸಲ್ಲಿಸುತ್ತಿರುವದು ತೀರ ಇತ್ತೀಚಿನಿಂದ. ಅದಕ್ಕೆ ಮುಂಚಿತವಾಗಿ ನಮ್ಮಲ್ಲಿದ್ದ ಗ್ರಂಥಭಂಡಾರಗಳು ಕೇವಲ ಗ್ರಂಥಸಂಗ್ರಹಗಳಾಗಿದ್ದುವು. ಈ ನೂರಾರು ವರ್ಷಗಳ ಹಿಂದಿನಿಂದಲೇ ಜನ್ಮತಾಳಿ, ಈಗ್ಗೆ ಕೂಡ ಕಾರ್ಯ ಮಾಡುತ್ತಿದ್ದ ಒಂದು ರಾಷ್ಟ್ರೀಯ ಗ್ರಂಥಾಲಯವನ್ನೆ ಆಗಲಿ, ಇಲ್ಲವೆ ಭಾರತದ ಮೂರು ಪ್ರಮುಖ ಪ್ರಾಂತೀಯ ರಾಜಧಾನಿಗಳಾಗಿದ್ದ ಕಲ್ಕತ್ತೆ, ಮುಂಬಯಿ ಮತ್ತು ಮದರಾಸು ಇಲ್ಲಿಯ ಸರಕಾರೀ ಗ್ರಂಥಸಂಚಯಗಳನ್ನೆ ಆಗಲಿ, ಇಲ್ಲವೆ ರಾಯಲ್ ಏಶಿಯಾಟಿಕ್ ಸೊಸೈಟಿ ಎಂಬ ವಿದ್ವತ್ಸಂಘವು ಸ್ಥಾಪಿಸಿಕೊಂಡ ಗ್ರಂಥಾಲಯವನ್ನೆ ಆಗಲಿ ನಾವು ಐತಿಹಾಸಿಕ ದೃಷ್ಟಿಯಿಂದ ಅಭ್ಯಸಿಸಿ ನೋಡಿದರೆ ಅವು ಮೊಟ್ಟಮೊದಲಾಗಿ ಕೇವಲ ಕೆಲವು ಗ್ರಂಥಗಳ, ಪತ್ರಿಕೆಗಳ ಮತ್ತು ಅಧಿಲೇಖನಗಳ ಉಗ್ರಾಣಗಳಾಗಿದ್ದವು, ಎಂಬ ಸಾಮಾನ್ಯ ವೆನಿಸುವ ಸಂಗತಿಯು ಗೊತ್ತಾಗುವದು. ಆದರೆ ಇಂತಹ ಸಂಗ್ರಹಗಳು ಆಗ್ಗೆ ಜನಸಾಮಾನ್ಯರಿಗೆ ದೊರೆಯುತ್ತಿದ್ದವೆ? ಜನಸಾಮಾನ್ಯರ ಉಪಯೋಗ ಅಧ್ಯಯನ, ಅಧ್ಯಾಪನಗಳಿಗಾಗಿ ಅಣಿಯಾಗುತ್ತಿದ್ದವೆ? ಇದು ಸ್ಪಷ್ಟವಾದ ಮಾತು. ಆ ಸಂಗ್ರಹಗಳು ಹೆಚ್ಚಾಗಿ ಆಗಿನ ಸರಕಾರೀ ಅಧಿಕಾರಿಗಳ ಮತ್ತು ವಿದೇಶೀಯ ಪ್ರಜೆಗಳ ಅನುಕೂಲ ಮತ್ತು ಪ್ರಯೋಜನಗಳಿಗಾಗಿ ಮಾತ್ರ ಏರ್ಪಡಿಸಿದ ಸಂಸ್ಥೆಗಳ ಉಪಯುಕ್ತ ಅಂಗಗಳಾಗಿದ್ದುವು. ಇತರ ಪ್ರಜೆಗಳ ಸೌಕರ್ಯಗಳತ್ತ ಅಥವಾ ಅವರ ಪ್ರಾಥಮಿಕ ಬೇಡಿಕೆಗಳತ್ತ ಲಕ್ಷ್ಯವನ್ನು ಪೂರೈಸುವ ಸಮಯವು ಕೂಡ ಆಗಿನದು ಆಗಿರಲಿಲ್ಲ; ಇಂತಹ ಅಧಿಕಾರ

ಮತ್ತು ನ್ಯಾಯ್ಯವಾದ ವಿನಿಯೋಗಗಳ ಮಾತಂತೂ ಎಂದಿಗೂ ಆಗಿನ ಆಡಳಿತದ ಪ್ರಮೇಯವಾಗಿರಲಿಲ್ಲ.

ಆದರಂತೆಯೆ ಮುಂದೆ ೧೮೬೭ ರಲ್ಲಿ ಸ್ವೀಕೃತವಾದ ಒಂದು ಕಾನೂನಿನ ವಿಷಯವನ್ನು ನಾವು ಇಲ್ಲಿ ವಿಚಾರಮಾಡಬಹುದು. ಈ ಕಾನೂನು ಮುದ್ರಣಾಲಯ ಮತ್ತು ಪುಸ್ತಕನೋಂದಕ ವಿಷಯಗಳಿಗೆ ಸಂಬಂಧಿಸಿದುದು. ಇದರ ಮೇರೆಗೆ ಪ್ರತಿಯೊಂದು ಮುದ್ರಣಶಾಲೆಯು ಮತ್ತು ಪ್ರತಿಯೊಬ್ಬ ಮುದ್ರಕ ಇಲ್ಲವೆ ಪ್ರಕಾಶಕನು ತಾನು ಹೊರಡಿಸಿದ ಪತ್ರಿಕೆ ಇಲ್ಲವೆ ತಾನು ಪ್ರಕಾಶಗೊಳಿಸಿದ ಪುಸ್ತಕದ ಪ್ರತಿಗಳನ್ನು ಆ ಆ ಜಿಲ್ಹಾಧಿಕಾರಿಗೆ ಒಪ್ಪಿಸಬೇಕಾಗಿದೆ. ಈ ಕಾಯದೆಯು ಈಗ್ಗೆ ಕೂಡ ಪ್ರಚಾರದಲ್ಲಿದ್ದು ಮೊದಲಿನ ಉದ್ದೇಶಗಳೆಲ್ಲ ಈಡೇರದೆ ಕೇವಲ ಔಪಚಾರಿಕವಾದ ಅದರ ಭಾಗವು ಮಾತ್ರ ಕಾರ್ಯಕಾರಿಯಾಗುತ್ತಿರುವದು ಸೋಜಿಗದ ಸಂಗತಿಯಾಗಿದೆ; ಒಂದು ಪುಸ್ತಕವು ಮುದ್ರಿತವಾಗಿ ಒಂದು ತಿಂಗಳ ಅವಧಿಯಲ್ಲಿ ಮುದ್ರಕ ಇಲ್ಲವೆ ಪ್ರಕಾಶಕರು ಒಂದು ಪ್ರತಿಯನ್ನಾಗಲಿ, ಅದು ಮುದ್ರಿತವಾಗಿ ಒಂದು ವರ್ಷದ ಅವಧಿಯಲ್ಲಿ ಸಂಬಂಧಪಟ್ಟ ಅಧಿಕಾರಗಳಿಂದ ಬೇಡಿಕೆಯು ಬಂದಾಗ ಎರಡು ಪ್ರತಿಗಳನ್ನಾಗಲಿ ಸರಕಾರೀ ಪತ್ರಿಕೆಯಲ್ಲಿ ಸೂಚಿಸಿದ ಅಧಿಕಾರಿಗಳಿಗೆ ಒಪ್ಪಿಸಬೇಕಾದುದು ಆ ಕಾಯದೆಯ ನಿಯಮವಾಗಿರುತ್ತದೆ. ಈ ನಿಯಮವನ್ನನುಸರಿಸಿ ಈಗ್ಗೆ ಕೂಡ ಹಾಗೆ ಪ್ರತಿಗಳು ಜಿಲ್ಹಾಧಿಕಾರಿಗಾಗಲಿ, ಪ್ರಾಂತಾಧಿಕಾರಿಗಾಗಲಿ ಹೋಗುತ್ತಿದ್ದರೂ ಅದರ ಮಿಕ್ಕ ಕೆಲವು ಸೌಲಭ್ಯಗಳು ಮಾತ್ರ ಜನರಿಗೆ ದೊರೆಯುತ್ತಿರುವದಿಲ್ಲ. ಅದೇ ಕಾನೂನಿನ ಇನ್ನೊಂದು ನಿಯಮದ ಮೇರೆಗೆ ಹಾಗೆ ಕೊಡಲ್ಪಟ್ಟ ಗ್ರಂಥಗಳ ಪಟ್ಟಿಯನ್ನು ಆಗಾಗ್ಗೆ ಸರಕಾರೀ ಪತ್ರಿಕೆಯಲ್ಲಿ (Gazette) ಪ್ರಕಟಗೊಳಿಸಬೇಕು; ಅಂತು ಪಡೆದ ಪುಸ್ತಕಗಳಲ್ಲಿ ಒಂದನ್ನು ಲಂಡನ್ನಿನಲ್ಲಿರುವ ಬ್ರಿಟಿಶ್ ಮ್ಯೂಜಿಯಮ್ ಗ್ರಂಥಾಲಯಕ್ಕೆ ಸಾಗಿಸಬೇಕು ಮತ್ತು ಇನ್ನೊಂದನ್ನು ಭಾರತದ ವಿವಿಧ ಪ್ರಾಂತೀಯ ಕೇಂದ್ರಗಳಲ್ಲಿ ಸಂಗ್ರಹಿಸಬೇಕು ಎಂಬ ಆಶಯದ ಅಂಶಗಳಿರುತ್ತವೆ. ನಿಜವಾಗಿಯೂ ನೋಡಿದರೆ ಈ ಕಾಯದೆಯಷ್ಟೆ ಇಡಿಯ ದೇಶದ ತುಂಬೆಲ್ಲ ಚೈತನ್ಯಯುಕ್ತವಾದ ಗ್ರಂಥಾಲಯ ಆಂದೋಲನವನ್ನು ಆರಂಭಮಾಡಲಿಕ್ಕೆ ಸಹಾಯಕವಾಗಬೇಕಾಗಿತ್ತು. ಆದರೆ ತದ್ವಿರುದ್ಧವಾಗಿ ಆಗಿನ ನಮ್ಮ ಆಡಳಿತಗಾರರಿಂದ ಅನುಕೂಲ ಮತ್ತು

ಆವಶ್ಯಕ ಎನಿಸಿದ ಕಾಯದೆಯ ನಿಯಮಗಳು ಮಾತ್ರ ಪಾಲಿಸಲ್ಪಟ್ಟು ಮಿಕ್ಕ ಅಭಿವೃದ್ಧಿಯ ಮತ್ತು ಸಮಾಜರಕ್ಷಣೆಯ ನಿಯಮಗಳು ಅನಾಯಾಸವಾಗಿ ದುರ್ಲಕ್ಷಿಸಲ್ಪಟ್ಟವು.

ಆಡಳಿತದ ಈ ಬಗೆಯ ಆಚರಣೆಗೆ ಕಾರಣಗಳೂ ಇದ್ದುವು ಎನ್ನ ಬಹುದು. ಮೇಲೆ ವಿವರಿಸಿದ ಕಾಯದೆಯು ಸ್ವೀಕೃತವಾಗುವ ವಾತಾವರಣವೆ ಆಗಲಿ,ಅದಕ್ಕೂ ಮುಂಚಿನ ಪರಿಸ್ಥಿತಿಯೆ ಆಗಲಿ ಚರಿತ್ರೆಯ ಹಿನ್ನೆಲೆಯಲ್ಲಿ ತಮ್ಮ ಆವಶ್ಯಕತೆಯನ್ನು, ಅಸ್ತಿತ್ವವನ್ನು ಸಾಕಷ್ಟು ವಿಶದವಾಗಿ ತಿಳಿಯಪಡಿಸುವವು. ೧೮೫೭ ರ ಮಹಾಕ್ರಾಂತಿಯ ಮುಂಚೆ ಬ್ರಿಟಿಶರು ಇನ್ನೂ ತಮ್ಮ ಸಾಮ್ರಾಜ್ಯ ವನ್ನು ಬೆಳೆಯಿಸುವ ಮತ್ತು ಬಲಗೊಳಿಸುವ ಕಾರ್ಯಗಳಲ್ಲಿಯೆ ಹೆಚ್ಚಾಗಿ ಆಸಕ್ತರಾಗಿದ್ದರು. ಅದಕ್ಕೆ ಒಂದು ರೀತಿಯಿಂದ ತಮ್ಮ ದೇಶದೊಳಗೆ ಮತ್ತು ಯುರೋಪದೊಳಗೆ ನಡೆಯುತ್ತಿರುವ ಜ್ಞಾನಪ್ರಸಾರದ ಕಾರ್ಯದ ಪರಿಚಯ ಅವರಿಗೆ ಆಗತ್ಯವಿದ್ದಂತೆಯೆ ಇನ್ನೊಂದು ರೀತಿಯಿಂದ ಭಾರತೀಯ ಸಮಾಜ ರಚನೆಯ, ಭಾರತೀಯ ರೀತಿ–ನೀತಿಗಳ, ಭಾರತೀಯ ಸಾಹಿತ್ಯ ಸಂಗೀತಗಳ ಪರಿಚಯವೂ ಅವರಿಗೆ ಬೇಕೆನಿಸಿತು. ಅಂತೆಯೆ ಅವರು ಇಂತಹ ಸಮಾಚಾರ ವನ್ನು ಸಂಗ್ರಹಿಸುವ, ಬರೆದಿಡುವ ಮತ್ತು ಬರೆದಿಟ್ಟ ಮಾಹಿತಿಯನ್ನು ಒಂದೆಡೆ ಸೇರಿಸಿಡುವ ಕೆಲಸವನ್ನು ಮಾಡಿದರು. ಇವು ಕೇವಲ ತಮ್ಮ ವಿಜಿಗೀಷು ಕಾರ್ಯ ಮತ್ತು ವರ್ಧಿಷ್ಣು ಪ್ರಯತ್ನಗಳಿಗೆ ಪೂರಕವಾಗುವ ಉದ್ದೇಶ ದಿಂದಲೇ ನಡೆದುದು ಭಿನ್ನಾಭಿಪ್ರಾಯವಿಲ್ಲದ ಮಾತು. ಕ್ರಮವಾಗಿ, ಈ ಕೆಲಸದಲ್ಲಿ ಸಮಾಜದ ಬೇರೆ ವಿಭಾಗಗಳಲ್ಲಿ ಸೇವೆಯನ್ನು ಸಲ್ಲಿಸುವ, ಆದರೂ ಸಾಮ್ರಾಜ್ಯ ಸಂವರ್ಧನೆಯ ಕಾರ್ಯದಲ್ಲಿ ನೆರವನ್ನು ನೀಡುವ ಮಿಕ್ಕ ಕೆಲಸ ಗಾರರೂ ಭಾರತದಲ್ಲಿ ಬಂದಿಳಿದರು. ಮೊದಲು ಕೇವಲ ಸೈನಿಕರು, ಸೇನಾಧಿ ಪತಿಗಳು, ಸೈನ್ಯಸೇವಕರು ಇಷ್ಟೆ ಜನರಿಂದ ತುಂಬಿದ ಬ್ರಿಟಿಶ್ ಜನಸಂಖ್ಯೆಯು ಭಾರತದಲ್ಲಿ ಧರ್ಮಾಧಿಕಾರಿಗಳು, ಸಮಾಜಸೇವಕರು, ವಿದ್ಯಾಸಂಪನ್ನರು, ಸಾಮಾನ್ಯ ಅಧಿಕಾರಿಗಳು ಮುಂತಾದವರಿಂದಲೂ ಕೂಡಿಕೊಂಡಿತು. ಈ ಬಗೆಯಾಗಿ ಒಂದೆಡೆಯಲ್ಲಿ ಬಹುಸಂಖ್ಯಾಕರಾಗಿ ಸೇರಿದ ಆ ದೇಶದ, ಆ ಭಾಷೆಯ, ಆ ರೀತಿ ಸಾಂಪ್ರದಾಯಗಳ ಜನರ ಸಾಮಾಜಿಕ ಸಂಪರ್ಕ, ದೈನಂದಿನ ಬೇಡಿಕೆಗಳು ಸಮಾನವಾಗಿ ಬೆಳೆದುದು ಸ್ವಾಭಾವಿಕವಾದ ಲಕ್ಷಣ. ಆ

ಬಗೆಯ ವ್ಯವಸ್ಥೆಯಲ್ಲಿ ಒಂದು ಶಾಲೆ, ಒಂದು ವಿದ್ಯಾಲಯ ಮತ್ತು ಒಂದು ಕ್ಲಬ್ಬು ಇವು ಆರಂಭವಾದಂತೆಯೆ ಸಾಮಾಜಿಕ ಸಂಘಟನೆಯ ಇನ್ನೊಂದು ಅಂಗನೆಂದು ಮತ್ತು ಅದೇ ಸಮಯದಲ್ಲಿ ತಮ್ಮ ತಾಯ್ನಾಡಿನಲ್ಲಿ ಅದ್ಭುತ ವಾದ ಕಾರ್ಯವನ್ನು ಮಾಡುತ್ತಿದ್ದ ಸಂಸ್ಥೆಯಾದ ಗ್ರಂಥಾಲಯವೂ ಆರಂಭಿ ಸಲ್ಪಟ್ಟಿತು ಎಂದು ಹೇಳಬಹುದು.

ಆದರೆ ಇಂತಹ ಪ್ರಾಂತೀಯ ಕೇಂದ್ರಗಳಲ್ಲಿ ಸ್ಥಾಪಿತವಾದ ಸಂಸ್ಥೆಗಳ ವಿನಿಯೋಗವು ಮಾತ್ರ ಕೇವಲ ವಿದೇಶೀಯರಿಗೆ ಹೆಚ್ಚಾಗಿ ಮೀಸಲಾಗಿದ್ದಿತು ಎಂಬ ಮಾತನ್ನು ಇಲ್ಲಿ ಬೇರೆಯಾಗಿ ಹೇಳಬೇಕಾಗಿಲ್ಲವಷ್ಟೆ! ಸಮಾಜದಲ್ಲಿ ಹಿಂದೀ ಯರಿಗೆ ಯಾವ ಮಹತ್ವವೂ ಇರದ್ದರಿಂದ ಅವರನ್ನು ಈ ಸಂಸ್ಥೆಯಿಂದ ಕೂಡ ದೂರ ಇರಿಸಿದುದು ಸ್ವಾಭಾವಿಕವಾಗಿದ್ದಿತು. ಆದರೆ ಒಮ್ಮೆ ಗ್ರಂಥಗಳು ಮತ್ತು ಗ್ರಂಥಾಲಯಗಳು ಜನರ ಕಣ್ಣಿಗೆ ಬಿದ್ದ ಕೂಡಲೆ, ಅಧಿಕಾರಯುಕ್ತ ವಾಗಿ ಆಗದಿದ್ದರೂ ವೈಯಕ್ತಿಕವಾಗಿ, ಖಾಸಗೀ ಸಂಬಂಧದಲ್ಲಿ ಮತ್ತು ಅನೇಕ ಸಾರೆ ಅನಧಿಕೃತವಾಗಿ ಭಾರತೀಯರ ಲಕ್ಷ್ಯವು ಅತ್ತ ಹರಿಯತೊಡಗಿತು. ಅದೇ ಥಾಟಿಯ ಗ್ರಂಥಗಳನ್ನು ರಚಿಸಬೇಕು, ಸಮಾಜದಲ್ಲಿ ಸಮಾಚಾರವನ್ನು ಹರಡಲಿಕ್ಕೆ ಅದೇ ರೀತಿಯಲ್ಲಿ ಪತ್ರಿಕೆಗಳನ್ನು ಹೊರಡಿಸಬೇಕು ಎಂಬ ಪ್ರವೃತ್ತಿಯು, ಅನುಕರಣ ಮೂಲಕವೆ ಆಗಿರಲಿ, ಉದ್ಭವಿಸಿತು. ಹೆಚ್ಚು ಹೆಚ್ಚು ಯುರೋಪದ ಇತರ ದೇಶಗಳ ಜನರ ಮತ್ತು ಇಂಗ್ಲಂಡದ ಜನರ ಸಂಪರ್ಕದಲ್ಲಿ ಭಾರತೀಯರು ಬರಹತ್ತಿದಂತೆ ಅವರ ಜಿಜ್ಞಾಸುಗುಣಗಳು, ಅವರ ಸಂಘಟನೆಯ ಪ್ರಯತ್ನಗಳು, ಅವರ ಸಮಾಜವಿಕಾಸದ ಯೋಜನೆಗಳು ಭಾರತೀಯರ ಮನಸ್ಸನ್ನು ಸೆಳೆದವು. ಮೊದಲೆ ರಾಜಕೀಯ ಸ್ವಾತಂತ್ರ್ಯ ವನ್ನು ಕಳೆದುಕೊಂಡು ಕಷ್ಟದಲ್ಲಿದ್ದ ಭಾರತೀಯರು ಇಂತಹ ಕೆಲವು ಸಾಧನ ಮತ್ತು ವ್ಯವಸ್ಥೆಗಳಿಂದ ಇನ್ನಷ್ಟು ಕಸಿವಿಸಿಪಟ್ಟರು. ಅದನ್ನು ಹೋಗಲಾಡಿಸಿ ಕೊಳ್ಳುವ ವಿಧಾನವೆಂದೇ ಒಂದು ಕಡೆಯಿಂದ ಹೆಚ್ಚು ಹುಮ್ಮಸ್ಸಿನ ಜನರು ರಾಷ್ಟ್ರೀಯ ಮಹಾಕ್ರಾಂತಿಯ ಹವಣದಲ್ಲಿ ಸಿಲುಕಿದರೆ ಇನ್ನು ಹಲವರು ಅಂತಹ ಯುಕ್ತಿವಾದವನ್ನು ಸಾರುವ, ಅದರ ಪ್ರೇರಣೆಯನ್ನು ನೀಡುವ ಸಾಹಿತ್ಯನಿರ್ಮಾಣದಲ್ಲಿ ಮತ್ತು ಸಮಾಚಾರವಿತರಣದಲ್ಲಿ ಹೆಣಗಾಡಿದರು.

ಆದರೆ ರಾಷ್ಟ್ರೀಯ ಆಕಾಂಕ್ಷೆಯ ಮಹಾಕ್ರಾಂತಿಯನ್ನು ಸಾಮ್ರಾಜ್ಯ ವಿರೋಧಕ ಚಳುವಳಿಯೆಂದು ಹತ್ತಿಕ್ಕಿ ಅದನ್ನು ಸಿಪಾಹಿಗಳ ಬಂಡಾಯ ಎಂಬ ಕೀಳ್ಪೆಸರಿನಿಂದ ಕರೆದಂತೆಯೆ ರಾಷ್ಟ್ರಾಭಿಮಾನವನ್ನು ಹುಟ್ಟಿಸುವ ಪತ್ರಿಕೆಗಳು,ರಾಷ್ಟ್ರಭಕ್ತಿಯನ್ನು ಬೆಳೆಯಿಸುವ ಪುಸ್ತಕಗಳು ಇವುಗಳನ್ನು ವಿದ್ರೋಹಕ ಸಾಹಿತ್ಯ ಎಂದು ಸಾರಲಿಕ್ಕೆ ಸಾಕಷ್ಟು ಶಕ್ತಿಯುಳ್ಳ ಅಧಿಕಾರವನ್ನು ಅವರು ಪಡೆಯಬೇಕಾಯಿತು. ಈ ರೀತಿಯಾಗಿ ಪ್ರಚಲಿತ ಸಾಹಿತ್ಯದ ಮೇಲೆ ಒಂದು ಬಂಧನ, ಅದನ್ನು ಹಿಡಿತದಲ್ಲಿಟ್ಟುಕೊಳ್ಳಲಿಕ್ಕೆ ಒಂದು ಸಾಧನ ಎಂಬ ಉದ್ದೇಶದಿಂದ ಮಾತ್ರ ಮೇಲೆ ಕಾಣಿಸಿದ ಕಾಯದೆಯನ್ನು ಆಗ್ಗೆ ಸ್ವೀಕರಿಸಿ ಆಚರಣೆಯಲ್ಲಿ ತರಬೇಕಾಯಿತು. ಈ ಬಗೆಯ ನಿಯಂತ್ರಣದ ಮೂಲ ವಿಚಾರವುಳ್ಳ ಕಾಯದೆಯು ಇದಾಗಿದ್ದರೂ ಇದರ ಇತರ ನಿಯಮಗಳ ಪರಿಪಾಲನೆಯಿಂದ ಜನಹಿತವು ಬೇಕಾಗಿದ್ದ ಪಕ್ಷದಲ್ಲಿ ಅದನ್ನು ಸಾಕಷ್ಟು ಸಾಧಿಸಬಹುದಾಗಿತ್ತು. ಆದರೆ ಕಾಯಿದೆಯನ್ವಯ ಜಿಲ್ಹಾಧಿಕಾರಿ ಮತ್ತು ಪ್ರಾಂತಾಧಿಕಾರಿಗಳ ಕಡೆಗೆ ಹೋಗುತ್ತಿದ್ದ ಪುಸ್ತಕಗಳ ಭವಿಷ್ಯವು, ಕನ್ನಡದ ಮಟ್ಟಿಗಾದರೂ ಅಂಧಃಕಾರಮಯವಾಯಿತು; ಅತ್ತ ಬ್ರಿಟಿಶ್ ಮ್ಯೂಜಿಯಮ್ ಗ್ರಂಥಾಲಯದಲ್ಲಿ ಮಾತ್ರ ಒಂದು ನಿರ್ದಿಷ್ಟ ಅವಧಿಯ ಮಟ್ಟಿಗೆ ಹೋಗುತ್ತಿದ್ದ ಪುಸ್ತಕಗಳ ಸಂಗ್ರಹವನ್ನು ಇಂದಿಗೂ ಅಚ್ಚಳಿಯದಂತೆ ಉಳಿಸಿಕೊಳ್ಳಲಾಗಿದೆ.

ಇದಿಷ್ಟು ನಿವೇದನೆಯ ಮೇಲಿಂದ ಗ್ರಂಥಾಲಯ ಆಂದೋಲನದ ವೈಶಿಷ್ಟ್ಯ, ಉದ್ದೇಶ ಮತ್ತು ಪ್ರಯತ್ನಗಳ ಒಂದು ಸಾಮಾನ್ಯ ಚಿತ್ರವು ನಮಗೆ ಆದಂತಾಯಿತು. ಪರಕೀಯ ಆಡಳಿತೆಯಿಂದ ನಿಯಂತ್ರಣಕ್ಕೊಳಗಾಗಿದ್ದರೂ, ಪ್ರತ್ಯಕ್ಷ ಸಹಾಯ–ಸಹಕಾರಗಳನ್ನು ಅವರಿಂದ ಪಡೆಯದೆ ಅಂತಹ ಪ್ರಯತ್ನಗಳು ಅವರಿಂದ ಜನಸಾಮಾನ್ಯರ ಹಿತದ ಸಲುವಾಗಿ ಉಪೇಕ್ಷಿಸಲ್ಪಟ್ಟಿದ್ದರೂ ಅವುಗಳ ಮಹತ್ವವನ್ನರಿತ, ಅವುಗಳ ಇಂಗಿತವನ್ನು ತಿಳಿದ ಭಾರತೀಯರಾದರೂ ಗ್ರಂಥಭಂಡಾರ ಚಳುವಳಿಯನ್ನು ವೇಗವಾಗಿ ಏಕೆ ಆರಂಭಿಸಲಿಲ್ಲ ಎಂಬ ಇನ್ನೊಂದು ವಿಚಾರವು ಈ ಸಂದರ್ಭದಲ್ಲಿ ನಮ್ಮನ್ನೆದುರಿಸುತ್ತದೆ.

೧೮೫೦ ರಲ್ಲಿ ಇಂಗ್ಲಂಡ್‌ದಲ್ಲಿ ಮೊಟ್ಟಮೊದಲನೆಯ ಗ್ರಂಥಾಲಯ ಶಾಸನವು ಸ್ವೀಕೃತವಾಯಿತು. ತತ್ಪೂರ್ವದಲ್ಲಿ ಸಂಭವಿಸಿದ ಔದ್ಯೋಗಿಕ

ಕ್ರಾಂತಿ ಮತ್ತು ಸಮಾಜಜಾಗೃತಿಯು ಫಲವಾಗಿ ಯುರೋಪದ ಇತರ ರಾಷ್ಟ್ರ ಗಳಲ್ಲಿ ಗ್ರಂಥಾಲಯಗಳು ಅಸ್ತಿತ್ವದಲ್ಲಿ ಬಂದು ಊರ್ಜಿತಸ್ಥಿತಿಯನ್ನು ತಲುಪಿ, ಉಚ್ಚಮಟ್ಟದ ಸೇವೆಯನ್ನು ಸಲ್ಲಿಸುತ್ತಿದ್ದರೂ ಬೇರೆ ಜನರು ಪ್ರಯೋಗ ಮಾಡಿ, ಒಳ್ಳೆಯದೆಂದು ಸಾರುವ ವರೆಗೆ ಯಾವ ಹೊಸ ವಿಷಯವನ್ನು ಒಪ್ಪದ ಬ್ರಿಟಿಶರು ತಮ್ಮ ದೇಶದಲ್ಲಿ ಅಂತಹ ಆಂದೋಲನದ ಆರಂಭಕ್ಕೆ ಕೈಹಾಕಿರಲಿಲ್ಲ. ಬ್ರಿಟಿಶ್ ಮ್ಯೂಜಿಯಮ್ ಗ್ರಂಥಾಲಯದಲ್ಲಿ ಕಾರ್ಯಮಾಡುತ್ತಿದ್ದ ಎಡ್ವರ್ಡ್ಸ್ ಎಂಬ ಅನುಚರನ ಹಟ ಮತ್ತು ಸತತಪ್ರಯತ್ನದ ಫಲವಾಗಿ ಈ ಶಾಸನವು ಬ್ರಿಟಿಶ್ ಪಾರ್ಲಿಮೆಂಟಿನಲ್ಲಿ ಸ್ವೀಕೃತಿಯನ್ನು ಪಡೆಯಿತು. ಕಾನೂನು ಒಪ್ಪಿಗೆ ಯನ್ನು ಪಡೆದರೂ ಅದನ್ನು ಆಚರಣೆಯಲ್ಲಿ ತರುವವರು ಜನರೇ ಆಗಿರುವದ ರಿಂದ, ಅದಕ್ಕೆ ಜನತೆಯ ಉತ್ಸಾಹ ಮತ್ತು ಪ್ರಯತ್ನಗಳು ಆವಶ್ಯಕ ಎಂಬು ದಕ್ಕೆ ನಿದರ್ಶನವನ್ನು ಆ ಶಾಸನವು ಸ್ವೀಕೃತವಾಗಿ ಏಳು ವರ್ಷಗಳ ವರೆಗೆ ಬ್ರಿಟನ್ನಿನ ಯಾವ ನಗರದಲ್ಲಿಯೂ ಗ್ರಂಥಾಲಯವು ಹುಟ್ಟಲೇ ಇಲ್ಲ ಎಂಬ ಮಾತಿನಲ್ಲಿ ಕಾಣಬಹುದು. ಮುಂದಿನ ಅರ್ಧ ಶತಮಾನವು ಇಂಗ್ಲಂಡ್ ಮುಂತಾದ ಯುರೋಪಿಯನ್ ರಾಷ್ಟ್ರಗಳಲ್ಲಿಯಷ್ಟೆ ಅಲ್ಲದೆ, ಇತ್ತ ಭಾರತವೆ ಮೊದಲಾದ ಪೌರ್ವಾತ್ಯ ದೇಶಗಳಲ್ಲಿ ಕೂಡ ಅತ್ಯಂತ ಭವ್ಯವಾದ ಚಟುವಟಿ ಕೆಯ ಕಾಲ ಎಂದೆನ್ನಬಹುದು. ಪ್ರತ್ಯಕ್ಷವಾಗಿ ಅದರ ಫಲಸ್ವರೂಪವು ಆಗ್ಗೆ ಕಾಣದಿದ್ದರೂ ವಿದ್ಯಾಪ್ರಸಾರ, ಶಾಸ್ತ್ರೀಯ ಸಂಶೋಧನೆ, ಯಾಂತ್ರಿಕ ಪ್ರಗತಿ, ಸಮಾಜ ವಿಕಾಸ, ಧಾರ್ಮಿಕ ಪುನರುಜ್ಜೀವನ, ಆರ್ಥಿಕ ಐಶ್ವರ್ಯ, ಸಂಘಟ ನಾತ್ಮಕ ಪ್ರಯತ್ನಗಳು, ರಾಜಕೀಯ ಆಂದೋಲನ ಇವೇ ಮೊದಲಾದ ವಿಷಯಗಳಲ್ಲಿ ಈಗ ಕಾಣುವ ಪ್ರಗತಿಯ ಮತ್ತು ಪೀಠಿಕೆಯ ಕಾರ್ಯವೆಲ್ಲ ಆರಂಭವನ್ನು ಪಡೆದು, ಬೃಹನ್ಮಾರ್ಗವನ್ನು ಹಿಡಿಯಿತು ಎಂದು ಹೇಳಬಹುದು.

ಈ ವಿಚಾರಗಳ ಸಂಧಿಕಾಲದಲ್ಲಿ ಬ್ರಿಟಿಶ್ ಅಧಿಕಾರಿವರ್ಗವು ಕೂಡ ಭಾರತದಲ್ಲಿ ಪ್ರಜೆಯ ಹಿತ ಮತ್ತು ಪ್ರಜೆಯ ಸಹಕಾರ ಇವುಗಳತ್ತ ತಮ್ಮ ಲಕ್ಷ್ಯವನ್ನು ಎಳೆದುದು ಆ ಆ ಪರಿಸ್ಥಿತಿಯ ಪ್ರಭಾವದಿಂದಲೇ ಎಂಬುದು ಸ್ಪಷ್ಟ. ಅಂತೆಯೆ ಆ ಕಾಲದಲ್ಲಿ ಗ್ರಂಥಾಲಯಗಳು ಸಹಿತ ಸಮಾಜರಚನೆ ಮತ್ತು ಸಮಾಜವಿಕಾಸದ ಒಂದು ಹೊಸ ಹೊಳಪಿನಲ್ಲಿ ಹಿರಿಯ ಸ್ಥಾನವನ್ನು ಪಡೆದಿದ್ದವು. ಪ್ರಜಾಕೋಟಿಯಲ್ಲಿ ಕೆಲ ಜನರು ಆಡಳಿತದ ವಿರುದ್ಧ ಕಾರ್ಯ

ಮತ್ತು ವಿಚಾರಗಳನ್ನು ನಡೆಯಿಸಿದ್ದನ್ನು ಕಂಡು ಅಧಿಕಾರಿಗಳು ಮತ್ತು ಅವರ ಆಪ್ತ–ಸಹಾಯಕ ವರ್ಗಗಳು ಇನ್ನೊಂದು ಪಂಗಡವನ್ನು ತಮ್ಮ ಅಧೀನ ದಲ್ಲಿ ಸೇರಿಸಿಕೊಳ್ಳಲಿಕ್ಕೆ ಮುಂದಾದರು. ಅದರ ಪರಿಣಾಮವಾಗಿ ಅಲ್ಲಲ್ಲಿ ಆರಂಭವಾದ ನೇಟಿವ್ಹ ಜನರಲ್ ಲೈಬ್ರರಿಗಳು ಮತ್ತು ಜಿಲ್ಹಾಧಿಕಾರಿಗಳೆ ಮೊದಲಾದವರ ಗೌರವಾರ್ಥವಾಗಿ ಸ್ಥಾಪಿಸಿದ ಸಂಸ್ಥೆಗಳು ಆ ಅವಧಿಯಲ್ಲಿ ಕಂಡುಬರುತ್ತವೆ. ಕೆಲ ಜನರನ್ನು ಪ್ರೋತ್ಸಾಹಿಸಿ, ಅನ್ಯರಲ್ಲಿ ಒಡಕನ್ನು ಹುಟ್ಟಿಸಿ, ಎಲ್ಲರನ್ನು ಆತಂಕದಲ್ಲಿಡದಿದ್ದರೂ ನಿಯಂತ್ರಣದಲ್ಲಿಯಾದರೂ ಇಟ್ಟುಕೊಳ್ಳಲಿಕ್ಕೆ ಬ್ರಿಟಿಶರು ಆಗ್ಗೆ ಮಾಡಿದ ಬಹುಮುಖ ಪ್ರಯತ್ನದಲ್ಲಿ ಈ ಬಗೆಯ ಸಂಸ್ಥೆಗಳೂ ಒಂದು ಅಂಗವಾಗಿ ಅವರಿಗೆ ಅನುಕೂಲವಾದುವು. ಅಂತೆಯೆ ಅಂತಹ ಗ್ರಂಥಭಂಡಾರಗಳಲ್ಲಿ ಬಹಳವಾಗಿ ಇಂಗ್ಲಿಶ್ ಪುಸ್ತಕಗಳ ಸಂಗ್ರಹವೆ ಹೆಚ್ಚಾಗಿದ್ದು, ಜನಸಾಮಾನ್ಯರಲ್ಲಿ ಲೋಕಪ್ರಿಯತೆಯನ್ನು ಪಡೆ ಯದೆ ಹೋದುದು ಸ್ವಾಭಾವಿಕ ಎನಿಸುತ್ತದೆ. ಯಾರಾದರೊಬ್ಬ ನಗರದ ಪ್ರತಿಷ್ಠಿತ ವ್ಯಕ್ತಿಯಿಂದ ಕಾಣಿಕೆಗಳನ್ನು ಪಡೆದು ಅವರ ಹೆಸರಿನಲ್ಲಿ ಗ್ರಂಥಾ ಲಯವೊಂದನ್ನು ಆರಂಭಿಸುವದು ಬೇರೆ ರಾಜನಿಷ್ಠ ಮುಂದಾಳು ಒಬ್ಬನನ್ನು ಅಂತಹ ಒಂದು ಸಂಸ್ಥೆಗೆ ಅಧ್ಯಕ್ಷನನ್ನು ಮಾಡಿ, ಇಲ್ಲವೆ ಜಿಲ್ಹೆಯ ಪ್ರಮುಖ ಜನರಿಂದ ಕೆಲವು ದಾನಗಳಿಂದ ಪಡೆದು ಪುಸ್ತಕಗಳನ್ನು ಸಂಗ್ರಹಿಸಿ ಗ್ರಂಥ ಭಂಡಾರವನ್ನು ಸ್ಥಾಪಿಸುವರು ಆಗಿನ ಸಾಮ್ರಾಜ್ಯ ಸಂವರ್ಧನೆಯು ಆಗ ದಿದ್ದರೂ ಸಾಮ್ರಾಜ್ಯಸಂರಕ್ಷಣೆಯ ಸಾಹಸದಲ್ಲಿ ಒಂದು ಮಹತ್ವದ ಪರಿ ಪಾಠವೆ ಆದಂತಾಗಿತ್ತು. ವಿದ್ಯಾಪ್ರಸಾರವು ಒಂದು ಪವಿತ್ರ ಕಾರ್ಯ, ಗ್ರಂಥ ವಿತರಣೆಯು ಒಂದು ಉಚ್ಚಕರ್ತವ್ಯ ಎಂದು ಮೊದಲಿನಿಂದಲೇ ಭಾವಿಸಿದ ಭಾರತೀಯರಲ್ಲಿ ಕೆಲವರು ಇಂತಹ ಚಳುವಳಿಯಲ್ಲಿ ಮನಃಪೂರ್ವಕವಾಗಿ ಭಾಗವಹಿಸಿ, ತಮ್ಮ ಸೇವಾಸರ್ವಸ್ವವನ್ನು ನೀಡಿದುದು ನಮ್ಮ ಜನರ ವಿಶ್ವಾಸ, ಕರ್ತವ್ಯದಕ್ಷತೆ ಮತ್ತು ಹೆಚ್ಚಾಗಿ ಬಂಧುಪ್ರೇಮದ ಉದಾತ್ತ ನಿದರ್ಶನಗಳಾಗಿವೆ.

ಇಷ್ಟರಲ್ಲಿ ಅತ್ತ ರಾಜಕೀಯ ಕ್ಷೇತ್ರದಲ್ಲಿ ರಾಷ್ಟ್ರೀಯ ಮಹಾಸಭೆಯು ಸ್ಥಾಪನೆಯಾಗಿತ್ತು; ಅದರಲ್ಲಿ ಮೊದಮೊದಲಿಗೆ ಎಲ್ಲ ಬಗೆಯ ಅಭಿಪ್ರಾಯ ಗಳ ಜನರು ಒಂದೆಡೆ ಸೇರಿ ಅದರ ಆದರ್ಶ ಮತ್ತು ಉದ್ದೇಶಗಳನ್ನು

ನಿರ್ಣಯಿಸುವ ಕಾರ್ಯವನ್ನು ಮಾಡಿದರು ಎಂದೆನ್ನಬಹುದು. ಅತ್ತ ಧಾರ್ಮಿಕ ಪ್ರಪಂಚದಲ್ಲಿ ಕ್ರೈಸ್ತ ಮತೀಯ ಅಧಿಕಾರಿಗಳು ರಾಜಕೀಯ ಅಧಿಕಾರಿಗಳ ಪ್ರತ್ಯಕ್ಷ ಸಹಾಯ-ಸಹಕಾರ, ಜನಸಾಮಾನ್ಯರ ಅಸಹಾಯ ಆರ್ಥಿಕ ಪರಿಸ್ಥಿತಿಯ ಅಪ್ರತ್ಯಕ್ಷ ಒಪ್ಪಿಗೆ ಇವುಗಳಿಂದ ಮತಾಂತರ ಕಾರ್ಯವನ್ನು ದೃತಗತಿಯಿಂದ ಕೈಕೊಂಡಿದ್ದರ ಪರಿಣಾಮವಾಗಿ ಹಿಂದೂಧರ್ಮದಲ್ಲಿಯೂ ನವ ಜಾಗೃತಿಯು ಹುಟ್ಟಿ, ಧರ್ಮವನ್ನು ಹೊಸಗಣ್ಣಿನಿಂದ ನೋಡುವ ಆರ್ಯ ಸಮಾಜ, ಪ್ರಾರ್ಥನಾಸಮಾಜ, ಬ್ರಹ್ಮಸಮಾಜ, ಆಸ್ತಿಕ ಸಮಾಜಗಳೆ ಮೊದಲಾದ ಪಂಗಡಗಳು ತಲೆದೋರಿದ್ದವು. ಇನ್ನೊಂದೆಡೆ ಸಾಮಾಜಿಕ ನಿಲಯಗಳಲ್ಲಿ ಪಡುವಣದ ಹಲಕೆಲವು ಸಂಸ್ಥೆಗಳು ಮಾಡುತ್ತಿದ್ದ ಸೇವಾಕಾರ್ಯವನ್ನು ತಿಳಿದುಕೊಂಡು ಆ ರೀತಿಯ ಸಂಘಟನೆಗಳನ್ನು ಮಾಡಿಕೊಳ್ಳುವ ಆಸೆ ಆಕಾಂಕ್ಷೆಗಳು ಪಾಕಹೊಂದಿ ರಾಮಕೃಷ್ಣ ಆಶ್ರಮ, ಭಾರತಸೇವಕಸಮಾಜ, ಲೋಕಸೇವಾ ಮಂಡಲ, ಬ್ರಹ್ಮವಿದ್ಯಾ ಕೇಂದ್ರಗಳೆ ಮೊದಲಾದ ಸಂಸ್ಥೆಗಳು ಜನ್ಮ ತಾಳಿದವು. ಮತ್ತೊಂದು ಕಡೆ ಸಾಹಿತ್ಯ ಮತ್ತು ಚರಿತ್ರೆಯ ವಿಷಯದಲ್ಲಿ ಭಾರತೀಯನ ಮನಸ್ಸಿನಲ್ಲಿ ಹೆಚ್ಚುಹೆಚ್ಚಾಗಿ ಪಾಶ್ಚಾತ್ಯ ಸಂಘ-ಸಂಸ್ಥೆಗಳ ಮಾದರಿಗಳು ಮೂಡುತ್ತ ಪ್ರತಿಯೊಂದು ಭಾಷಾಪ್ರದೇಶದಲ್ಲಿಯೂ ತನ್ನ ತನ್ನ ಭಾಷೆ, ಸಂಸ್ಕೃತಿ, ಸಾಹಿತ್ಯಗಳನ್ನು ತಿಳಿದುಕೊಳ್ಳುತ್ತ, ಅದರ ಹಿರಿಮೆಯನ್ನು ಮೊದಲು ತನ್ನವರಿಗೆ ಅರಿವು ಮಾಡಿಕೊಡಬೇಕೆಂಬ ಕರ್ತವ್ಯದ ಹುರುಪು ಮತ್ತು ಹವ್ಯಾಸಗಳು ನೆಲಗೊಂಡವು. ಅಂತೆಯೆ ಮುಂದಿನ ಕಾಲು ಶತಮಾನದಲ್ಲಿ ನಾವು ಭಾರತೀಯ ಸಾಹಿತ್ಯಗಳಲ್ಲಿ ಪ್ರಮುಖವಾದ ಪರಿಷತ್ತುಗಳು ಸ್ಥಾಪನೆಯಾದುದನ್ನು ನೋಡುತ್ತೇವೆ. ಈ ರೀತಿಯ ಆತ್ಮಜ್ಞಾನ, ಸಂಘಟನೆ, ಮತ್ತು ಸಂಶೋಧನಗಳ ಅವಧಿಯಾದ ಮುಂದಿನ ಅಯ್ವತ್ತು ವರ್ಷಗಳ ಕಾಲವಾದ ಈ ಶತಕದ ಮೊದಲರ್ಧವು ಭಾರತದ ಇತಿಹಾಸದಲ್ಲಿ ಒಂದು ಮಹತ್ವದ ಘಟ್ಟವಾಗಿದೆ.

ಈ ಎಲ್ಲ ಪ್ರಯತ್ನಗಳ ಉದ್ದೇಶ ಈ ಮೊದಲೆ ಹೇಳಿದಂತೆ ಕೇವಲ ಆತ್ಮನಿರ್ಣಯ, ಸ್ವರಾಜ್ಯ ಮತ್ತು ಸಾಂಸ್ಕೃತಿಕ ಪುನರ್ನಿರ್ಮಾಣ ಇವೆ ಆಗಿದ್ದುವು. ಸಾಮಾಜಿಕ ಮತ್ತು ರಚನಾತ್ಮಕವಾದ ಇಂತಹ ಕಾರ್ಯದಲ್ಲಿ ಅತ್ಯುಪಯುಕ್ತ ಮತ್ತು ಶಕ್ತಿಯುತವಾದ ಸಾಧನ ಈ ಗ್ರಂಥಾಲಯ ಎಂಬು

ದನ್ನು ಆಗಿನ ನಮ್ಮ ಮುಂದಾಳುಗಳು ತಿಳಿಯದಿರಲಿಲ್ಲ. ಅಂತೆಯೆ ಅಸಹಕಾರದ ಆಂದೋಲನದ ಪೂರ್ವಕಾಲದಲ್ಲಿಯಾಗಲಿ, ಸ್ವರಾಜ್ಯ (Hom Rule) ಚಳುವಳಿಯ ಮುಂಚಿನ ಹೆಜ್ಜೆಯೆಂದಾಗಲಿ, ಶಾಸನಭಂಗ ಮತ್ತು ಸತ್ಯಾಗ್ರಹ ಕಾರ್ಯಕ್ರಮದ ಪೀಠಿಕೆಯೆಂದಾಗಲಿ ಜರುಗುತ್ತಿರುವ ವಿಧಾಯಕ ಕಾರ್ಯದಲ್ಲಿಯೂ, ಇತರ ಸಾಮಾಜಿಕ ಮತ್ತು ಸಾಹಿತ್ಯಿಕ ಸಂಸ್ಥೆಗಳು ಕೈಕೊಂಡ ವಿಕಾಸಯೋಜನೆಗಳಲ್ಲಿಯೂ ಗ್ರಂಥಾಲಯವು ಒಂದು ಆವಶ್ಯಕ ಘಟಕವಾಗಿತ್ತು. ಈ ಕಾಲದಷ್ಟರಲ್ಲಿ ಸಾರ್ವಜನಿಕ ಗ್ರಂಥಭಂಡಾರಗಳು ಒಂದು ಕಡೆಯಿಂದ ಅಸ್ತಿತ್ವದಲ್ಲಿ ಬಂದಿದ್ದರೆ ಅತ್ತ ಆಗಳೆ ಆರಂಭವಾಗಿ ರಭಸದಿಂದ ಕಾರ್ಯನಿರತವಾಗಿರುವ ವಿಶ್ವವಿದ್ಯಾಲಯಗಳ ಗ್ರಂಥಭಂಡಾರಗಳು ಕೂಡ ತಮ್ಮ ಪ್ರಭಾವವನ್ನು ಗ್ರಂಥಜಗತ್ತಿನಲ್ಲಿ ಬೀರುತ್ತಿದ್ದವು. ಆದರೆ ಒಂದು ಆಂದೋಲನ ಎಂಬ ದೃಷ್ಟಿಯಲ್ಲಿ ಜನಸಾಮಾನ್ಯರ ಹಿತಕ್ಕಾಗಿ ಈ ಎರಡೂ ಬಗೆಯ ಗುಂಪುಗಳು ಸಾಕಷ್ಟು ಪರಿಣಾಮಕಾರಿಯಾಗಲಿಲ್ಲ ಎಂಬ ಮಾತನ್ನು ಯಾರಾದರೂ ಒಪ್ಪಬೇಕಾಗುತ್ತದೆ. ಅದಕ್ಕೆ ಕಾರಣವು ಕೇವಲ ಅಸಂತುಷ್ಟರಾದ ಕೆಲ ಜನರ ಸಮಾಧಾನಕ್ಕಾಗಿಯೊ ವಿರಾಮಕಾಲದ ಉದ್ಯೋಗಕ್ಕಾಗಿಯೊ ಅಥವಾ ಒಂದು ವಿಶಿಷ್ಟ ಶಿಕ್ಷಿತವರ್ಗದ ಬೇಡಿಕೆಗಳನ್ನು ಪೂರೈಸಲಿಕ್ಕೆಂದೊ ಗ್ರಂಥಾಲಯಗಳು ಆರಂಭವಾಗಿದ್ದಾಗ ಗ್ರಂಥಾಲಯ ಆಂದೋಲನದಂತಹ ಕಾರ್ಯಕ್ರಮದಿಂದ ಆಗಬೇಕಾದ ಕಾರ್ಯವು ಇವುಗಳಿಂದ ಜರುಗಬೇಕಾಗಿದ್ದಿತು ಎಂಬುವದು ಅನ್ಯಾಯವೆ ಸರಿ. ರಾಜಕೀಯ ವಾತಾವರಣದ ಏಳು-ಬೀಳುಗಳ ಮೇಲೆ ಅವಲಂಬಿಸಿದ ಸಾರ್ವಜನಿಕ ಗ್ರಂಥಭಂಡಾರಗಳಾಗಲಿ, ಉಚ್ಚ ಶಿಕ್ಷಣದ ಒಂದು ಪಡಿಯಚ್ಚಿನಲ್ಲಿ ಕೆಲಸ ಮಾಡುತ್ತಿರುವ ವಿಶ್ವವಿದ್ಯಾಲಯೀನ ಗ್ರಂಥಾಲಯಗಳಾಗಲಿ ಈ ಅವಧಿಯಲ್ಲಿ ಸಹಜವಾಗಿಯೆ ಜನಸಮುದಾಯಕ್ಕೆ ಉಪಯೋಗವಾಗುವಂತಹ ಮತ್ತು ಸತತ ಪ್ರಯತ್ನವನ್ನು ಬೇಡುವ ಇಂತಹ ಆಂದೋಲನಕ್ಕೆ ಕೇಂದ್ರವಾಗುವದು ಅಸಾಧ್ಯವಾಗಿಯೆ ಉಳಿಯಿತು.

ಆದರೆ ಕಾರ್ಯವು ಅಪೂರ್ಣವಾಗಿ ಉಳಿಯಬಹುದು ಎಂದಾಗಲಿ ಅಸಾಧ್ಯವಾಗಿ ಬೆಳೆಯಬಹುದು ಎಂದಾಗಲಿ ಗ್ರಂಥವಿಜ್ಞಾನದಲ್ಲಿ ಆಸಕ್ತಿ-ಅಭಿರುಚಿ-ಅನುಭವಗಳಿದ್ದ ಜನರು ಗ್ರಂಥಾಲಯಗಳ ಆಂದೋಲನವನ್ನು ಆರಂಭ

ಮಾಡಲಿಲ್ಲ ಎಂದಲ್ಲ. ರಾಜಕೀಯ ಮತ್ತು ಸಾಮಾಜಿಕ ಪುನರ್ಘಟನಾ ಕಾರ್ಯದಲ್ಲಿ ಮುಂದುವರಿದ ಬಂಗಾಲ, ಮುಂಬಯಿ ಮತ್ತು ಮದರಾಸುಗಳೆ ಈ ಕ್ಷೇತ್ರದಲ್ಲಿಯೂ ಕೃಷಿಯನ್ನು ಮಾಡಿರುತ್ತವೆ, ಪ್ರಗತಿಯನ್ನು ಸಾಧಿಸಿರುತ್ತವೆ. ಈಗ್ಗೆ ಕೂಡ ಜನತೆಯ ಸೇವೆಯ ದೃಷ್ಟಿಯಿಂದ ಜನಸಂಖ್ಯೆಯ ಪ್ರಮಾಣದ ಮೇರೆಗೆ ಹುಟ್ಟಿರುವ ಗ್ರಂಥಭಂಡಾರಗಳನ್ನು ನೋಡಿದರೆ ಬಂಗಾಲವೆ ಮೊದಲ ಸ್ಥಾನದಲ್ಲಿ ನಿಲ್ಲುವದು. ಸಾಕ್ಷರತಾಪ್ರಸಾರ, ಗ್ರಂಥನಿರ್ಮಾಣ,ಸಾಹಿತ್ಯ ರಚನೆ, ಪುಸ್ತಕಪ್ರಚಾರ, ಪತ್ರಿಕೆಗಳ ಪ್ರಕಟನಕಾರ್ಯ ಈ ಎಲ್ಲ ವಿಷಯಗಳಲ್ಲಿ ಉಚ್ಚಸ್ಥಾನಗಳಲ್ಲಿರುವದು ಬಂಗಾಲ; ಅದರ ನಂತರದಲ್ಲಿಯೆ ಬರುವದು ಮುಂಬಯಿ. ಇಲ್ಲಿ ಮತ್ತು ಮೂರನೆಯ ಕ್ರಮಾಂಕವನ್ನು ಪಡೆದ ಮದರಾಸಿನಲ್ಲಿ ಕೇವಲ ಗ್ರಂಥಭಂಡಾರಗಳನ್ನು ತೆರೆಯುವದು, ಗ್ರಂಥಪ್ರಚಾರವನ್ನು ಕೈಕೊಳ್ಳುವದು, ಇದಿಷ್ಟಕ್ಕೆ ತಮ್ಮ ಕೆಲಸವನ್ನು ಮರ್ಯಾದಿತ ಗೊಳಿಸದೆ, ಪ್ರಾಂತೀಯ ಕ್ಷೇತ್ರದಲ್ಲಿ ಹೆಚ್ಚು ವೇಗದಿಂದ ಕಾರ್ಯಮಾಡುವಉದ್ದೇಶದಿಂದ ಗ್ರಂಥಾಲಯ ಸಂಘಗಳನ್ನು ಮತ್ತು ಶಾಸನಬದ್ಧ ಆಡಳಿತಗಳನ್ನು ಸ್ಥಾಪಿಸಿಕೊಂಡಿರುವದೊಂದು ವಿಶೇಷ ಗಮನಾರ್ಹ ಸಂಗತಿಯಾಗಿದೆ.

ಇಂತಹ ಗ್ರಂಥಾಲಯ ಸಂಘಗಳಲ್ಲಿ ಹಿರಿದಾದುದೆಂದರೆ ಭಾರತೀಯ ಗ್ರಂಥಾಲಯ ಸಂಘ. ವಯಸ್ಸಿನ ಪ್ರಮಾಣದಿಂದ ಇದಕ್ಕಿಂತ ಹಳೆಯ ಸಂಘಗಳು ನಮ್ಮ ದೇಶದಲ್ಲಿ ಇನ್ನೂ ನಾಲ್ಕೈದು ಪ್ರಾದೇಶಿಕ ಇಲ್ಲವೆ ಪ್ರಾಂತೀಯ ಸಂಘಗಳಿರಬಹುದಾಗಿದ್ದರೂ ಭೌಗೋಲಿಕವ್ಯಾಪ್ತಿ, ಗ್ರಂಥಾಲಯ ಜಗತ್ತಿನಲ್ಲಿ ಅದು ಗೈಯುತ್ತಿರುವ ಕಾರ್ಯ, ಭಾರತೀಯ ಗ್ರಂಥಾಲಯ ಆಂದೋಲನದಲ್ಲಿ ವಹಿಸುತ್ತಿವ ಹೊಣೆ ಈ ಎಲ್ಲ ಮಾತುಗಳ ದೃಷ್ಟಿಯಿಂದ ನೋಡಲಾಗಿ ರಾಷ್ಟ್ರೀಯ ಸಂಘವು ಎಲ್ಲಕ್ಕೂ ಹೆಚ್ಚು ಮಹತ್ವದ್ದಾಗಿರುವದು ಸಾರ್ಥಕ ಎನಿಸದಿರದು. ಮೊದಮೊದಲು ಕೇವಲ ನೂರಾರು ಜನ ಭಂಡಾರಿಗರು ಸೇರುವ ಒಂದು ಸಮ್ಮೇಳನದಂತಹ ಸುಖದುಃಖಗಳ ವಿನಿಮಯಸ್ಥಾನವಾಗಿದ್ದರೂ ೧೯೩೩ ರಲ್ಲಿ ಸ್ಥಾಪಿತವಾದ ಈ ಸಂಘವು ಹತ್ತು ವರ್ಷಗಳಲ್ಲಿಯೆ ಗಂಭೀರವೂ ಉಪಯುಕ್ತವೂ ಆದ ಕಾರ್ಯಕ್ರಮವನ್ನು ಇಟ್ಟುಕೊಂಡು ಗ್ರಂಥಭಂಡಾರಿಗರ ವ್ಯವಸಾಯದಲ್ಲಿರುವವರಿಗೆ ಈಗ ಒಂದು ಆಕರ್ಷಣೆಯಾಗಿದೆ. ಭಾರತದ ವಿಭಜನೆಯಾಗುವ ಮುಂಚೆ ಈ ಸಂಘವು ಎರಡು ವರ್ಷಗಳಿಗೊಂದರಂತೆ

ಸಮ್ಮೇಳನವನ್ನು ಜರುಗಿಸುವದೇ ತನ್ನ ಪರಿಮೋಚ್ಚ ಕರ್ತವ್ಯ ಎಂದು ಭಾವಿಸಿದ್ದು ೧೯೪೪ ರಲ್ಲಿ ಜಯಪುರದಲ್ಲಿ ಜರುಗಿದ ಸಮ್ಮೇಳನದಿಂದ ವಿದ್ವತ್ಪೂರ್ಣ ಚರ್ಚೆಗೆ, ಉಪಯುಕ್ತ ಪ್ರಕಟನೆಗಳಿಗೆ, ಅಂತರ್ರಾಷ್ಟ್ರೀಯ ಸಮಸ್ಯೆಗಳಿಗೆ ತನ್ನ ಲಕ್ಷ್ಯವನ್ನು ಪೂರೈಸುತ್ತಲಿದೆ. ಇತ್ತೀಚೆಗೆ ಆದ ಬಡೋದೆ, ನಾಗಪುರ ಮತ್ತು ಇಂದೂರ ಸಮ್ಮೇಳನಗಳ ನಂತರ ಈ ಸಂಘವು ಇನ್ನೂ ಮುಂದಿನ ಹೆಜ್ಜೆಗಳನ್ನು ಹಾಕಿದೆ, ಇದಕ್ಕೂ ಹೆಚ್ಚು ವ್ಯಾಪಕವಾದ ಕಾರ್ಯ ಯೋಜನೆಯನ್ನು ಇಟ್ಟುಕೊಂಡಿದೆ.

ಯಾವುದೊಂದು ಸಂಘವಾಗಲಿ, ಸಂಸ್ಥೆಯಾಗಲಿ, ಆಂದೋಲನವಾಗಲಿ ಅದರ ಅಸ್ತಿತ್ವವು ಮೊದಲು ಅಸಂತೋಷದಿಂದ ಹೆಚ್ಚಾಗಿ ಆರಂಭವಾಗುತ್ತದಷ್ಟೆ! ಅದಕ್ಕೆ ಈ ಗ್ರಂಥಾಲಯ ಆಂದೋಲನವೇನು ಅಪವಾದವೆನಿಸಿಲ್ಲ. ಮೊದಲು ಕೆಲಜನ ಭಂಡಾರಿಗರು ತಮ್ಮ ಕೆಲವು ವೈಯಕ್ತಿಕ ಅಡ್ಡಿ–ಆತಂಕ ಕೊರತೆ–ಹೀನತೆಗಳನ್ನು ಸಾಮೂಹಿಕವಾಗಿ ದೂರಮಾಡಿಕೊಳ್ಳುವ ಉದ್ದೇಶದಿಂದ ಸಮ್ಮೇಳನರೂಪದಲ್ಲಿ ಒಂದೆಡೆ ಸೇರಿದರು. ಆಗ್ಗೆ ತಮ್ಮ ವರ್ಚಸ್ಸು ಹೆಚ್ಚಬೇಕು, ತಮಗೆ ದೊರೆಯುತ್ತಿರುವ ಸಂಬಳ ದೊಡ್ಡದಾಗಬೇಕು, ತಾವು ಕಾರ್ಯ ಮಾಡುತ್ತಿರುವ ಸ್ಥಾನವು ಒಂದು ಕ್ರಮ ಮತ್ತು ವೃದ್ಧಿಗಳುಳ್ಳ ಸಂಬಳದ್ದಾಗಿರಬೇಕು, ಅದೇ ಬಗೆಯ ವ್ಯವಸಾಯದಲ್ಲಿದ್ದ ಇತರ ಸೇವಕರಂತೆ ತಮಗೆ ವಿಪುಲವಾಗಿ ಬಿಡುವು ಮತ್ತು ಗೌರವ ದೊರೆಯಬೇಕು ಎಂಬಿವೇ ಮೊದಲಾದ ಬೇಡಿಕೆಗಳನ್ನು ಮಂಡಿಸುವ ಗೊತ್ತುವಳಿಗಳಿಂದಲೇ ಆಗಿನ ಸಮ್ಮೇಳನಗಳ ಚರ್ಚೆಯು ಸಾಮಾನ್ಯವಾಗಿ ತುಂಬಿರುತ್ತಿತ್ತು. ಆದರೆ ನಿಜವಾಗಿ ಇಂತಹ ಸಂಘಗಳ ಅಸ್ತಿತ್ವಕ್ಕೆ ಸ್ಫೂರ್ತಿ ಯಾವುದು, ಇಂತಹ ಸಂಘಗಳು ಒಮ್ಮೆ ಸ್ಥಾಪಿಸಲ್ಪಟ್ಟ ಮೇಲೆ ಅವು ಮಾಡಬೇಕಾದ ಕೆಲಸವೇನು ಎಂಬ ವಿಷಯಗಳು ಸಂಬಂಧಪಟ್ಟ ಜನರ ನೆನಪಿಗೆ ಬರಲಿಕ್ಕೆ ತಡವೇನು ಹೆಚ್ಚು ಹಿಡಿಯಲಿಲ್ಲ.

ಸಂಘ–ಸಂಸ್ಥೆಗಳನ್ನು ಮಾಡಿಕೊಳ್ಳುವದು ಕೇವಲ ಸಮ್ಮೇಳನಗಳಂತಹ ಜಾತ್ರೆಗಳನ್ನು ಜರುಗಿಸಲಿಕ್ಕಲ್ಲ. ವೈಯಕ್ತಿಕವಾಗಿ ಆಗದಿದ್ದ ಕಾರ್ಯಕ್ಕೆ ನಾಲ್ಕು ಜನರನ್ನು ಕೂಡಿಸುವದು; ಹತ್ತಾರು ಜನರಿಗೆ ಒಪ್ಪಿದ ಒಂದು ಮಾತನ್ನು ಇನ್ನೂ ಹೆಚ್ಚು ಜನರೆದುರಿಗೆ ಇಡುವದು; ಎಲ್ಲರೂ

ಒಪ್ಪಿದ ವಿಷಯವನ್ನು ಒಂದೇ ಮನಸ್ಸಿನಿಂದ ಆಚರಣೆಯಲ್ಲಿ ತರುವ ಸಂಕಲ್ಪ ಮಾಡುವದು ಇಂತಹವು ಸಮ್ಮೇಳನಗಳ ಮತ್ತು ಸಂಸ್ಥೆಗಳ ಮೂಲವಿಚಾರ ಗಳಾಗಿರುತ್ತವೆ. ಒಬ್ಬ ಮಾಡುತ್ತಿದ್ದ ಕಾರ್ಯವನ್ನೆ ಇನ್ನೊಬ್ಬ ತಿಳಿದು, ಅದರ ಧ್ಯೇಯವನ್ನು ಸ್ವೀಕರಿಸಿ ತಾನೂ ಆ ಕಾರ್ಯದ ಪ್ರಗತಿಯಲ್ಲಿ ಮೊದಲಿನವನಿಗೆ ಸಹಕಾರವನ್ನು ನೀಡಿದರೆ ಆ ಕಾರ್ಯದ ಗತಿಯು ಇನ್ನೂ ಹೆಚ್ಚುವದು. ಇದು ಅನೇಕ ಜನರು ಕೂಡಿ ಮಾಡುವ ಯಾವ ಕಾರ್ಯಕ್ಕಾ ದರೂ ಅನ್ವಯಿಸುತ್ತದೆ. ಅಂತೆಯೆ ಆರಂಭದಲ್ಲಿ ಆತ್ಮಸಂರಕ್ಷಣೆಯ ಸಲುವಾಗಿ ಹೆಣಗಾಡುವ ಹತ್ತಾರು ಜನರ ಗುಂಪು ಮಾತ್ರ ಆಗಿದ್ದ ಈ ಸಂಘವು ಈಗ ಗ್ರಂಥಾಲಯವಿಜ್ಞಾನದ ವಿಕಾಸ ಮತ್ತು ಪ್ರಚಾರಕ್ಕಾಗಿ, ಗ್ರಂಥಾಲಯ ಸೇವಕರ ಪಡೆಯೊಂದನ್ನು ಸಿದ್ಧಮಾಡುವದಕ್ಕಾಗಿ, ಅಂತರ್ರಾಷ್ಟ್ರೀಯ ವಲಯ ಗಳಲ್ಲಿ ಭಾರತವು ಮಾಡುತ್ತಿರುವ ಗ್ರಂಥಾಲಯ ಕಾರ್ಯದ ಪ್ರಸಾರ ಮತ್ತು ತನ್ಮೂಲಕವಾಗಿ ಅವರಿಂದ ಪಡೆಯಬಹುದಾದ ಸಹಾಯ–ಸಹಕಾರ–ಸಹಾನು ಭೂತಿಗಳಿಗಾಗಿ ಹೆಣಗಾಡುವ ಒಂದು ಪಂಗಡವಾಗಿದೆ. ಇಂದು ಈ ಸಂಘವು ಪ್ರಕಟಿಸುತ್ತಿರುವ "ಅಬ್‌ಗಿಲಾ" ಎಂಬ ತ್ರೈಮಾಸಿಕ ಪತ್ರಿಕೆಯೂ ಅನೇಕ ವ್ಯಾಸಂಗಪೂರ್ಣ ಪುಸ್ತಕಗಳೂ ಈ ದಿಕ್ಕಿನಲ್ಲಿ ಈ ಸಂಘದ ಕಾರ್ಯವನ್ನು ಅಸ್ತಿತ್ವವನ್ನೂ ಸಾಕಷ್ಟು ಸಾರ್ಥಕಗೊಳಿಸುತ್ತಲಿವೆ. ಆದರೂ ಈ ಸಂಘವು ಗ್ರಂಥಾಲಯ ಆಂದೋಲನವನ್ನು ಹೆಚ್ಚು ಆವೇಶದಿಂದ ಮುಂದುವರಿಸುತ್ತಿಲ್ಲ ಎಂಬ ಕೊರಗು ಇದ್ದೇ ಇದೆ.

ಆದಕ್ಕೆ ಕಾರಣವೆಂದರೆ ಗ್ರಂಥಾಲಯದ ವಿಷಯವಾಗಿ ನಮ್ಮ ಜನರಲ್ಲಿ ಮತ್ತು ನಮ್ಮ ಸರಕಾರದಲ್ಲಿ ಸಾಕಷ್ಟು ಸ್ಪಷ್ಟವಾದ ಕಲ್ಪನೆಯು ಇಲ್ಲದಿರು ವದು. ಪ್ರಜಾಪ್ರಭುತ್ವವು ಆಚರಣೆಯಲ್ಲಿ ಬಂದು, ಪ್ರತಿಯೊಬ್ಬ ಪ್ರಜೆಯೂ ಶಿಕ್ಷಣವಿಲ್ಲದಿದ್ದರೂ ಸಹಿತ ತನ್ನ ವಿವೇಕದಂತೆ ಮತವನ್ನು ಕೊಡಬಲ್ಲವ ನಾಗಿದ್ದಾನೆ. ಆತನು ತನ್ನ ನಿರ್ಣಯವನ್ನು ಸರಿಯಾಗಿಯೆ ಮಾಡಿಕೊಂಡ ಬಗ್ಗೆ ಈ ಸಾರೆಯ ಸಾರ್ವತ್ರಿಕ ನಿರ್ವಾಚನದಲ್ಲಿ ನಿದರ್ಶನವನ್ನು ಮಾಡಿ ದ್ದಾನೆ. ಆದರೆ ಸಾಕ್ಷರ ಪ್ರಜೆಯು, ಸುವಿದ್ಯ ಪ್ರಜೆಯು, ಸರಿಯಾದ ಶಿಕ್ಷಣ ದೊರೆತ ಪ್ರಜೆಯು ಕೇವಲ ತನ್ನ ವೈಯಕ್ತಿಕ ಅಧಿಕಾರವನ್ನು ಪ್ರಜ್ಞಾಪೂರ್ಣ ವಾಗಿ ನಿರ್ವಹಿಸಬಲ್ಲನು ಎಂಬುದಿಷ್ಟೆ ಇಂದು ನಮಗೆ ಸಾಕಾಗಿಲ್ಲ. ಇಂದಿನ

ನಮ್ಮ ಆಲಸ್ಯ, ಇಂದಿನ ನಮ್ಮ ದುರಭಿಮಾನ, ಇಂದಿನ ನಮ್ಮ ದಾರಿದ್ರ್ಯ ಇವುಗಳನ್ನೆಲ್ಲ ಹೊಗಲಾಡಿಸಿ, ಆತನು ಸುಸಂಸ್ಕೃತ ಪ್ರಜೆಯಾಗಿ ಅಂತರ್ರಾಷ್ಟ್ರೀಯ ಕ್ಷೇತ್ರದಲ್ಲಿ ಭಾರತವನ್ನು ಮೇಲ್ಮಟ್ಟಕ್ಕೆ ತರುವಂತೆ ಸಹಾಯಕನಾಗಬೇಕು ಎಂಬುದು ಇಂದಿನ ನಮ್ಮ ಹೆಗ್ಗುರಿಯಾಗಿದೆ. ಅಂತೆಯೆ ಈ ಮಹತ್ಕಾರ್ಯದಲ್ಲಿ ಗ್ರಂಥಾಲಯವು ಹೇಗೆ ಉಪಯುಕ್ತವಾಗಿ ಪರಿಣಮಿಸಬಹುದು ಎಂಬುದನ್ನು ನಾವು ಎಲ್ಲರಿಗೂ ಇಂದು ಮನವರಿಕೆ ಮಾಡಿಕೊಡಬೇಕಾಗಿದೆ.

ಅಂತೆಯೆ ಭಾರತದಲ್ಲಿ ಒಂದು ರಾಷ್ಟ್ರೀಯ ಗ್ರಂಥಾಲಯವನ್ನು ಕೇಂದ್ರದಲ್ಲಿ ಸ್ಥಾಪಿಸಿ, ಬೇರೆ ಬೇರೆ ರಾಜ್ಯಗಳನ್ನು ಭಾಷಾನುಗುಣ ಪ್ರಾಂತಗಳನ್ನಾಗಿ ನಿರ್ಮಿಸಿದಂತೆ ಅಲ್ಲಿಯೂ ಒಂದೊಂದು ಪ್ರಾಂತೀಯ ಗ್ರಂಥಾಲಯಗಳನ್ನು ಆರಂಭಿಸಿ, ಪ್ರಾಂತ ಮತ್ತು ಪ್ರದೇಶಗಳ ತುಂಬೆಲ್ಲ ಜಿಲ್ಹಾ ಗ್ರಂಥಭಂಡಾರಗಳು, ತಾಲೂಕಾ ಗ್ರಂಥಭಂಡಾರಗಳು, ನಗರ ಗ್ರಂಥಭಂಡಾರಗಳು, ಗ್ರಾಮ ಗ್ರಂಥಭಂಡಾರಗಳು ಹೀಗೆ ವಿವಿಧ ಪ್ರಮಾಣ ಮತ್ತು ಪ್ರಾದೇಶಿಕ ವ್ಯಾಪ್ತಿಯುಳ್ಳ ಗ್ರಂಥಾಲಯಗಳ ಒಂದು ಮಾಲೆಯನ್ನೇ ಹೆಣೆಯಬೇಕು; ಅವುಗಳ ಮುಖಾಂತರವಾಗಿ ನಿರಕ್ಷರತಾನಿವಾರಣೆ, ಸಾಕ್ಷರತಾ ಪ್ರಚಾರ, ಸುವಿದ್ಯರ ಸಂಪರ್ಕ, ಸಾಮಾಜಿಕ ಶಿಕ್ಷಣದಪ್ರಸಾರ,-ಸಾಂಸ್ಕೃತಿಕ ವಿಕಾಸ ಮೊದಲಾದ ಕಾರ್ಯದಲ್ಲಿ ತಕ್ಕ ಪಾತ್ರವನ್ನು ಗ್ರಂಥಾಲಯವು ವಹಿಸಬೇಕು ಎಂಬ ಪ್ರಯತ್ನವು ಅವಿರತವಾಗಿ ಸಾಗಬೇಕಾಗಿದೆ. ಈ ಸಂಘವು ಕೂಡ ಕೇವಲ ತನ್ನ ಎತ್ತರದ ಮಂದಿರದಲ್ಲಿ ಏಕಾಕಿಯಾಗಿ ದರ್ಪದಲ್ಲಿ ಕುಳಿತುಕೊಂಡು ಕೈಕಟ್ಟಿ ಸುಮ್ಮನಿರದೆ ಈ ದಿಕ್ಕಿನಲ್ಲಿ ಸಹಕಾರದ ಕೈ ನೀಡುವದು ಆಗತ್ಯವಾಗಿದೆ.

ಇನ್ನು ಬೇರೆ ಬೇರೆ ದೃಷ್ಟಿಗಳಿಂದ ಒಂದಿಲ್ಲೊಂದು ರೀತಿಯಲ್ಲಿ ಗ್ರಂಥಾಲಯದ ಕಾರ್ಯವನ್ನು ಸಾಂಘಿಕವಾಗಿ ಮುಂದುವರಿಸಿದ ಕೆಲವು ಗ್ರಂಥಾಲಯ ಸಂಘಗಳ ಹುಟ್ಟು, ಕಾರ್ಯವ್ಯಾಪ್ತಿ ಮತ್ತು ವೈಶಿಷ್ಟ್ಯಗಳನ್ನು ಇಲ್ಲಿ ತಿಳಿದುಕೊಳ್ಳಬಹುದು. ಮೊದಲನೆಯದಾಗಿ ಬ್ರಿಟಿಶ್ ಗ್ರಂಥಾಲಯ ಸಂಘದ ಚರಿತ್ರೆಯನ್ನು ತುಸು ತಿಳಿದುಕೊಳ್ಳುವದು ಸಹಾಯಕವೆನಿಸಬಹುದು. ೧೮೭೭ ರ ಆಕ್ಟೋಬರ ಮೊದಲನೆಯ ವಾರದಲ್ಲಿ ಪ್ರಥಮ ಅಂತರ್ರಾಷ್ಟ್ರೀಯ ಭಂಡಾರಿಗರ ಸಮ್ಮೇಳನವೊಂದು ಲಂಡನ್ನಿನಲ್ಲಿ ಕರೆಯಲಾಗಿತ್ತು. ಆ

ಸಮ್ಮೇಳನದ ಕಾರ್ಯಕಲಾಪಗಳು, ಭಾಷಣಗಳು, ನಿರ್ಣಯಗಳು ಇವುಗಳ ಒಂದು ಪರಿಣಾಮವಾಗಿಯೆ ಬ್ರಿಟಿಶ್ ಲೈಬ್ರರಿ ಅಸೋಶಿಯೇಶನ್ ಎಂಬ ಸಂಸ್ಥೆಯನ್ನು ಕಟ್ಟಿಕೊಳ್ಳಬೇಕೆಂಬ ನಿಶ್ಚಯವಾಯಿತು. ಕೂಡಲೆ ಅಂತಹ ಒಂದು ಸಂಘವನ್ನು ಸ್ಥಾಪಿಸಿಕೊಂಡು ಅದರ ಮುಖಪತ್ರವೆಂದು ಮೊದಲು ಅಮೇರಿಕನ್ ಲೈಬ್ರರಿ ಜರ್ನಲ್ ಎಂಬ ಪತ್ರಿಕೆಯನ್ನು ಸ್ವೀಕರಿಸಿದರು. ಅತ್ತ ಅಮೇರಿಕೆಯ ಗ್ರಂಥಾಲಯಸಂಘವು ಹುಟ್ಟಿ ತತ್ಸಮ ಕಾರ್ಯವನ್ನು ಕೈಕೊಂಡು ಕೇವಲ ಒಂದು ವರ್ಷವಾಗಿದ್ದಿತು. ಸಂಘದ ಮುಖ್ಯ ಉದ್ದೇಶಗಳು ಭಂಡಾರಿಗರನ್ನು ಒಂದುಗೂಡಿಸಿ ಮೇಲ್ಮಟ್ಟಕ್ಕೆ ತರುವದು ಮತ್ತು ಗ್ರಂಥಾಲಯಗಳನ್ನು ಸ್ಥಾಪಿಸಿ ಸುಸ್ಥಿತಿಗೆ ತಲುಪಿಸುವದು ಆಗಿದ್ದವು. ಆವೆರಡೂ ಕಾರ್ಯಗಳನ್ನು ವಿಶೇಷ ಆಸ್ಥೆಯಿಂದಲೂ ಸಾಕಷ್ಟು ಯಶಸ್ವಿಯಾಗಿಯೂ ಈ ಸಂಘವು ನೆರವೇರಿಸಿರುತ್ತದೆ ಎಂದು ಹೇಳಬಹುದು. ಕಾಲಕಾಲಕ್ಕೆ ಸಭೆ–ಸಮ್ಮೇಳನ– ಸಂವಾದಗಳನ್ನು ಏರ್ಪಡಿಸಿ, ಸಮಿತಿಗಳಲ್ಲಿ ಭಂಡಾರಿಗರ ವಿಶಿಷ್ಟ ಸಮಸ್ಯೆಗಳನ್ನು ಅಭ್ಯಸಿಸಿ ಸಂಬಂಧಪಟ್ಟ ಜನರಿಂದ ಅವುಗಳನ್ನು ಪರಿಹರಿಸಿ, ಭಂಡಾರಿಗರು ಹೆಚ್ಚು ಕಾರ್ಯಕ್ಷಮರೂ ಸೇವಾ ತತ್ಪರರೂ ಆಗುವಂತೆ ಅವರಿಗೆ ಬಗೆಬಗೆಯ ಸೌಕರ್ಯಗಳನ್ನು ಒದಗಿಸಿ, ಭಂಡಾರಿಗರ ಪಡೆಯು ನ್ಯಾಯ್ಯವಾದ ಮತ್ತು ಯೋಗ್ಯವಾದ ಸ್ಥಾನವನ್ನು ಸಮಾಜದಲ್ಲಿ ಪಡೆಯುವಂತೆ ಈ ಸಂಘವು ಹೆಣಗುತ್ತಲಿದೆ. ಅದರಂತೆಯೆ ಸಾರ್ವಜನಿಕ ಗ್ರಂಥಾಲಯಗಳು ಹೆಚ್ಚು ಹೆಚ್ಚಾಗಿ ಸ್ಥಾಪಿತವಾಗಿ, ಅವು ಜನರಿಗೆ ಉಪಯುಕ್ತ ಅಷ್ಟೆ ಅಲ್ಲದೆ ಆಕರ್ಷಕ ಎನಿಸುವಂತೆ ವಿವಿಧ ಯೋಜನೆಗಳ ಮುಖಾಂತರವಾಗಿ ಈ ಸಂಘವು ಪ್ರಯತ್ನಿಸುತ್ತಿದೆ.

ಆದರೆ ಇನ್ನು ಕೆಲವು ಉದ್ದೇಶಗಳನ್ನಿಟ್ಟುಕೊಂಡ ಈ ಸಂಘವು ಅವುಗಳತ್ತ ತಕ್ಕ ದೃಢತೆಯಿಂದ ಮತ್ತು ಸಾಧನಗಳಿಂದ ಸಾಗುವದು ಇದಕ್ಕೆ ಸಾಧ್ಯವಾಗದಂತಾಗಿದೆ. ಇಂಗ್ಲಿಷ್ ಸಾಹಿತ್ಯದ ಪೂರ್ಣಸೂಚಿಕೆಯೊಂದನ್ನು ರಚಿಸಬೇಕು, ಗ್ರಂಥಾಲಯ ಸಂಘದ ವೈಶಿಷ್ಟ್ಯವನ್ನು ತೋರಿಸಲಿಕ್ಕೆಂದು ಅದರದೇ ಆದ ಒಂದು ಗ್ರಂಥ ಮತ್ತು ವಸ್ತುಸಂಗ್ರಹವನ್ನು ಸ್ಥಾಪಿಸಬೇಕು ಎಂಬಿವೇ ಮೊದಲಾದ ವಿಷಯಗಳಲ್ಲಿ ಸಂಘಕ್ಕೆ ಸಾಕಷ್ಟು ಸಹಾಯ ಮತ್ತು ಯಶಸ್ಸು ದೊರೆತಿಲ್ಲ.

ಆದರೂ ಈ ಸಂಘದ ಆಶ್ರಯದಲ್ಲಿ ಕೈಕೊಂಡ ಮಿಕ್ಕ ಕೆಲವು ಕಾರ್ಯ ಕಲಾಪಗಳಲ್ಲಿ ಕಲ್ಪನಾತೀತವಾದ ಪ್ರಗತಿಯಾಗಿದೆ. ಅದರಲ್ಲಿಯೂ ಪ್ರಾಮುಖ್ಯವಾಗಿ ಭಂಡಾರಿಗರಿಗೆ ಗ್ರಂಥಾಲಯ ವಿಜ್ಞಾನದಲ್ಲಿ ಶಿಕ್ಷಣ ಕೊಡುವ ವರ್ಗಗಳು ವಿಶೇಷವಾಗಿ ಹೇಳಬೇಕಾದವುಗಳಾಗಿವೆ. ಈ ಬಗೆಯ ವರ್ಗ ಗಳನ್ನು ಕೇವಲ ರಾಷ್ಟ್ರದ ರಾಜಧಾನಿಯಲ್ಲಿಯಷ್ಟೆ ಅಲ್ಲದೆ ಮಿಕ್ಕ ಅನೇಕ ಪಟ್ಟಣಗಳಲ್ಲಿಯೂ ನಡೆಯಿಸಿ, ಶಾಸ್ತ್ರಬದ್ಧವಾದ ಮತ್ತು ಪ್ರಮಾಣಯುಕ್ತ ವಾದ ಪದ್ಧತಿಗಳು ಎಲ್ಲ ಗ್ರಂಥಾಲಯಗಳಲ್ಲಿಯೂ ರೂಢಿಯಲ್ಲಿ ಬರುವಂತೆ ಸಹಾಯಮಾಡಿದ್ದಾರೆ. ಅದರಂತೆಯೆ ಗ್ರಂಥವ್ಯವಸ್ಥೆಯ ವಿಷಯದಲ್ಲಿ ಉಚ್ಚ ವಿಚಾರಗಳನ್ನು ಮತ್ತು ಹೊಸ ಹೆಜ್ಜೆಗಳನ್ನು ತೋರಿಸುವಂತಹ ಪತ್ರಿಕೆ ಮತ್ತು ಪುಸ್ತಕಗಳನ್ನು ಪ್ರಕಟಿಸುತ್ತಿರುವದು ಈ ಸಂಘವು ಕೈಕೊಂಡ ಇನ್ನೊಂದು ಮಹತ್ತರವಾದ ಕಾರ್ಯವೆನಿಸಿದೆ. ಗ್ರಂಥಾಲಯ ಸಂಘದವರು ಪ್ರಕಟಿಸುತ್ತಿದ್ದ!ಗ್ರಂಥಾಲಯಪತ್ರಿಕೆ, ಗ್ರಂಥಾಲಯ, ಗ್ರಂಥಾಲಯ ಸಂಘದ ಟಿಪ್ಪಣಿಗಳು ಮುಂತಾದ ಪತ್ರಿಕೆಗಳು ಜನಾದರಣೆಗೆ ಪಾತ್ರವಾಗಿದ್ದವು. ಈಗ ಅದು ಪ್ರಕಾಶಿಸುತ್ತಿರುವ ಗ್ರಂಥಾಲಯ ಸಂಘದ ವರದಿ, ಗ್ರಂಥಭಂಡಾರಗಳ ವಾರ್ಷಿಕ ಕಾರ್ಯ, ಪತ್ರಿಕಾ ಲೇಖನಗಳ ವಿಷಯ ಸೂಚಿ ಮುಂತಾದ ನಿಯತಕಾಲಿಕೆಗಳು ಉಪಯುಕ್ತ ವಿಷಯಗಳನ್ನು ತಿಳಿಸುತ್ತವೆ. ಇದಷ್ಟೆ ಅಲ್ಲದೆ ಸೂಚೀಕರಣ ನಿಯಮಾವಳಿ, ಸಂದರ್ಭ ಗ್ರಂಥಗಳು, ಗ್ರಂಥಾಲಯ ವ್ಯವಸ್ಥೆ, ವಿಜ್ಞಾನ ಲೇಖನಗಳ ಸಾರ ಮೊದಲಾದ ಪುಸ್ತಕಗಳು ಗ್ರಂಥಾಲಯ ಪ್ರಪಂಚದಲ್ಲಿಯೆ ಮನ್ನಣೆಯನ್ನು ಪಡೆದ ಪ್ರಕಟನೆಗಳೆನಿಸಿಕೊಂಡಿವೆ.

ಕೊನೆಯದಾಗಿ ಈ ಸಂಘವು, ಗ್ರಂಥಾಲಯಗಳಿಗೆ ಸಂಬಂಧಪಟ್ಟ ಶಾಸನಗಳಲ್ಲಿ, ಕಾಲಕ್ಕೆ ಸರಿಯಾದ ಪರಿವರ್ತನೆಗಳನ್ನಾಗಲಿ, ಸುಧಾರಣೆ ಗಳನ್ನಾಗಲಿ ಮಾಡಲಿಕ್ಕೆ, ಹೆಚ್ಚಿನ ಎಚ್ಚರಿಕೆಯಿಂದಲೂ ಅದ್ವಿತೀಯ ಆಸ್ಥೆ ಯಿಂದಲೂ ಪ್ರಯತ್ನಿಸುತ್ತದೆ. ಕೇವಲ ಶಾಸನಗಳನ್ನು ಸ್ವೀಕರಿಸುವಂತೆ ಮಾಡಿಯಾಗಲಿ, ಸುಧಾರಿಸುವಂತೆ ಹೆಣಗಿಯಾಗಲಿ ಸುಮ್ಮನಿದ್ದು ಬಿಡದೆ, ಪ್ರಾದೇಶಿಕ ಮತ್ತು ಸ್ಥಳಿಕ ಸಂಸ್ಥೆಗಳು ಆ ಶಾಸನಗಳನ್ವಯ ತಮ್ಮ ಆಡಳಿತ ದಲ್ಲಿ ಗ್ರಂಥಾಲಯಗಳನ್ನು ಸ್ಥಾಪಿಸಿಕೊಳ್ಳುವಂತೆ ಇಲ್ಲವೆ ತಿದ್ದಿಕೊಳ್ಳುವಂತೆ ಈ ಸಂಘದ ಮುಖಾಂತರ ಕಾರ್ಯಮಾಡುತ್ತದೆ. ಜನಸಾಮಾನ್ಯರಲ್ಲಿ ಹೋಗಿ,

ಅವರ ಸಭೆ–ಸಮಾವೇಶಗಳನ್ನು ಕರೆದು, ಅಲ್ಲಿ ಭಾಷಣ-ಪುಸ್ತಕ–ಪ್ರವಚನ–ಪ್ರದರ್ಶನಗಳೆ ಮೊದಲಾದ ಸಾಧನಗಳಿಂದ ಗ್ರಂಥಾಲಯಗಳ ವಿಷಯದಲ್ಲಿ ಆಸಕ್ತಿಯು ಹುಟ್ಟುವಂತೆ ಮಾಡಿ, ಅವರಿಗೆ ಆ ಕಾರ್ಯದಲ್ಲಿ ಆವಶ್ಯಕ ಎನಿಸುವ ಎಲ್ಲ ಸಲಕರಣೆಗಳನ್ನು ನೀಡಿ, ಗ್ರಂಥಾಲಯಗಳು ಹುಟ್ಟುವಂತೆ, ಬೆಳೆಯುವಂತೆ, ಉಳಿಯುವಂತೆ ಈ ಸಂಘದ ಪರವಾಗಿ ಕೆಲಸ ನಡೆದಿದೆ. ಈ ಎಲ್ಲ ಬಗೆಯ ಚಟುವಟಿಕೆಯು, ಸಾಕ್ಷರತೆಯು ದೊಡ್ಡ ಪ್ರಮಾಣದಲ್ಲಿರುವ, ಜನಜಾಗೃತಿಯು ತುಂಬ ಹುಟ್ಟಿರುವ, ಸಾಂಸ್ಕೃತಿಕ ಮಟ್ಟವು ಉನ್ನತವಾಗಿರುವ, ಆರ್ಥಿಕ ಸ್ಥಿತಿಯು ಭದ್ರವಾಗಿರುವ ಇಂಗ್ಲೆಂಡದಂತಹ ದೇಶಗಳಲ್ಲಿಯೆ ಜರುಗುತ್ತಿದೆ ಎಂದ ಮೇಲೆ ಅದೇನೂ ಇಲ್ಲದ ನಮ್ಮ ದೇಶದಲ್ಲಿ ಎಷ್ಟು ನಡೆಯಬೇಕು ಎಂಬುದನು ನಾವು ಊಹಿಸಬೇಕು.

ಪ್ರಪಂಚದಲ್ಲಿಯೆ ಗ್ರಂಥಾಲಯ ಸಂಘಗಳಿಗೆ ಮಾದರಿಯಂತಿದ್ದ ಬ್ರಿಟಿಶ್ ಗ್ರಂಥಾಲಯ ಸಂಘದಿಂದ ಒಂದೊಂದು ರೀತಿಯಲ್ಲಿ ಮಾದರಿಯ ಕೆಲಸವನ್ನು ಮಾಡುತ್ತಿರುವ ನಮ್ಮ ದೇಶದ ಕೆಲವು ಪ್ರಾದೇಶಿಕ ಸಂಘಗಳತ್ತ ನಾವು ಇನ್ನು ನಮ್ಮ ಲಕ್ಷ್ಯವನ್ನು ಎಳೆಯಬಹುದು. ಭಾರತದ ವಿವಿಧ ಪ್ರೌಢ ಭಾಷೆಗಳಲ್ಲಿ ಆಂಧ್ರಭಾಷಾ ಪ್ರದೇಶದ ಗ್ರಂಥಾಲಯ ಸಂಘವು ಎಲ್ಲಕ್ಕೂ ಹಿರಿಯ ಸಂಘವಾಗಿದೆ. ೧೯೧೪ರಲ್ಲಿಯೆ ಸ್ಥಾಪಿತವಾದ ಈ ಸಂಘವು ಪತ್ರಿಕೆಯ ಪ್ರಕಟನೆ ಮತ್ತು ಗ್ರಂಥಾಲಯಗಳ ವ್ಯವಸ್ಥೆಯಲ್ಲಿ ಸುಧಾರಣೆಗಳನ್ನು ಮಾಡಿ ಈ ವಿಷಯಗಳಲ್ಲಿ ವೈಶಿಷ್ಟ್ಯವನ್ನು ಪಡೆದಿದೆ ಎಂದೆನ್ನಬಹುದು. ಅದರ ನಂತರ ಆರಂಭವಾಗಿದ್ದರೂ ಹಲಕೆಲವು ದೃಷ್ಟಿಯಿಂದ ಹೆಚ್ಚಿನ ಕೆಲಸವನ್ನು ಮಾಡಿದ ಸಂಘವೆಂದರೆ ಮದ್ರಾಸ ಗ್ರಂಥಾಲಯ ಸಂಘ. ಇದು ೧೯೨೮ರಲ್ಲಿ ಜನ್ಮತಾಳಿದೆ. ಭಂಡಾರಿಗರ ಪಡೆಯೊಂದನ್ನು ತರಬೇತು ಮಾಡುವ ಗ್ರಂಥಾಲಯ ಸಂಘಟನೆಯಲ್ಲಿ ಆಸಕ್ತಿಯನ್ನು ಹುಟ್ಟಿಸುವ ಮತ್ತು ಗ್ರಂಥಾಲಯ ವಿಜ್ಞಾನಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಪ್ರಕಟಿಸುವ ಕೆಲಸದಲ್ಲಿ ಇದು ಎತ್ತಿದ ಕೈಯಾಗಿದೆ. ಈ ಸಂಘದ ಪ್ರಯತ್ನದ ಫಲವಾಗಿ ಸಂಭವಿಸಿದ ಇನ್ನೊಂದು ವೈಶಿಷ್ಟ್ಯಪೂರ್ಣವಾದ ಕಾರ್ಯವೆಂದರೆ ೧೯೪೮ರಲ್ಲಿ ಮದ್ರಾಸು ಆಡಳಿತವು ಗ್ರಂಥಾಲಯಗಳನ್ನು ಸ್ಥಾಪಿಸುವ ಶಾಸನವೊಂದನ್ನು ಸ್ವೀಕರಿಸಿದುದು. ಇದು ಇಡಿಯ ಭಾರತದಲ್ಲಿಯೆ ಅಂತಹ ಮೊದಲನೆಯ ಕಾಯಿದೆ.

ನಾಡಿನ ಚರಿತ್ರೆಯಲ್ಲಿಯೆ ಮೊಟ್ಟಮೊದಲು ವೈಧಾನಿಕ ರೀತಿಯಲ್ಲಿ ಗ್ರಂಥಾಲಯಕ್ಕೆ ಮನ್ನಣೆ ಸಿಕ್ಕಿದುದು ಎಂದರೆ ಈ ಶಾಸನದ ಮೂಲಕ. ಅಂತೆಯೆ ಈ ಶಾಸನದ ಕೆಲವು ಮುಖ್ಯಾಂಶಗಳನ್ನು ತಿಳಿದುಕೊಳ್ಳುವದು ಇಲ್ಲಿ ಸೂಕ್ತವೆನಿಸಬಹುದು.

ಗ್ರಂಥಾಲಯ ಆಡಳಿತಗಳನ್ನು ನೇಮಿಸುವದು, ಗ್ರಂಥಾಲಯ ಅಧಿಕಾರಿಗಳನ್ನು ಗೊತ್ತುಪಡಿಸುವದು ಇಂತಹ ಅಂಶಗಳಲ್ಲಿ ಈ ಶಾಸನವು ಅಪೂರ್ವವಾದ ದೃಷ್ಟಾಂತವಾಗಿದ್ದರೂ, ಗ್ರಂಥಭಂಡಾರಗಳ ವೆಚ್ಚಕ್ಕಾಗಿ ವಂತಿಗೆಯನ್ನು ಸಂಗ್ರಹಿಸಬೇಕು ಎಂಬ ಆಶಯದ ಇವರ ಒಂದು ನಿಯಮ ಮತ್ತು ಸ್ಥಳೀಯ ಸಂಸ್ಥೆಗಳಿರಲಿಕ್ಕೆ ಗ್ರಂಥಾಲಯಗಳನ್ನು ನಡೆಯಿಸಿಕೊಂಡು ಹೋಗಲಿಕ್ಕೆಂದು ಗ್ರಾಮಾಂತರ ಪ್ರದೇಶಗಳಲ್ಲಿ ವಿಶಿಷ್ಟವಾದುದೊಂದು ಆಡಳಿತವನ್ನು ನೇಮಿಸುವ ಇನ್ನೊಂದು ನಿಯಮ ಇಂತಹ ವಿವರಗಳಲ್ಲಿ ಪ್ರಗತಿವಿರೋಧಕ ಇಲ್ಲವೆ ಅವ್ಯವಸ್ಥೆಯನ್ನು ಹುಟ್ಟಿಸುವಂತಹ ದೂರುಗಳಿಗೆ ಕಾರಣವಾಗಿರುತ್ತದೆ.

ಈ ಕಾಯದೆಯ ಮೇರೆಗೆ ಮದ್ರಾಸು ನಗರಕ್ಕೊಂದು ಮತ್ತು ಇತರ ಜಿಲ್ಲೆಗಳಿಗೆ ಒಂದೊಂದರಂತೆ ಸ್ಥಳಿಕ ಗ್ರಂಥಾಲಯ ಆಡಳಿತಗಳು ಏರ್ಪಡುತ್ತವೆ. ಮದ್ರಾಸಿನ ಆಡಳಿತದಲ್ಲಿ ಹದಿನೆಂಟು ಜನ ಸದಸ್ಯರೂ ಜಿಲ್ಹಾ ಆಡಳಿತಗಳಲ್ಲಿ ಹತ್ತು ಜನರ ಸದಸ್ಯರೂ ಚುನಾಯಿತರಾಗುತ್ತಿದ್ದು ಅವಶ್ಯವಿದ್ದ ಸಮಯದಲ್ಲಿ ಇಲ್ಲವೆ ಸಂಬಂಧಪಟ್ಟ ವಿಷಯಕ್ಕಾಗಿ ಉಪಸಮಿತಿಗಳನ್ನು ಮಾಡಿಕೊಳ್ಳುವ ಅಧಿಕಾರವು ಆ ಆಡಳಿತಕ್ಕೆ ಇರುತ್ತದೆ. ಇಡಿಯ ಪ್ರಾಂತದೊಳಗಿನ ಎಲ್ಲ ಭಂಡಾರಗಳ ಮತ್ತು ಇಂತಹ ಆಡಳಿತಗಳ ಮೇಲ್ವಿಚಾರಣೆಗೆಂದು ಒಬ್ಬ ನಿರ್ದೇಶಕ (Director of Public Libraries) ನನ್ನು ಸರಕಾರವು ನೇಮಿಸುತ್ತದೆ. ಹೆಚ್ಚಾಗಿ ಎಲ್ಲ ಆಡಳಿತ ಮತ್ತು ಆಂದೋಲನದ ಅಧಿಕಾರವು ಈ ಅಧಿಕಾರಿಯ ಕೈಯಲ್ಲಿರುವದೊಂದು ಈ ಕಾನೂನಿನ ವೈಶಿಷ್ಟ್ಯವಾಗಿದೆ. ಹೀಗೆ ಏರ್ಪಟ್ಟ ಸ್ಥಳಿಕ ಗ್ರಂಥಾಲಯ ಆಡಳಿತಗಳು ಸ್ಥಾಪಿಸಬಹುದಾದ ಗ್ರಂಥಾಲಯಗಳ ವೆಚ್ಚಕ್ಕಾಗಿ ಅಲ್ಲಲ್ಲಿಯ ಸ್ಥಳಿಕ ಮಂಡಲ (Local Bodies) ಗಳು ಶುಲ್ಕ (Cess) ವನ್ನು ಎತ್ತಬಹುದು ಇಲ್ಲವೆ ವಂತಿಗೆಯನ್ನು ಪಡೆಯಬಹುದು. ಈ ರೀತಿಯ ಆಶಯದ ನಿಯಮಗಳಲ್ಲದೆ ೧೮೬೭ ರ ಮುದ್ರಣಾಲಯ ಮತ್ತು ಪುಸ್ತಕ ನೋಂದಣಿ ಶಾಸನವನ್ನು

ಸುಧಾರಿಸಿ, ಆ ತಿದ್ದುಪಡೆಯ ಮೇರೆಗೆ ಪ್ರಾಂತೀಯ ಕೇಂದ್ರ ಗ್ರಂಥಾಲಯವು ಪ್ರಾಂತದಲ್ಲಿ ಮುದ್ರಿಸಲ್ಪಟ್ಟ ಪ್ರತಿಯೊಂದು ಪುಸ್ತಕದ ಆಯ್ದು ಪ್ರತಿಗಳನ್ನು ಮುದ್ರಕರಿಂದಾಗಲಿ, ಪ್ರಕಾಶಕರಿಂದಾಗಲಿ ಪಡೆಯಬೇಕು ಎಂಬ ನಿಯಮವನ್ನು ಮಾಡಿದ್ದಾರೆ.

ಈ ಶಾಸನದಲ್ಲಿ ಹಲಕೆಲವು ಲೋಪದೋಷಗಳಿದ್ದರೂ ರಾಷ್ಟ್ರದ ಮೊದಲನೆಯ ಕಾಯದೆ ಎಂದು ಗ್ರಂಥಾಲಯ ಪ್ರಪಂಚದಲ್ಲಿ ಇದಕ್ಕೆ ಸಂಭ್ರಮದ ಸ್ವಾಗತವು ದೊರೆತಿದೆ. ಈ ಕಾಯದೆಯು ಆಚರಣೆಯಲ್ಲಿ ಬರುವದರಿಂದ ಸಾಕ್ಷರತಾಪ್ರಚಾರ ಮತ್ತು ಗ್ರಂಥಾಲಯ ವಿಕಾಸ ಈ ವಿಷಯಗಳಲ್ಲಿ ಮೊದಲೆ ಪ್ರಗತಿಯನ್ನು ಹೊಂದಿದ ಮದರಾಸು ರಾಜ್ಯವು ಇನ್ನೂ ಮುಂದುವರಿಯುವದೆಂಬಲ್ಲಿ ಸಂಶಯವಿಲ್ಲ.

ಮದರಾಸು ಗ್ರಂಥಾಲಯ ಸಂಘದ ನಂತರ ಹುಟ್ಟಿದವೆಂದರೆ ೧೯೩೦ ರಲ್ಲಿ ಕರ್ನಾಟಕ ಗ್ರಂಥಾಲಯ ಸಂಘ; ೧೯೩೩ ರಲ್ಲಿ ಬಂಗಾಲ ಗ್ರಂಥಾಲಯ ಸಂಘ; ೧೯೩೮ ರಲ್ಲಿ ಆಸಾಮ ಗ್ರಂಥಾಲಯ ಸಂಘ ಮತ್ತು ೧೯೪೪ ರಲ್ಲಿ ಉತ್ಕಲ ಮತ್ತು ಮುಂಬಯಿ ಗ್ರಂಥಾಲಯ ಸಂಘಗಳು. ಆಸಾಮ ಮತ್ತು ಉತ್ಕಲ ಪ್ರಾಂತಗಳು ತೀರ ಹಿಂದುಳಿದಿದ್ದು ಅಲ್ಲಿ ಗ್ರಂಥಾಲಯ ಆಂದೋಲನದ ಪ್ರಾಥಮಿಕ ಪ್ರಯತ್ನಗಳು ಆ ಆ ಸಂಘಗಳ ಮುಖಾಂತರ ಜರುಗುತ್ತಿದ್ದುದು ಸಂತೋಷದ ವಿಷಯ. ಇತ್ತ ಬಂಗಾಲವು ಮಾತ್ರ ಅತ್ಯಂತ ಉತ್ಸಾಹದಿಂದಲೂ ಮುಂಜಾಗ್ರತೆಯಿಂದಲೂ ತನ್ನ ಸಂಘದ ಆಶ್ರಯದಲ್ಲಿ ಗ್ರಂಥಾಲಯಗಳ ಸಂಖ್ಯೆಯನ್ನೂ ಸೇವೆಯನ್ನೂ ಹೆಚ್ಚಿಸುತ್ತಲಿದೆ. ಅದರಂತೆಯೆ ಮುಂಬಯಿ ಗ್ರಂಥಾಲಯ ಸಂಘವು ಕೈಕೊಂಡ ಒಂದು ಉಪಕ್ರಮವೂ ಅಪೂರ್ವವಾಗಿದೆ. ಆ ಸಂಘದ ಪರವಾಗಿ ಮುಂಬಯಿ ನಗರದ ಎಲ್ಲ ಗ್ರಂಥಾಲಯಗಳು ಒಂದು ದೊಡ್ಡ ಕುಟುಂಬವಾಗಿ ಪರಿಣಮಿಸಿವೆ. ಗ್ರಂಥಾಲಯದ ವಿಷಯವಾಗಿ ಸಮಾಚಾರ ವಿಚಾರ–ವ್ಯಾಖ್ಯಾನಗಳ ಲಾಭವನ್ನು ಮಾಡಿಕೊಡುವದು, ಪರಸ್ಪರ ವಿನಿಮಯದಿಂದ ಅಂತರ ಗ್ರಂಥಾಲಯ ಪುಸ್ತಕಗಳನ್ನು ಪಡೆಯುವದು, ಪುಸ್ತಕಗಳನ್ನು ಪ್ರಕಟಿಸುವದು ಮೊದಲಾದ ಕಾರ್ಯವು ಅಲ್ಲಿ ಜರುಗುತ್ತಲಿದೆ. ಕರ್ನಾಟಕ ಗ್ರಂಥಾಲಯ ಸಂಘದ ಹುಟ್ಟು ಮತ್ತು ಬಾಳಿನ ಬಗೆಯಲ್ಲಿ ಮುಂದಿನ ವಿವರಗಳನ್ನು ನೋಡಬಹುದು.

ಕರ್ನಾಟಕದಲ್ಲಿ ಗ್ರಂಥಾಲಯಗಳು, ಆಧುನಿಕ ಪದ್ಧತಿಯ ಗ್ರಂಥಾಲಯಗಳು ಎಂದಿನಿಂದ ಆರಂಭವಾದವು? ಅವುಗಳ ಗರಿಷ್ಠ ಸಂಖ್ಯೆಯು ಯಾವಾಗ ಇತ್ತು? ಆ ಸಂಖ್ಯೆಯು ಎಷ್ಟಾಗಿತ್ತು? ಹಾಗೆ ಅಸ್ತಿತ್ವದಲ್ಲಿದ್ದ ಗ್ರಂಥಭಂಡಾರಗಳಲ್ಲಿ ಹೆಚ್ಚಿನ ದೊಡ್ಡ ಗ್ರಂಥಸಂಖ್ಯೆಯು ಯಾವ ಭಂಡಾರದಲ್ಲಿತ್ತು? ಕೇವಲ ಗ್ರಂಥಸಂಕಲನವಷ್ಟೆ ಅಲ್ಲದೆ ಗ್ರಂಥಾಲಯ ಸೇವೆಯಲ್ಲಿ ಮತ್ತೆ ಯಾವ ಕಾರ್ಯವನ್ನು ಗ್ರಂಥಾಲಯಗಳು ಸಾಮಾನ್ಯವಾಗಿ ಇಟ್ಟುಕೊಂಡಿದ್ದವು? ಇಷ್ಟು ಗ್ರಂಥಾಲಯಗಳಿದ್ದಾಗ್ಗೆ ಅವುಗಳ ಪರಸ್ಪರ ಪರಿಚಯ, ಸಹಕಾರ ಮತ್ತು ಸಂಪರ್ಕಗಳು ಎಷ್ಟರಮಟ್ಟಿಗೆ ಸಾಧಿಸಲ್ಪಟ್ಟಿದ್ದವು? ಈಗ ಅನೇಕ ಸಾರೆ ಪ್ರಯತ್ನಮಾಡಿ, ಎಷ್ಟೋ ವರ್ಷಗಳಿಂದ ಸ್ಥಾಪಿತವಾಗಿರುವ ಗ್ರಂಥಾಲಯ ಸಂಘವು ಎಂತಹ ಕಾರ್ಯಯೋಜನೆಯನ್ನು ಆಚರಣೆಯಲ್ಲಿ ತರಲಿಕ್ಕೆ ಪ್ರಯತ್ನಿಸುತ್ತಿದೆ? ಕೊನೆಯದಾಗಿ ಇಡಿಯ ಕನ್ನಡನಾಡಿನಲ್ಲಿ ತಿಳಿವಿನ ಬೇಡಿಕೆಗಳನ್ನು ಪೂರೈಸುವ ಈ ರೀತಿಯ ಗ್ರಂಥಾಲಯ ಕುಟುಂಬವು ರಾಷ್ಟ್ರದಲ್ಲಿರುವ ಇಂತಹ ಮಿಕ್ಕ ಕುಟುಂಬಗಳೊಡನೆ ಬಾಂಧವ್ಯವನ್ನು ಇಲ್ಲದಿದ್ದರೂ ನೆರಹೊರಕೆಯನ್ನಾದರೂ ಎಷ್ಟು ಫಲಪ್ರದವಾಗಿ ಇಟ್ಟುಕೊಂಡಿರುತ್ತದೆ ಎಂಬಿವೇ ಮೊದಲಾದ ಪ್ರಶ್ನೆಗಳನ್ನು ನಾವು ಬಿಡಿಸಿಕೊಂಡರೆ ಕರ್ನಾಟಕ ಗ್ರಂಥಾಲಯ ಆಂದೋಲನದ ಒಂದು ಚಿತ್ರ ನಮಗೆ ದೊರೆತಂತಾಗುವದು.

ಕರ್ನಾಟಕವು ಭಾಷಾಸಂಬಂಧವಾಗಿ—ಅಂದರೆ ತನ್ಮೂಲಕ ಸಾಂಸ್ಕೃತಿಕ ದೃಷ್ಟಿಯಿಂದ ಹರಿದುಹೋಗಿ ಒಂದೂವರೆ ನೂರು ವರ್ಷಗಳ ಮಾತಾಗಿದೆ. ಅದು ಇಲ್ಲಿಯ ಎಲ್ಲ ಬಗೆಯ ಅನವಸ್ಥೆಗೆ ಮೂಲಕಾರಣವಾಗಿದೆ. ಆದರೆ ಇಂದು ನಮಗೆ ಸ್ವಾತಂತ್ರ್ಯ ದೊರಕಿದ್ದರೂ ಭಾರತದ ಸಕಲ ಸಮಸ್ಯೆಗಳ ಪರಿಹಾರವು ಕ್ಷಣಾರ್ಧದಲ್ಲಿ ಸಾಧ್ಯವಾಗದಂತೆ, ಕರ್ನಾಟಕಪ್ರಾಂತ ನಿರ್ಮಾಣವಾದ ಕೂಡಲೆ ನಮ್ಮ ಎಲ್ಲ ಪ್ರಮೇಯಗಳು ಕಣ್ಮರೆಯಾಗುವವು ಎಂದು ತಿಳಿಯುವಂತಿಲ್ಲ. ಜೀವನ ಒಂದು ಅನಂತ ಪ್ರವಾಹ. ಅದರಲ್ಲಿ ಒಂದಿಲ್ಲೊಂದು ತೊಡಕುತೊಂದರೆಗಳು ಇರುವವೆ. ಅಂತೆಯೆ ಸ್ವಾತಂತ್ರ್ಯಸಮರವು ಅತ್ತ ನಡೆದಾಗ್ಗೆ ಕೂಡ ವಿಧಾಯಕ ಕಾರ್ಯಕ್ರಮವು ಸಾಗುತ್ತಿದ್ದಂತೆ ಇಂದು ಕನ್ನಡನಾಡಿನಲ್ಲಿ ಕೂಡ ಆ ಒಂದು ದೃಷ್ಟಿಯಿಂದ ಕಾರ್ಯವು ಹೆಚ್ಚಿನ ಹುರುಪಿನಿಂದ ಮುಂದುವರಿಯಬೇಕಾಗಿದೆ. ಪ್ರಾಂತೀಕರಣ ಅದಕ್ಕೊಂದು ಆವಶ್ಯಕವಾದ

ಸಾಧನ; ನಮ್ಮ ಜೀವನವನ್ನು ಸಾಧ್ಯವಾದಷ್ಟು ಸಹಜ, ಸರಳ ಮತ್ತು ಸಂತೃಪ್ತ: ಮಾಡಿಕೊಳ್ಳುವದೇ ನಮ್ಮ ಹಿರಿಯ ಗುರಿಯಾಗಿರಬೇಕಷ್ಟೆ!

ತುಂಡಾದ ನಮ್ಮ ನಾಡು ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಪ್ರಾಂತಗಳಲ್ಲಿ ವಿಭಜಿಸಲ್ಪಟ್ಟಿತು; ಮುಂಬಯಿ, ಮದರಾಸು ಮತ್ತು ಹೈದರಾಬಾದುಗಳಲ್ಲಿ ಅದು ಕೊನೆಯ ಒಂದೊಂದು ಮೂಲೆಯಲ್ಲಿ ಚದರಿ ಬಿದ್ದಿತು. ಮೈಸೂರು ಇಡಿಯ ರಾಜ್ಯವೆ ದೇಶದ ಯಾವುದೊ ಒಂದು ದೂರದ ಭಾಗವಾದಂತಾಯಿತು. ಅಂತೆಯೆ ಪಡುವಣದಿಂದ ಹಾರಿಬರುವ ಯಾವ ಹೊಸ ವಿಚಾರವೆ ಆಗಲಿ, ಆಡಳಿತದ ಒಂದು ಉಪಕಾರದ ಯೋಜನೆಯೆ ಆಗಲಿ ಮಿಕ್ಕ ಎಲ್ಲರ ನಂತರ, ಅದರ ಸಾರಸರ್ವಸ್ವವನ್ನು ಸವಿದು ಹೀರಿ, ಹಿಂಗಿ, ನೋಡಿದ ನಂತರ ಅದು ಕನ್ನಡಿಗರ ಪಾಲಿಗೆ ಪಂಚಾಮೃತವಾಗಿ ಬರುವದು ಸಾಮಾನ್ಯವಾದ ಒಂದು ಪದ್ಧತಿಯಾಯಿತು; ದುರ್ದೈವದಿಂದ ಇದು ಕೆಲ ಪ್ರಮಾಣದಲ್ಲಿ ಇನ್ನೂ ಮುಂದುವರಿಸಲಾಗಿದೆ. ಅಂತಹ ಈ ಒಂದು ಪ್ರವಾಹದಲ್ಲಿಯೆ ಗ್ರಂಥಾಲಯದಂತಹ "ವಸ್ತು"ವೂ ನಮ್ಮ ಕಡೆಗೆ ಕ್ರಮವಾಗಿ ಹರಿದು ಬಂದಿದ್ದರೇನು ಸೋಜಿಗವಲ್ಲ. ಹಿಂದಿನ ಕಾಲದಲ್ಲಿ ದೇಶೀಯ ಅರಸರಾಗಲಿ, ಧರ್ಮಾಧಿಕಾರಿಗಳಾಗಲಿ ನಡೆಯಿಸಿಕೊಂಡು ಬರುತ್ತಿದ್ದ ಕೆಲವು ಗ್ರಂಥಭಂಡಾರಗಳು ಕಳೆದ ಶತಮಾನದಿಂದಷ್ಟೆ ಅಲ್ಲದೆ ಇನ್ನೂವರೆಗೆ ಅಸ್ತಿತ್ವದಲ್ಲಿರುತ್ತವೆ. ಇಂತಹ ಭಂಡಾರಗಳಲ್ಲಿ ಮೈಸೂರು ಅರಮನೆಯ ಸರಸ್ವತೀಭಂಡಾರ, ಧಾರವಾಡದಲ್ಲಿರುವ ಸಂಸ್ಕೃತ ಪಾಠಶಾಲಾ ಗ್ರಂಥಭಂಡಾರದಂತಹ ಸಂಸ್ಥೆಗಳ ಸಂಗ್ರಹಗಳು ಒಂದು ರೀತಿಯಿಂದ ಅನುಕರಣೀಯ ಕಾರ್ಯವನ್ನು ಮಾಡುತ್ತಿರುವವು. ಆದರೆ ಈ ಚಿಕ್ಕ ರೂಪದಲ್ಲಿ ಆರಂಭವಾದ ಗ್ರಂಥಾಲಯಗಳಲ್ಲಿ ೧೮೪೮ ರಲ್ಲಿ ಸ್ಥಾಪಿತವಾದ ಬೆಳಗಾವಿಯ ಸಾರ್ವಜನಿಕ ಗ್ರಂಥಭಂಡಾರವೆ ಕನ್ನಡನಾಡಿನಲ್ಲಿ ಮೊದಲನೆಯದು ಎಂದೆನ್ನಬಹುದು. ಅದೂ ಆಡಳಿತದ ಮತ್ತು ಅಂತರ್ವ್ಯವಸ್ಥೆಯ ದೃಷ್ಟಿಯಿಂದ ಅನೇಕ ಏಳು – ಬೀಳುಗಳನ್ನು ಸಹಿಸಿದ್ದರೂ ಶತಾಯುಷಿಯಾಗಿ ಬಾಳಿ ಇನ್ನೂ ಜನತೆಯ ಸೇವೆಯಲ್ಲಿ ಹುಮ್ಮಸ್ಸಿನಿಂದ ಮುಂದುವರಿಯುತ್ತಿದ್ದುದು ಅಭಿನಂದನೀಯವಾದ ಸಂಗತಿ. ಮುಂಬಯಿ ರಾಜ್ಯದ ಗ್ರಂಥಾಲಯ ಅಭಿವೃದ್ಧಿಯೋಜನೆಯ ಮೇರೆಗೆ ಅದೀಗ ಪ್ರಾಂತೀಯ ಗ್ರಂಥಾಲಯ ಪ್ರಪಂಚದಲ್ಲಿ ಬೆಳಗಾವಿಯ ಜಿಲ್ಲೆಗೆ ಹಿರಿಯ ಸಂಸ್ಥೆಯಾಗಿದ್ದು

ಈಗ ಅದರ ಗ್ರಂಥಸಂಗ್ರಹ ಹನ್ನೆರಡು ಸಾವಿರವನ್ನು ತಲುಪಿದೆ. ಕಳೆದ ವರ್ಷ ಆ ಸಂಸ್ಥೆಯ ವಾರ್ಷಿಕ ವ್ಯಯ ಹನ್ನೆರಡು ಸಾವಿರ ರೂಪಾಯಿಗಳ ಸೀಮೆಯನ್ನು ದಾಟಿತ್ತು.

ಹದಿನೆಂಟನೆಯ ಶತಕದಲ್ಲಿ ಇಂತಹ ಗಾಳಿಗಳಲ್ಲಿ ಸಿಕ್ಕು ತೇಲಿ ಬಂದು ಅಲ್ಲಿ ಒಂದು, ಇಲ್ಲಿ ಒಂದು ಗ್ರಂಥಾಲಯಗಳು ನೆಲೆಯೂರಿದುವು ಇನ್ನೂ ಅನೇಕ ಇರುತ್ತವೆ. ಅವುಗಳಲ್ಲಿ ಪ್ರಾಮುಖ್ಯವಾಗಿ ೧೮೬೩ ರಲ್ಲಿ ಹುಟ್ಟಿದ ಕಾರವಾರ ಸಾರ್ವಜನಿಕ ಗ್ರಂಥಭಂಡಾರ, ೧೮೬೮ರಲ್ಲಿ ಸ್ಥಾಪಿತವಾದ ಬಾಗಿಲುಕೋಟೆಯ ಮತ್ತು ಸವದತ್ತಿಯ ಸಾರ್ವಜನಿಕ ಗ್ರಂಥಾಲಯಗಳು, ೧೮೭೫ ರಲ್ಲಿ ಆರಂಭವಾದ ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಗ್ರಂಥಾಲಯ, ೧೮೮೧ ರಲ್ಲಿ ಜನ್ಮ ತಾಳಿದ ಶಿರಹಟ್ಟಿಯ ಲೋಕಮಾನ್ಯ ಗ್ರಂಥಾಲಯ, ೧೮೮೫ ರಲ್ಲಿ ಜನಿಸಿದ ವಿಜಾಪುರದ ಸಾರ್ವಜನಿಕ ಗ್ರಂಥಭಂಡಾರ, ೧೮೮೭ ರಲ್ಲಿ ಜನನ ಪಡೆದ ನವಿಲುಗುಂದದ ಸಾರ್ವಜನಿಕ ಗ್ರಂಥಾಲಯ ಮತ್ತು ೧೮೯೧ ರಲ್ಲಿ ಸ್ಥಾಪನೆಯಾದ ಮೈಸೂರು ಪ್ರಾಚ್ಯ ಸಂಶೋಧನ ಸಂಸ್ಥೆಯ ಗ್ರಂಥಭಂಡಾರ ಇವೇ ಮೊದಲಾಗಿವೆ.

ಆದರೆ ನಿಜವಾಗಿಯೂ ಗ್ರಂಥಾಲಯ ಆಂದೋಲನವು ಹೆಚ್ಚು ವೇಗದಿಂದ ಕರ್ನಾಟಕದಲ್ಲಿ ಮುಂದುವರಿದುದು ಈ ಶತಮಾನದ ಮೊದಲ ಅರ್ಧದಲ್ಲಿಯೆ; ಆದೂ ರಾಷ್ಟ್ರೀಯ ಆಂದೋಲನದ ಒಂದು ಉಪಾಂಗವಾಗಿ, ಪ್ರೇರಿತ ಕಾರ್ಯಕ್ರಮವಾಗಿ, ಪ್ರತಿಬಿಂಬಿತ ಚಟುವಟಿಕೆಯಾಗಿ ನಮ್ಮ ನಾಡಿನಲ್ಲಿ ಮುಂದುವರಿಯಿತು. ಈ ರೀತಿಯಾಗಿ ನಮ್ಮ ಕಡೆಯ ಭಾಗದಲ್ಲಿ ಈ ಶತಕದ ಮೊದಲ ಪಾದದಲ್ಲಿ ಹುಟ್ಟಿದ ಕೆಲವು ಗ್ರಂಥಭಂಡಾರಗಳ ವಿವರಗಳನ್ನು ಇಲ್ಲಿ ತಿಳಿಸಬಹುದು. ೧೯೦೫ ರಲ್ಲಿ ಹುಟ್ಟಿದ ಜಮುಖಂಡಿಯ ಗ್ರಂಥಭಂಡಾರದಲ್ಲಿ ಈಗ ಐದು ಸಾವಿರ ಪುಸ್ತಕಗಳಿರುತ್ತವೆ; ಅದರ ವ್ಯವಸ್ಥೆಗಾಗಿ ವರ್ಷವೊಂದಕ್ಕೆ ಒಂದೂವರೆ ಸಾವಿರ ರೂಪಾಯಿಗಳ ವೆಚ್ಚವಾಗುತ್ತದೆ. ೧೯೧೫ ರಲ್ಲಿ ಮೈಸೂರು ಮತ್ತು ಬೆಂಗಳೂರು ಸಾರ್ವಜನಿಕ ಗ್ರಂಥಾಲಯಗಳು ಆರಂಭವಾಗಿ ಈಗ ಅವುಗಳಲ್ಲಿ ಅನುಕ್ರಮವಾಗಿ ಹದಿನೈದು ಮತ್ತು ಇಪ್ಪತ್ತೈದು ಸಾವಿರ ಪುಸ್ತಕಗಳ ಸಂಗ್ರಹಗಳಿರುತ್ತವೆ ಮತ್ತು ಎಂಟು ಹಾಗೂ ಇಪ್ಪತ್ಮೂರು ಸಾವಿರ ರೂಪಾಯಿಗಳ ವೆಚ್ಚವು ಪ್ರತಿವರ್ಷ ಆಗುತ್ತದೆ. ೧೯೧೭

ರಲ್ಲಿ ಅಥಣಿಯ ಸಿದ್ಧೇಶ್ವರ ಗ್ರಂಥಭಂಡಾರವು ಸ್ಥಾಪಿಸಲ್ಪಟ್ಟಿದೆ. ಸದ್ಯ ಅದರಲ್ಲಿ ಆರು ಸಾವಿರದಷ್ಟು ಪುಸ್ತಕಗಳಿದ್ದು ಪ್ರತಿಯೊಂದು ವರ್ಷ ಅದರ ಸಲುವಾಗಿ ಒಂದು ಸಾವಿರ ರೂಪಾಯಿ ವೆಚ್ಚವಾಗುತ್ತಿದೆ. ಮುಂದೆ ನೋಡಲಾಗಿ ೧೯೧೮ ರಲ್ಲಿ ಚಿತ್ರದುರ್ಗ ಮತ್ತು ತುಮಕೂರುಗಳಲ್ಲಿ ಶ್ರೀಕೃಷ್ಣರಾಜೇಂದ್ರ ಗ್ರಂಥಭಂಡಾರಗಳು ಆರಂಭಿಸಲ್ಪಟ್ಟವೆ. ಇಂದಿನ ಅವುಗಳ ಗ್ರಂಥಸಂಖ್ಯೆ ಏಳು ಮತ್ತು ಎಂಟು ಸಾವಿರದಷ್ಟಿದ್ದು ಅಲ್ಲಿ ಪ್ರತಿವರ್ಷ ಎರಡೂವರೆ ಮತ್ತು ಎರಡು ಸಾವಿರದಷ್ಟು ರೂಪಾಯಿಗಳ ಖರ್ಚಾಗುತ್ತದೆ. ೧೯೨೦ ರಲ್ಲಿ ಧಾರವಾಡದ ಶಾಂತೇಶ ವಾಚನಾಲಯವು ಜನ್ಮತಳೆದಿದೆ. ಈಗ ಅದರಲ್ಲಿ ಎಂಟು ಸಾವಿರದಷ್ಟು ಪುಸ್ತಕಗಳ ಸಂಗ್ರಹವಿದ್ದು ವರ್ಷವೊಂದಕ್ಕೆ ಅದರ ಸಲುವಾಗಿ ಮೂರು ಸಾವಿರ ರೂಪಾಯಿಗಳ ವ್ಯಯವಾಗುತ್ತಿದೆ. ೧೯೨೨ ರಲ್ಲಿ ಅತ್ತ ಮಂಗಳೂರಿನಲ್ಲಿ ಸಾರ್ವಜನಿಕ ಗ್ರಂಥಾಲಯ ಮತ್ತು ಇತ್ತ ಹುಬ್ಬಳ್ಳಿಯಲ್ಲಿ ಸರಸ್ವತೀ ವಿದ್ಯಾರಣ್ಯ ಗ್ರಂಥಾಲಯಗಳು ರೂಪಿಸಲ್ಪಟ್ಟವೆ. ಮೊದಲಿನದರಲ್ಲಿ ಹತ್ತು ಸಾವಿರದಷ್ಟು ಪುಸ್ತಕಗಳ ಸಂಕಲನವಿದ್ದು ವರ್ಷವೊಂದಕ್ಕೆ ಐದು ಸಾವಿರ ರೂಪಾಯಿಗಳು ಖರ್ಚಾಗುತ್ತಿವೆ; ಎರಡನೆಯದರಲ್ಲಿಯೂ ಹತ್ತು ಸಾವಿರ ಪುಸ್ತಕಗಳಿದ್ದು ಅಲ್ಲಿ ಎರಡು ಸಾವಿರ ರೂಪಾಯಿಗಳ ವೆಚ್ಚವು ಪ್ರತಿವರ್ಷ ಸಂಭವಿಸುತ್ತದೆ.

ಈ ರೀತಿಯಾಗಿ ಆ ಕಾಲಖಂಡದಲ್ಲಿ ಗ್ರಂಥಾಲಯಗಳು ಹುಟ್ಟಿದ್ದರೂ ಆ ಕಾಲಕ್ಕೆ ಮತ್ತು ಅದರ ಮುಂದಿನ ಎರಡನೆಯ ಪಾದದಲ್ಲಿ ಗ್ರಂಥಾಲಯಗಳನ್ನು ಊರೂರುಗಳಲ್ಲಿ, ಹಳ್ಳಿಹಳ್ಳಿಗಳಲ್ಲಿ, ಕೇರಿಕೇರಿಗಳಲ್ಲಿ, ಉದ್ಯಮ–ಉದ್ಯಮಗಳಲ್ಲಿ ಸ್ಥಾಪಿಸಿಕೊಳ್ಳಬೇಕೆಂಬ ಲವಲವಿಕೆ, ಪ್ರಯತ್ನ ಮತ್ತು ಪ್ರಗತಿ ಆದುದು ಕಂಡುಬರುತ್ತದೆ. ಈಗ ಇಡಿಯ ಕನ್ನಡನಾಡಿನಲ್ಲಿ ಒಟ್ಟಾರೆ ಎಷ್ಟು ಗ್ರಂಥಾಲಯಗಳು ಕಾರ್ಯಕ್ಷಮವಾಗಿರಬಹುದು ಎಂಬುದು ತಿಳಿದಿರದಿದ್ದರೂ, ಅವುಗಳಲ್ಲಿ ವಿಶೇಷವಾಗಿ ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳ ಗ್ರಂಥಾಲಯಗಳು, ಧಾರವಾಡದಲ್ಲಿರುವ ಕರ್ನಾಟಕ ಪ್ರಾದೇಶಿಕ ಗ್ರಂಥಾಲಯ, ಮೈಸೂರು ಮತ್ತು ಬೆಂಗಳೂರುಗಳಲ್ಲಿರುವ ಸಾರ್ವಜನಿಕ ಗ್ರಂಥಭಂಡಾರಗಳು ಮತ್ತು ಮಂಗಳೂರು ಹಾಗೂ ಬೆಳಗಾವಿಯ ಹಿರಿಯ ಗ್ರಂಥಾಲಯಗಳು ಹೆಚ್ಚು ಪ್ರಭಾವಿಯಾದ ಮತ್ತು ಚೈತನ್ಯಯುತ ಸಂಸ್ಥೆ

ಗಳೆಂದು ಸಾಮಾನ್ಯವಾಗಿ ಹೇಳಬಹುದು. ಇವಲ್ಲದೆ ನಾಡಿನ ಮೂಲೆಮೂಲೆಗಳಲ್ಲಿ ಸಾವಿರಾರು ಸಂಸ್ಥೆಗಳು, ಸಂಘಗಳ ವಿಭಾಗಗಳು ಈ ದಿಕ್ಕಿನಲ್ಲಿ ಅವ್ಯಾಹತವಾಗಿ ದುಡಿಯುತ್ತಿರಲಿಕ್ಕೆ ಸಾಕು.

ಈ ಎಲ್ಲ ಸಂಸ್ಥೆಗಳನ್ನು ಹುರಿದುಂಬಿಸಿ ಅವುಗಳಲ್ಲಿ ನವಜಾಗೃತಿಯನ್ನು ಹುಟ್ಟಿಸಿ ಹೆಚ್ಚಿನ ಹುಮ್ಮಸ್ಸಿನಿಂದ ಕಾರ್ಯಪ್ರವೃತ್ತ ಮಾಡಲಿಕ್ಕೆ ಹೆಚ್ಚಿನ ಕಾರಣ ಎಂದರೆ ಮೊದಲನೆಯದಾಗಿ ರಾಷ್ಟ್ರೀಯ ಆಂದೋಲನ; ಎರಡನೆಯದಾಗಿ ಮೈಸೂರಿನ ಪ್ರಗತಿಶೀಲ ಧೋರಣೆ ಮತ್ತು ಮೂರನೆಯದಾಗಿ ಸಂಯುಕ್ತ ಕರ್ನಾಟಕದ ಆಂದೋಲನ. ಇತ್ತ ಧಾರವಾಡದ ಕಡೆಯಲ್ಲಿ ಶ್ರೀ. ಕಡಪಾ ರಾಘವೇಂದ್ರರಾಯರು, ಶ್ರೀ. ಆಲೂರು ವೆಂಕಟರಾಯರು ಮತ್ತು ಶಾಂತಕವಿಗಳು, ಅತ್ತ ಮೈಸೂರಿನಲ್ಲಿ ಶ್ರೀ.ಶೇಷಾದ್ರಿ ಅಯ್ಯರ ಅವರು ಶ್ರೀ. ಎಂ. ವಿಶ್ವೇಶ್ವರಯ್ಯ ಅವರು ಮತ್ತು ಶ್ರೀ. ಬಿ. ಎಂ. ಶ್ರೀಕಂಠಯ್ಯನವರು, ಆದರತ್ತ ಮಂಗಳೂರಿನಲ್ಲಿ ಶ್ರೀ. ಕಾರ್ನಾಡ ಸದಾಶಿವರಾಯರು ಮತ್ತು ಶ್ರೀ. ಪಂಜೆ ಮಂಗೇಶರಾಯರು ಗ್ರಂಥಾಲಯ ಆಂದೋಲನದ ಆಚಾರ್ಯರಾಗಿ ದುಡಿದರು; ಆದಿಪುರುಷರಾಗಿ ಹೆಣಗಿದರು. ಅವರ ಪ್ರಯತ್ನ, ಪ್ರಭಾವ ಮತ್ತು ಪ್ರಸಾದ ಎಂದೇ ಆ ಕಾಲದಲ್ಲಿ ಅಷ್ಟೇ ಅಲ್ಲ, ಈಗ ಕೂಡ ಅಲ್ಲಲ್ಲಿ ಕರ್ನಾಕ ಸಂಘಗಳ ಆಶ್ರಯದಲ್ಲಿ ಇಲ್ಲವೆ ಸ್ವತಂತ್ರವಾಗಿ ಕನ್ನಡನಾಡಿನ ಒಳಗೂ ಹೊರನಾಡಿನಲ್ಲಿಯೂ ಗ್ರಂಥಾಲಯಗಳು ಹುಟ್ಟುತ್ತಿವೆ. ಇಂತಹ ಹೊರನಾಡಿನ ಗ್ರಂಥಾಲಯಗಳಲ್ಲಿ ವಿಶೇಷವಾಗಿ ಮುಂಬಯಿಯಲ್ಲಿರುವ ಕರ್ನಾಟಕ ಸಂಘ, ಮೊಗವೀರ ವ್ಯವಸ್ಥಾಪಕ ಮಂಡಲಿ ಮತ್ತು ಕನ್ನಡ ಸಂಘದ ಗ್ರಂಥಾಲಯಗಳು, ಮದರಾಸಿನಲ್ಲಿರುವ ಕರ್ನಾಟಕ ಸಂಘದ ಗ್ರಂಥಭಂಡಾರ, ಕಾಶಿಯಲ್ಲಿರುವ ವೀರಶೈವ ವಿದ್ವತ್ಸಭೆಯ ಕನ್ನಡ ಗ್ರಂಥಗಳ ನಿಧಿ ಮತ್ತು ಜಬ್ಬಲಪುರದಲ್ಲಿರುವ ಕರ್ನಾಟಕ ಸಂಘದ ಗ್ರಂಥಭಂಡಾರ ಇವುಗಳ ಹೆಸರುಗಳನ್ನು ನಮೂದಿಸಬಹುದು.

ಹೀಗೆ ತಕ್ಕ ಪ್ರಮಾಣದಲ್ಲಿ ಹಬ್ಬಿಕೊಂಡಿರುವ ಕರ್ನಾಟಕದ ಗ್ರಂಥಾಲಯಗಳಲ್ಲಿ ಇನ್ನೂ ಏಕಸೂತ್ರತೆಯಿಲ್ಲದಿರುವದು, ಅವುಗಳು ಸಾರ್ವತ್ರಿಕವಾಗಿ ನಾಡಿನಲ್ಲಿ ಕವಿದಿರುವ ಅಜ್ಞಾನ, ನಿರಕ್ಷರತೆ ಮತ್ತು ಅನಾಸ್ಥೆಗಳನ್ನು ದೂರ ಮಾಡಲಿಕ್ಕೆ ಒಂದು ಕಾರ್ಯಕ್ರಮವನ್ನು ಸ್ವೀಕರಿಸಿ ಅಣಿಯಾಗಿಲ್ಲದಿರುವದು

ಇವೇ ಮೊದಲಾದ ಕೊರತೆಗಳು ಮತ್ತು ತೊಂದರೆಗಳು ಇರುತ್ತವೆ. ಈ ಬಗೆಯ ಸಾಂಘಿಕ ಅಡೆ-ತಡೆಗಳನ್ನು ಪರಿಹರಿಸಲಿಕ್ಕೆ ಗ್ರಂಥಾಲಯಸಂಘದಂತಹ ಸಂಸ್ಥೆಗಳು ಎತ್ತುಗಡೆಯನ್ನು ಮಾಡಲಿಕ್ಕೆ ಯೋಗ್ಯವಾದುವು ಎಂದೆನ್ನಬಹುದು. ಈ ಉದ್ದೇಶವನ್ನು ಸಾಧಿಸಲಿಕ್ಕೆಂದು ಅನೇಕ ಸಾರೆ ಪ್ರಯತ್ನಗಳು ಕನ್ನಡನಾಡಿನಲ್ಲಿ ಮಾಡಲಾಗಿವೆ. ೧೯೩೦ ರಷ್ಟು ಮುಂಚೆಯೆ ಧಾರವಾಡದಲ್ಲಿ ಜರುಗಿದ ಅಖಿಲ ಕರ್ನಾಟಕ ರಾಜಕೀಯ ಪರಿಷತ್ತಿನಲ್ಲಿ ಗ್ರಂಥಾಲಯಗಳನ್ನು ಸ್ಥಾಪಿಸುವ ಬಗ್ಗೆ ಗೊತ್ತುವಳಿಯು ಸ್ವೀಕರಿಸಲ್ಪಟ್ಟಿತು. ೧೯೩೯ ರಲ್ಲಿ ಅಖಿಲ ಕರ್ನಾಟಕ ವಾಚನಾಲಯ ಪರಿಷತ್ತಿನ ಮೊದಲನೆಯ ಅಧಿವೇಶನವೂ ಜರುಗಿ ಕರ್ನಾಟಕ ಗ್ರಂಥಾಲಯ ಸಂಘ ಎಂಬ ಸಂಸ್ಥೆಯೂ ಸ್ಥಾಪಿತವಾಯಿತು. ಈ ಬಗೆಯ ಒಂದು ಸಂಘವು ಅಷ್ಟು ಹಿಂದೆ ಹುಟ್ಟಿದುದೂ ಸಾಕಷ್ಟು ವಿಶಾಲವಾದ ಧ್ಯೇಯವನ್ನು ಇಟ್ಟುಕೊಂಡಿರುವದೂ ಇಂದಿಗೆ ಕೂಡ ಎಲ್ಲರ ಕೌತುಕ ಮತ್ತು ಗೌರವಗಳಿಗೆ ಪಾತ್ರವಾದ ಸಂಗತಿಯಾಗಿರುವದು. ಆ ಸಂಘದ ಸಲುವಾಗಿ ಸ್ವೀಕರಿಸಿದ ಘಟನೆಯ ಮೇರೆಗೆ ಅದೊಂದು ಇಡಿಯ ಕನ್ನಡನಾಡಿಗೆ ಮಧ್ಯವರ್ತಿಯಾದ ಸಂಸ್ಥೆಯಾಗಬೇಕೆಂದೂ, ಕನ್ನಡನಾಡಿನಲ್ಲಿ ಅಷ್ಟೆ ಅಲ್ಲದೆ ಹೊರನಾಡ ಕನ್ನಡಿಗರು ಕೂಡ ಸ್ಥಾಪಿಸಿಕೊಂಡ ಗ್ರಂಥಾಲಯಗಳು ಅದರ ಸದಸ್ಯ ಆಗಬೇಕೆಂದೂ ಹೇಳಲಾಗಿದೆ. ಆಡಳಿತಕ್ಕಾಗಿ ಒಂದು ನಿಯಾಮಕ ಮಂಡಲ ಹಾಗೂ ಒಂದು ಕಾರ್ಯಮಂಡಲ ಯೋಜಿಸಲ್ಪಟ್ಟಿವೆ. ಗ್ರಂಥಾಲಯಗಳನ್ನು ಸ್ಥಾಪಿಸುವದು, ಜಿಲ್ಹೆಗೊಂದು ಮಾದರೀ ಗ್ರಂಥಭಂಡಾರವನ್ನು ರಚಿಸಿಕೊಳ್ಳುವದು, ಪುಸ್ತಕಗಳ ಪಟ್ಟಿಗಳನ್ನು ಪ್ರಕಟಿಸುವದು, ಉಪಯುಕ್ತ ಪುಸ್ತಕಗಳ ಪಟ್ಟಿಗಳನ್ನು ಸಿದ್ಧಗೊಳಿಸುವದು, ಸಂಚಾರ ಗ್ರಂಥಾಲಯಗಳನ್ನು ನಿರ್ಮಿಸುವದು, ಇಡಿಯ ಕನ್ನಡನಾಡಿಗೆ ಒಂದು ಮಹಾ ಗ್ರಂಥಾಲಯವನ್ನು ಅಂದರೆ ಪ್ರಾಂತೀಯ ಕೇಂದ್ರ ಗ್ರಂಥಭಂಡಾರವನ್ನು ಸ್ಥಾಪಿಸುವದು ಇವೇ ಮೊದಲಾದ ಉನ್ನತವಾದ ಮತ್ತು ಪ್ರಗತಿಶೀಲವಾದ ಉದ್ದೇಶಗಳನ್ನು ಈ ಸಂಘವು ಇಟ್ಟುಕೊಂಡಿದೆ. ಆದರೆ ಅದೇನೊ ಹಣದ ಕೊರತೆಯೆಂದೊ, ಕಾರ್ಯಕರ್ತೃಗಳ ಅಭಾವವೆಂದೊ, ಪ್ರೋತ್ಸಾಹವಿಲ್ಲದ ಪರಿಸ್ಥಿತಿಯೆಂದೊ, ಕಾಲಮಹಿಮೆಯೆಂದೊ ಆ ಸಂಘದ ಕಾರ್ಯವು ಸಾಕಷ್ಟು ಫಲಪ್ರದವಾಗಿಲ್ಲ. ಇಲ್ಲಿಯವರೆಗೆ ಜರುಗಿದ ನಾಲ್ಕು

ಸಮ್ಮೇಳನಗಳಲ್ಲಿ ಮೂಲ ವಿಷಯ ಮತ್ತು ಮೂಲವಿಚಾರಗಳ ಬಗ್ಗೆಯೂಗಿಯೆ ಸ್ಥಿತ್ಯಂತರವಾದುದು ಕಂಡುಬರುತ್ತದೆ. ೧೯೨೯ ರಲ್ಲಿ ಜರುಗಿದ ಮೊದಲನೆಯ ಸಮ್ಮೇಳನವು ಅಖಿಲ ಕರ್ನಾಟಕ ಸಮ್ಮೇಳನವಾದರೆ, ೧೯೪೭ ರಲ್ಲಿ ಜರುಗಿದ ಸಮ್ಮೇಳನವು ಮುಂಬಯಿ ಕರ್ನಾಟಕ ವಾಚನಾಲಯ ಸಮ್ಮೇಳನವಾಯಿತು. ಅದರಂತೆಯೆ ೧೯೪೪ ರಲ್ಲಿ ಕೂಡಿದ ಅಖಿಲ ಕರ್ನಾಟಕ ಏಕೀಕರಣ ಸಮ್ಮೇಳನದ ಕಾಲಕ್ಕೆ ಜರುಗಿದ ಗ್ರಂಥಭಂಡಾರ ಸಮ್ಮೇಳನವು ಹಾಗೆಯೆ ಅಖಿಲ ಕರ್ನಾಟಕವನ್ನು ತನ್ನ ಪ್ರದೇಶವನ್ನಾಗಿ ಮಾಡಿಕೊಂಡಿದ್ದರೆ ೧೯೫೨ ರಲ್ಲಿ ಜರುಗಿದ ಸಮ್ಮೇಳನವು ಮುಂಬಯಿ ಕರ್ನಾಟಕ ವಾಚನಾಲಯ ಸಮ್ಮೇಳನವಾಯಿತು. ಈ ರೀತಿಯಾಗಿ ಸಮ್ಮೇಳನ ಮತ್ತು ಸಂಘ ಇವುಗಳ ಕ್ಷೇತ್ರದಲ್ಲಿ ನಿಶ್ಚಿತತೆಯಿಲ್ಲದಿರುವದಕ್ಕೆ ಇದೊಂದು ದೃಷ್ಟಾಂತನೆಂದು ನೋಡಬಹುದು.

ಈ ವಿಷಯದಲ್ಲಿ ನಾವು ನಿರ್ದಿಷ್ಟವಾದ ಕ್ಷೇತ್ರವನ್ನು ಮತ್ತು ಕಾರ್ಯಯೋಜನೆಯನ್ನು ಇಟ್ಟುಕೊಳ್ಳುವದು ಅವಶ್ಯವಾಗಿದೆ. ಅದು ಎಷ್ಟೆ ಸಂಕುಚಿತ ಎಂದು ತೋರಲಿ, ಅಲ್ಪವಾದ ಆದರ್ಶ ಎಂದು ಜನರಿಂದ ಆಡಿಸಿಕೊಳ್ಳಲಿ, ಒಂದು ಕ್ಷೇತ್ರವನ್ನು ನಿಶ್ಚಿತಗೊಳಿಸುವದು ಮೊದಲು ಮಾಡತಕ್ಕ ಕೆಲಸವಾಗಿದೆ. ಹಾಗೆ ಇಡಿಯ ಕನ್ನಡನಾಡಿನ ದೃಷ್ಟಿಯನ್ನಿಟ್ಟುಕೊಂಡು ಅದಕ್ಕೆ ತಕ್ಕಂತೆ ಕಾರ್ಯಕ್ರಮವನ್ನು ಗೊತ್ತುಮಾಡಿಕೊಂಡು ಕ್ರಮಕ್ರಮವಾಗಿ ಮುಂದುವರಿದರೆ ಒಳ್ಳೆಯದೆ. ಅಂತಹದೆ ಒಂದು ಆದರ್ಶಚಿತ್ರವನ್ನು ಕಣ್ಣೆದುರಿನಲ್ಲಿ ಇಟ್ಟುಕೊಂಡು, ಕರ್ನಾಟಕ ಗ್ರಂಥಾಲಯ ಸಂಘದಂತಹ ಸಂಸ್ಥೆಗೆಂದು ಒಂದು ಕಾರ್ಯಯೋಜನೆಯ ರೂಪರೇಷೆಯನ್ನು ಇಲ್ಲಿ ಕೊಡುವ ಪ್ರಯತ್ನ ಮಾಡಲಾಗಿದೆ.

ಆರಂಭದಲ್ಲಿಯೆ ಕರ್ನಾಟಕ ಗ್ರಂಥಾಲಯ ಸಂಘದ ಪರಿವರ್ತಕರು ಕಂಡುಹಿಡಿದಂತೆ ಕರ್ನಾಟಕದಲ್ಲಿ ಸ್ಥಾಪಿತವಾಗಿರುವ ಮತ್ತು ಕನ್ನಡಿಗರು ಹೊರನಾಡುಗಳಲ್ಲಿ ನಿರ್ಮಿಸಿಕೊಂಡಿರುವ ಎಲ್ಲ ಗ್ರಂಥಭಂಡಾರಗಳು ಈ ಸಂಘಕ್ಕೆ ಸದಸ್ಯರಾಗಬೇಕು. ಕನ್ನಡನಾಡು ಇಂದಿಲ್ಲ ನಾಳೆ ಒಂದು ಆಡಳಿತದ ಪ್ರಾಂತವಾಗಿ ನಿರ್ಮಾಣವಾಗುವದು ನಿಃಸಂಶಯ ಮಾತು. ಆದರೆ ಅದು ನಾಳೆ ಆಗಬಹುದೆಂದು ಇಂದು ನಾವು ಸುಮ್ಮನೆ ಕೂಡ್ರಬೇಕಾಗಿಲ್ಲ. ಅಂತಹ ಪ್ರಾಂತವು ರಚಿತವಾದ ಮೇಲೆ ಶಾಸನರೂಪವಾಗಿ ಅಸ್ತಿತ್ವದಲ್ಲಿ ಬರಬೇಕಾದ

ಗ್ರಂಥಾಲಯ ವ್ಯವಸ್ಥೆಯನ್ನು ಇಂದು ನಾವು ಆಚರಣೆಯಲ್ಲಿ ಆರಂಭಮಾಡ ಬೇಕು. ರಾಜಕೀಯ ಕ್ಷೇತ್ರದಲ್ಲಿ ಸದ್ಯ ನಾವು ಒಂದು ಆಡಳಿತವನ್ನು ತಂದು ಕೊಡಲಿಕ್ಕೆ ಅಸಮರ್ಥರಾಗಿದ್ದರೂ ಗ್ರಂಥಾಲಯ ಪ್ರಪಂಚದಲ್ಲಿ ಶೀಘ್ರವಾಗಿ ಒಂದು ಆಡಳಿತವನ್ನು ಮಾಡಿಕೊಳ್ಳಬೇಕು. ಇದು ಗ್ರಂಥಾಲಯ ಸಂಘದಂತಹ ಸಂಸ್ಥೆಯಿಂದ ಸಹಜಸಾಧ್ಯವಾದುದು. ಪುಸ್ತಕ–ಪತ್ರಿಕೆಗಳನ್ನು ಸಂಗ್ರಹಿಸು ವದು ಒಂದು ವೆಚ್ಚದ ವಿಷಯವಾದರೂ ಗ್ರಂಥಾಲಯ ಜಗತ್ತಿನಲ್ಲಿ ನಿಯೋಜನ ದಿಂದ ಮಾಡಬೇಕಾದ ಕಾರ್ಯ ಇನ್ನೂ ಬೇಕಾದಷ್ಟಿದೆ. ಆಡಳಿತದ ದೃಷ್ಟಿ ಯಿಂದ ಸಹಿಸಬಹುದಾದ ಸರಕಾರ–ಸರಕಾರಗಳ ತೊಡಕು–ತೊಂದರೆಗಳು, ಹಣದ ದೃಷ್ಟಿಯಿಂದ ಒದಗಬಹುದಾದ ಕೊರತೆ–ಕುಂದುಗಳು, ಕಾರ್ಯ ಕರ್ತೃಗಳ ದೃಷ್ಟಿಯಿಂದ ಎದುರಿಸಬೇಕಾದ ಅಡೆ–ತಡೆಗಳು, ಕಟ್ಟಡಗಳ ದೃಷ್ಟಿಯಿಂದ ಹುಟ್ಟಬಹುದಾದ ತೊಳಲಾಟ–ಬಳಲಾಟಗಳು ಇವೆಲ್ಲವು ಗಳನ್ನು ದಾಟಿ, ಕೆಲವು ಕೆಲಸಗಳನ್ನಾದರೂ ಘಟ್ಟಘಟ್ಟವಾಗಿ ಮೊದಲು ಸಾಧಿಸಬಹುದಾದ ವಿಚಾರಗಳನ್ನು ಇಲ್ಲಿ ಕಾಣಬಹುದು.

ಮೊದಲನೆಯ ಘಟ್ಟದಲ್ಲಿ–ಈ ಸಂಘದ ಕೇಂದ್ರಸ್ಥಳದಿಂದ ಮಾತ್ರ– ಕನ್ನಡನಾಡಿನ ಮತ್ತು ಹೊರನಾಡ ಕನ್ನಡಿಗರ ಎಲ್ಲ ಗ್ರಂಥಾಲಯಗಳ ಬಗ್ಗೆ ಸಂಪೂರ್ಣ ಸಮಾಚಾರವನ್ನು ದೊರಕಿಸಬೇಕು. ಇವುಗಳನ್ನು ತಾಲೂಕು ಮತ್ತು ಜಿಲ್ಲೆಯ ತಳಹದಿಯ ಮೇಲೆ ವಿಂಗಡಿಸಿಕೊಂಡು ಒಂದು ಪಟ್ಟಿಯನ್ನು –ಅದರ ಇನ್ನೊಂದು ರೂಪವಾದ ಪ್ರಾಂತೀಯ ಗ್ರಂಥಾಲಯ ಚಿತ್ರವನ್ನು ಸಿದ್ಧ ಪಡಿಸಿಕೊಳ್ಳಬೇಕು. ಅದರ ಜೊತೆಯಲ್ಲಿಯೆ ಈ ಸಂಘದ ಪರವಾಗಿ ಒಂದು ಗ್ರಂಥಾಲಯದ ಮುಖಾಂತರ ಕನ್ನಡದಲ್ಲಿ ಬರುವ ಎಲ್ಲ ಪುಸ್ತಕಗಳ ಪಟ್ಟಿ ಗಳನ್ನು ಪಡೆಯಬೇಕು. ಆ ಮೇಲೆ ಆರಂಭವಾಗುತ್ತದೆ ಎರಡನೆಯ ಘಟ್ಟ. ಅದರಲ್ಲಿ ಮೊದಲಿಗೆ ಸಿದ್ಧವಾಗಿ ಪಡೆಯುತ್ತಿರುವ ಪುಸ್ತಕಗಳ ಪಟ್ಟಿಯನ್ನು, ಪತ್ರಿಕೆಗಳ ಪಟ್ಟಿಗಳನ್ನು ಪ್ರಾಂತದ ಎಲ್ಲ ಗ್ರಂಥಾಲಯಗಳಿಗೆ ಕಳಿಸಿ, ಅವು ಗಳಲ್ಲಿ ಸಾಧ್ಯವಾದವುಗಳನ್ನು ಕೊಳ್ಳುವಂತೆ ಬಿನ್ನವಿಸಿಕೊಳ್ಳಬೇಕು; ಎರಡ ನೆಯದಾಗಿ ಆ ಗ್ರಂಥಗಳ ವರ್ಗೀಕೃತ ಕ್ರಮಾಂಕ ಮತ್ತು ಸೂಚಕ ಪಟ್ಟಿ (Catalogue) ಗಳನ್ನು ಗೊತ್ತುಮಾಡಿ, ಎಲ್ಲ ಗ್ರಂಥಾಲಯಗಳಿಗೆ ಕಳಿಸ ಬೇಕು. ಇದರ ನಂತರ ಮೂರನೆಯ ಘಟ್ಟ. ಈ ಅವಧಿಯಲ್ಲಿ, ಸಂಘಕ್ಕೆ

ಸಾಕಷ್ಟು ಲೋಕಪ್ರಿಯತೆ ದೊರೆತಿದ್ದು ಆದಕ್ಕೆ ಹಣವನ್ನು, ದಾನರೂಪದಲ್ಲಿಯೂ, ಸರಕಾರದಿಂದ ಸಹಾಯಧನವೆಂದೂ ಪಡೆಯುವಂತಹ ಸ್ಥಿತಿಯು ಪ್ರಾಪ್ತವಾಗಿರುವದು. ಅಂತೆಯೆ ಆ ಹಣದ ಸಹಾಯದಿಂದ ಸಿದ್ಧಮಾಡಿದ ವರ್ಗೀಕರಣ ಮತ್ತು ಸೂಚಕಪಟ್ಟಿಗಳ ಪ್ರತಿಗಳನ್ನು ಗ್ರಂಥಭಂಡಾರಗಳಿಗೆಲ್ಲ ದೊರೆಯುವಂತೆ ಮಾಡಬೇಕು; ಮತ್ತು ಪತ್ರಿಕಾಲೇಖನಗಳ ಸಾರಗಳನ್ನು ತೆಗೆದು ಅವುಗಳಿಗೆಲ್ಲ ಪೂರೈಸುವ ವ್ಯವಸ್ಥೆಯನ್ನು ಕೈಕೊಳ್ಳಬೇಕು. ಆನಂತರ ಬರುವ ನಾಲ್ಕನೆಯ ಘಟ್ಟದಲ್ಲಿ ಜಿಲ್ಲೆಗೊಂದರಂತೆ ಇಪ್ಪತ್ತು ಆಡಳಿತಗಳನ್ನು ಮಾಡಿಕೊಂಡು, ಆ ಜಿಲ್ಹೆಗೆ ಸಂಬಂಧಿಸಿದ ಸರಕಾರದಿಂದ ಹಣವನ್ನು ಪಡೆದು ಹೆಚ್ಚು ಗ್ರಂಥಾಲಯಗಳನ್ನು ಸ್ಥಾಪಿಸುವದು, ಕಟ್ಟಡಗಳನ್ನು-ಪುಸ್ತಕಗಳನ್ನು ಕೊಳ್ಳುವದು ಮತ್ತು ಭಂಡಾರಿಗ ವರ್ಗಗಳನ್ನು ನಡೆಯಿಸುವದು ಮುಂತಾದ ಕೆಲಸವನ್ನು ಮಾಡಬಹುದು. ಕೊನೆಯ ಘಟ್ಟದಲ್ಲಿ ಹೆಚ್ಚು ಹಣ ಮತ್ತು ಅಧಿಕಾರವನ್ನು ಪಡೆದು ಒಂದು ಕಡೆ ಪ್ರಾಂತೀಯ ಕೇಂದ್ರಗ್ರಂಥಾಲಯವನ್ನು ಸ್ಥಾಪಿಸಿಕೊಳ್ಳಬೇಕು; ಇನ್ನೊಂದು ಕಡೆಯಿಂದ ಅಂತರ್ಗ್ರಂಥಾಲಯ ಸಂಬಂಧವನ್ನು, ಅಂತರ್ಪ್ರಾಂತೀಯ ವಿನಿಮಯವನ್ನು ತಂದುಕೊಳ್ಳಬೇಕು. ಇಷ್ಟರಲ್ಲಿ ಸಂಯುಕ್ತ ಕರ್ನಾಟಕ ಪ್ರಾಂತದ ನಿರ್ಮಾಣವಾದರೆ, ಶಾಸನದ ಸಹಾಯ ದೊರೆತು, ಕೊನೆಯ ಘಟ್ಟದ ಕೆಲಸವು ನಿರಾಯಾಸ ಮತ್ತು ನಿರಾತಂಕವಾಗುವದು.

# ೪. ಜ್ಞಾನದಾನ



ಜ್ಞಾನದಾನವು ಪವಿತ್ರವಾದ ಒಂದು ಕಾರ್ಯ, ಜ್ಞಾನಾರ್ಜನೆಯು ಉನ್ನತವಾದ ಒಂದು ಕರ್ತವ್ಯ ಎಂಬ ಮಾತುಗಳನ್ನು ಹೇಳಿ, ಸಾರಿ, ಸಿದ್ಧಗೊಳಿಸುವದು ಈಗ ಅಗತ್ಯವಾಗಿಲ್ಲ. ಆ ವಿಷಯವಾಗಿ ಮೂಲಸಿದ್ಧಾಂತಗಳ ಮೇಲೆಯೂ, ಅದರೊಳಗಿನ ವಿಷಯುಗಳ ಪದರು ಪದರುಗಳ ಮೇಲೆಯೂ ಅಸಂಖ್ಯ ವಿವಾದಾಸ್ಪದವಾದ ಅಂಶಗಳಿರುವ ಬಗೆಯಲ್ಲಿಯಂತೂ ಭಿನ್ನಾಭಿಪ್ರಾಯವಿಲ್ಲ. ಆದರೂ ಒಂದು ದೇಶದೊಳಗೆ ಹರಡಿರುವ ಅಜ್ಞಾನ ಮತ್ತು ಅಲ್ಲಿ ಸಾಕ್ಷರತೆಗಿಂತ ನಿರಕ್ಷರತೆಯೆ ಸಾರ್ವತ್ರಿಕವಾಗಿರುವ ಪರಿಸ್ಥಿತಿಯಿದ್ದಾಗ್ಗೆ ಅದು ಒಳ್ಳೆಯ ಸ್ಥಿತಿ ಎಂದು ಹೇಳುವವರು ಮಾತ್ರ ಯಾರೂ ಇಂದಿನ ಮಿತಿಯಲ್ಲಿ ದೊರೆಯಲಿಕ್ಕಿಲ್ಲ.

ನಮ್ಮ ರಾಷ್ಟ್ರವು ಸ್ವತಂತ್ರವಾಗಿದೆ; ಅದರಲ್ಲಿ ಮೇಲಿನ ಕೆಲವು ವಲಯುಗಳನ್ನು ನೋಡಿದರೆ ಈ ರಾಷ್ಟ್ರವು ಎಷ್ಟು ಪ್ರಗತಿಯನ್ನು ಸಾಧಿಸಿರುವದಲ್ಲ! –ಎಂಬ ಆನಂದಾಶ್ಚರ್ಯಗಳ ಉದ್ಗಾರವನ್ನು ತೆಗೆಯುವಂತಾಗುವದು. ಇಲ್ಲಿ ರಾಜಕೀಯ ಕ್ಷೇತ್ರಗಳಲ್ಲಿ ಪ್ರಪಂಚದ ಯಾವುದೇ ರಾಷ್ಟ್ರದ ವ್ಯವಸ್ಥೆಯೊಡನೆ ಸಾಭಿಮಾನದ ಸಮಾನತೆಯಿಂದ ನೋಡಿಕೊಳ್ಳಬಹುದಾದ ಮಂತ್ರಿಮಂಡಲವಿರುತ್ತದೆ; ಶಾಸನಸಭೆಯ ಕೇಂದ್ರದ ಹಿರಿಯ ಮತ್ತು ಕಿರಿಯ ಮನೆಗಳಿರುತ್ತವೆ. ಪ್ರಾಂತೀಯ ಮಟ್ಟದಲ್ಲಿಯೂ ಅದೇ ಬಗೆಯ ಉಚ್ಚವರ್ಗದ ಆಡಳಿತವು ಇರುತ್ತದೆ. ಅದರಂತೆಯೆ ಇಂದು ಶಾಸನಸಭೆಗಳ ಮುಖಾಂತರ ತಮ್ಮ ವೈಶಿಷ್ಟ್ಯಪೂರ್ಣವಾದ ವಿಚಾರಪ್ರಣಾಲಿಯನ್ನು ಪ್ರಚಾರದಲ್ಲಿ ತರುವದಕ್ಕಾಗಿ, ಜನಸಾಮಾನ್ಯರ ಒಟ್ಟು ಹಿತವನ್ನು ಸಾಧಿಸುವ ಪರಮೈಕವಾದ ಉದ್ದೇಶದಿಂದ ಕಟ್ಟಿಕೊಂಡ ರಾಜಕೀಯ ಪಕ್ಷಗಳಿರುತ್ತವೆ. ಅವು ಜಗತ್ತಿನ ಇತರ ರಾಷ್ಟ್ರಗಳ ಮಾದರಿಯಲ್ಲಿ ರಾಜಕೀಯ ತತ್ವಗಳ ಮೇಲೆ ರಚಿತವಾಗಿರುವ ಸಂಸ್ಥೆಗಳಾಗಿದ್ದು, ಇನ್ನೂ ವರೆಗೆ ಅಸ್ತಿತ್ವದಲ್ಲಿದ್ದ ಜಾತೀಯ, ಧಾರ್ಮಿಕ

ಇಲ್ಲವೆ ಪ್ರಾದೇಶಿಕ ತಳಹದಿಯನ್ನು ಹೆಚ್ಚುಹೆಚ್ಚಾಗಿ ತೋರೆಯುತ್ತಿರುವದು ಕಂಡುಬರುತ್ತದೆ. ರಾಜಕೀಯ ತತ್ವಪ್ರಣಾಲಿಯ ಕಟ್ಟಿನಿಂದ ಏರ್ಪಡಿಸಿಕೊಂಡ ಪಕ್ಷಗಳು ತತ್ಪರಿಣಾಮವಾಗಿ ವಿಶ್ವದ ಇಂತಹ ಮಹಾಪಕ್ಷಗಳ ಸಂಬಂಧ ಮತ್ತು ಹೋಲಿಕೆಯಲ್ಲಿ ಬರುತ್ತವೆ. ಆದರ ನಂತರ ಬರುವದು ಕಾರ್ಯವಿಭಾಗ; ಶಾಸನಗಳನ್ನು ಕಾರ್ಯರೂಪಕ್ಕಿಳಿಸುವ ಆಡಳಿತ. ಈ ವಿಷಯದಲ್ಲಿ ಕೂಡ ನಾವು ಇತರ ದೇಶಗಳಲ್ಲಿರುವ ಆಡಳಿತವಿಭಾಗದ ಸರಿಸಮಾನವಾದ ಪಡೆಯು ನಮ್ಮಲ್ಲಿರುವ ಬಗ್ಗೆ ಸಂತೋಷಪಟ್ಟುಕೊಳ್ಳಬೇಕಾಗಿದೆ. ಇದೇ ರೀತಿಯಾಗಿ ಮೇಲಿನ ಕೆಲವು ವರ್ಗ ಮತ್ತು ಕ್ಷೇತ್ರಗಳಲ್ಲಿ ಉದ್ಯಮ, ವಿದ್ಯಾಲಯಗಳು, ಪ್ರಯೋಗಶಾಲೆಗಳು, ಶಾಸ್ತ್ರೀಯ ವಿಷಯಗಳು ಮುಂತಾದವುಗಳಲ್ಲಿ ಉಚ್ಚವಾದ ಸ್ಥಿತಿಯನ್ನು ತಲುಪಿರುವದು ಕಂಡುಬರುತ್ತದೆ.

ಆದರೆ ಈ ಬಗೆಯ ಪ್ರಗತಿಯು, ಇಂತಹ ಪರಿಸ್ಥಿತಿಯು ಎಷ್ಟರಮಟ್ಟಿಗೆ ಅಕೃತ್ರಿಮವಾದುದು? ಅದರಲ್ಲಿ ಕಡೆಬಾಳುವ ಅಂಶಗಳು ಎಷ್ಟು ಪ್ರಮಾಣದಲ್ಲಿರುವವು? ಈ ಬಗೆಯ ಪ್ರಗತಿಯಲ್ಲಿ ಭಾರತದ ಕಾಣಿಕೆಯು ಎಷ್ಟು ಪ್ರಭಾವಪೂರ್ಣವಾಗಿರುವದು? ಇದು ಇನ್ನೂ ಶಕ್ತಿಯನ್ನು ಪಡೆದು, ಚಿರಂತನವಾದ ಒಂದು ಸ್ಫೂರ್ತಿಕಾರಂಜಿಯಾಗಲಿಕ್ಕೆ ಅದಕ್ಕೆ ಎಲ್ಲಿಂದ ಸಹಕಾರವು ಆಗತ್ಯ? – ಎಂಬಿವೇ ಮೊದಲಾದ ವಿಷಯಗಳನ್ನು ನಾವು ಇಂದು ಯೋಚಿಸಬೇಕಾಗಿದೆ. ಈಗ ನೂರಾರು ವರ್ಷಗಳಿಂದ ನಮ್ಮೊಳಗಿನ ಕೆಲವು ವಿದ್ಯಾಸಂಪನ್ನ ಜನರು ಪಾಶ್ಚಾತ್ಯರಲ್ಲಿ ರೂಢವಾಗಿರುವ ಹಲವು ಶಾಸನಸಂಬಂಧದ, ಆಡಳಿತದ ಇಲ್ಲವೆ ಸಮಾಜವ್ಯವಸ್ಥೆಯ ಸಂಸ್ಥೆಗಳ ಬಗೆಯಲ್ಲಿ ಸಮಾಚಾರವನ್ನು ಓದಿ, ಆಚರಣೆಯನ್ನು ತಿಳಿದು, ಸಹಕಾರವನ್ನು ನೀಡಿ ಅವುಗಳ ವಿಷಯವಾಗಿ ತಾವೂ ಅಲ್ಪಸ್ವಲ್ಪ ಕೈವಾಡವನ್ನು ಪಡೆದುದು ನಿಜ. ಆದರ ಪರಿಣಾಮವಾಗಿಯೆ ಇಂದು ನಾವು ಸಮಾಜದ ವಿವಿಧರಂಗಗಳಲ್ಲಿ ಈಗ ಐಯ್ದುವರ್ಷಗಳ ಪೂರ್ವದಲ್ಲಿದ್ದ ರೀತಿಯಲ್ಲಿಯೆ ಸುಸ್ಥಿತಿಯನ್ನು ಇರಿಸಿಕೊಂಡು ಸಾಗಲಿಕ್ಕೆ ಕೆಲವರು ಸಮರ್ಥರಾದುದನ್ನು ಕಾಣುತ್ತಿದ್ದೇವೆ.

ಆತ್ತ ಜನರ ವಿಷಯವಾಗಿ ನಾವು ಕೆಲವು ವಿಷಯಗಳನ್ನು ತಿಳಿಯಲೆಳಪರೆ ಇದೆಂತಹ ಕೃತಕಜೀವನ; ಇಲ್ಲಿ ಎಷ್ಟು ಭಯಾನಕವಾದ ವಿಷಮತೆ

ಇರುವದಲ್ಲ; ಈ ರೀತಿಯ ಪರಿಸ್ಥಿತಿಯಲ್ಲಿ ಮುಂದುವರಿದ ಈ ರಾಷ್ಟ್ರವು ತನ್ನ ಒಕ್ಕಟ್ಟಿನ, ತನ್ನ ಸಂರಕ್ಷಣೆಯ, ತನ್ನ ಸಾಂಸ್ಕೃತಿಕ ಕಾಣಿಕೆಯ ಮಟ್ಟವನ್ನು ಇದಕ್ಕಿಂತ ಹೆಚ್ಚು ಮಾಡಿಕೊಳ್ಳದಿದ್ದರೂ, ಇಷ್ಟೆ ಪ್ರಮಾಣದಲ್ಲಿ ಇರಿಸಿಕೊಳ್ಳ ಬಹುದೆ–ಎಂಬ ಸಾಶಂಕ ಪ್ರವೃತ್ತಿಯು ಉಂಟಾಗದಿರದು. ನಮ್ಮ ದೇಶದಲ್ಲಿ ನೂರಕ್ಕೆ ಹತ್ತರಷ್ಟು ಜನರು ಮಾತ್ರ ನಗರನಿವಾಸಿಗಳಾಗಿದ್ದಾರೆ. ಅವರೆಲ್ಲರೂ ನಾಗರಿಕರು ಎಂದೆನ್ನಿಸಿಕೊಳ್ಳುತ್ತಿದ್ದರೂ ಸುವಿದ್ಯರು ಅಥವಾ ಸುಶಿಕ್ಷಿತರು ಎನಿಸಿಕೊಳ್ಳುವಂತಹರಾಗಿಲ್ಲ. ಅದರಲ್ಲಿಯೂ ಅನೇಕರು ಕೇವಲ ತಮ್ಮ ಹೊಟ್ಟೆಯ ಹೋರೆಯ ವಿಷಯವಾಗಿ ಮಾತ್ರ ಕಿಂಚಿತ್ ಜ್ಞಾನವನ್ನು ಪಡೆದಿರುವರಾಗಿರುವರೆ ಹೊರತು ಅವರಿಗೆ ಅಕ್ಷರಜ್ಞಾನ ಕೂಡ ಇಲ್ಲದಿರುವ ಪರಿಸ್ಥಿತಿಯು ಸಾಮಾನ್ಯವಾಗಿರುವದು. ಪಡುವಣದ ಪಡಿಯಚ್ಚಿನ ಮೇರೆಗೆ ನಗರಗಳಲ್ಲಿ ಹೊಟ್ಟೆಯ ದಾರಿಯಿರುವದೊಂದು ಕಾರಣದಿಂದ ದೊಡ್ಡ ಪ್ರಮಾಣದಲ್ಲಿ ಹಳ್ಳಿಯ ಜನರೇ ಈ ಶತಮಾನದ ಮೊದಲರ್ಧದಲ್ಲಿ ನಗರಗಳತ್ತ ಸಾಗಿದರು. ಆದರೆ ನಗರಗಳ ವಸತಿ, ನಗರಗಳ ಬಾಳು ಇವುಗಳಲ್ಲಿ ಅಂತಹ ಜನರಿಗೆ ಶಿಕ್ಷಣ, ಸಾಮಾಜಿಕ ಸಮಸ್ಯೆಗಳ ಪರಿಹಾರ, ಸಾಂಸ್ಕೃತಿಕ ಜೀವನದ ವಿಕಾಸ ಇಂತಹ ವಿಚಾರಗಳತ್ತ ಕಣ್ಣೆತ್ತಿ ನೋಡುವದಕ್ಕೆ ಕೂಡ ವ್ಯವಧಾನ ಮತ್ತು ಸಮಯಾನುಕೂಲತೆಗಳು ಇಲ್ಲದೆ ಹೋದುವು.

ಇನ್ನು ನಮ್ಮ ದೇಶದ ಇಡಿಯ ಜನಸಂಖ್ಯೆಯಲ್ಲಿ ಓದು ಬಲ್ಲವರ ಪ್ರಮಾಣವನ್ನು ನೋಡಿದರೆ ಇದಕ್ಕಿಂತ ಹೆಚ್ಚಿನ ಸೋಜಿಗವು ಉಂಟಾಗದಿರದು. ಸಾಕ್ಷರತೆಯು ಸುಜ್ಞರಾಗಲಿಕ್ಕೆ ಅಷ್ಟೊಂದು ಸಂಬಂಧಪಟ್ಟಿಲ್ಲ ಅಥವಾ ಅನಿವಾರ್ಯವಾಗಿಲ್ಲ ಎಂದು ಕೆಲವರು ಸಾಧಿಸಬಹುದಾದರೂ ನೂರಕ್ಕೆ ಕೇವಲ ಹದಿನೈದರಷ್ಟು ಜನರು ನಮ್ಮ ದೇಶದಲ್ಲಿ ಓದುಬರೆಹಗಳನ್ನು ತಿಳಿದವರಾಗಿರುವರು ಎಂಬುದು ಗೊತ್ತಾದ ಮೇಲೆ ಇಂತಹ ಜನಸಂಖ್ಯೆಯಿಂದ ಆಡಳಿತದಲ್ಲಿ ಸಹಕಾರವನ್ನಾಗಲಿ, ಆರ್ಥಿಕ ಪ್ರಯತ್ನದಲ್ಲಿ ಪ್ರಗತಿಯನ್ನಾಗಲಿ ಹೇಗೆ ಪಡೆಯಬಹುದು ಎಂಬ ಯೋಚನೆಯುಂಟಾಗುವದು. ಇಂದು ಮೇಲಿನ ಸ್ಥಾನಗಳಲ್ಲಿದ್ದ ಜನರು ಕೈಕೊಳ್ಳುವ ವಿಚಾರ–ನಿರ್ಣಯಗಳು, ಅವರು ರೇಖಿಸುವ ವಿವಿಧ ವಿಕಾಸದ ಯೋಜನೆಗಳು, ಅವರು ಮಾಡುವ ವ್ಯಾಸಂಗಪೂರ್ಣವಾದ ಭಾಷಣಗಳು ಇವುಗಳನ್ನು ನೋಡಿ, ಕೇಳಿ, ತಿಳಿದುಕೊಂಡು

ಅವುಗಳಿಗೆ ತಮ್ಮ ಒಪ್ಪಿಗೆಯಿದೆ ಎಂದು ಸಾರುವದಷ್ಟೆ ಜನಸಾಮಾನ್ಯರ ಹೊಣೆಯು ಇಂದಿನದಾಗಿಲ್ಲ. ಯಾವುದೊಂದು ಕಾರ್ಯಕ್ರಮವೆ ಇರಲಿ–ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಔದ್ಯೋಗಿಕ ಮುಂತಾದ ಯಾವುದೇ ಕ್ಷೇತ್ರಕ್ಕೆ ಸಂಬಂಧಿಸಿದ ಸಮಸ್ಯೆಯೆ ಆಗಿರಲಿ–ಅದನ್ನು ಪರಿಹರಿಸುವ ಹೊಣೆ ಮತ್ತು ಕರ್ತವ್ಯ ಇಂದು ಪೂರ್ಣವಾಗಿ ಜನತೆಯದೆ ಆಗಿರುವದು ಹೊರತು ಕೇವಲ ಮಾರ್ಗದರ್ಶನವನ್ನು ಮಾಡುತ್ತಿರುವ ಮುಂದಾಳುಗಳದಲ್ಲ. ಆ ಆ ಪ್ರಮೇಯಗಳನ್ನು ತಿಳಿಯುವದು, ಅದಕ್ಕೆ ಸಂಬಂಧಿಸಿದ ಜನರ ಸಮುದಾಯಗಳನ್ನು ಸಂಧಿಸುವದು, ಅದನ್ನು ತೀರಿಸಲಿಕ್ಕೆ ಮಾಡಬೇಕಾದ ಉಪಾಯಗಳ ವಿಷಯವಾಗಿ ವಿಚಾರವಿನಿಮಯವನ್ನು ಕೈಕೊಳ್ಳುವದು, ಆಮೇಲೆ ತಮ್ಮವರೆ ಆದ ಕಾರ್ಯಕರ್ತೃಗಳ ಕೈಯಿಂದ ಮತ್ತು ಮಾರ್ಗದರ್ಶಕರ ಸಹಾಯದಿಂದ ಆ ಸಮಸ್ಯೆಯನ್ನು ಬಿಡಿಸಿಕೊಳ್ಳುವದು ಇಂದು ಅಗತ್ಯವಾಗಿದೆ. ತಮ್ಮ ತೊಡಕು–ತೊಂದರೆಗಳನ್ನು ಪರಿಹರಿಸಲಿಕ್ಕೆ ತಮ್ಮ ಜ್ಞಾನ, ತಮ್ಮ ಉತ್ಸಾಹ, ತಮ್ಮ ಸಾಧನಗಳು ಮತ್ತು ತಮ್ಮ ಜನರು ಇಂದು ಯೋಗ್ಯರು, ಸಮರ್ಥರು, ಹೊಣೆಗಾರರು. ಮಾರ್ಗದರ್ಶನ ಮಾಡುವ ಸ್ಥಾನದಲ್ಲಿ ಇರುವಂತಹ ಮೇಲಿನ ಇಲ್ಲವೆ ಮುಂದುವರಿದ ಜನರು ಕೂಡ ತಾವೆ ಮತ್ತು ತಮ್ಮವರೆ ಆಗಿರುವರು ಎಂಬ ಮಾತನ್ನು ನಾವು ತಿಳಿದುಕೊಂಡರೆ, ಅವರ ಪಾಲಿನ ಕಾರ್ಯವನ್ನು ಮಾಡುವದಕ್ಕೆ ಸಹಿತ ನಾವು ಹೊಸ ಹೊಸ ಪಡೆಯನ್ನು, ಹುರುಪಿನ ಪೀಳಿಗೆಯನ್ನು ಒದಗಿಸುವ ವಿಷಯದಲ್ಲಿ ಹೇಗೆ ಹೊಣೆಗಾರರಾಗಿರುವೆವು ಎಂಬ ಮಾತು ಸ್ಪಷ್ಟವಾಗುವದು.

ಭಾರತದ ಜನಸಂಖ್ಯೆಯಲ್ಲಿ ಮುಕ್ಕಾಲಿಗಿಂತ ಹೆಚ್ಚು ಜನರು ಅಕ್ಷರಹೀನರಾಗಿರುವಾಗ ಅದರ ಪರಿಣಾಮವಾಗಿ ನಾವು ಇನ್ನೂ ಅನೇಕ ನಮ್ಮ ಮೂಲಗುಣಗಳನ್ನು ಮರೆತಿರುವೆವು; ಅವುಗಳಲ್ಲೊಂದಾದ ಹೊಸ ಮತ್ತು ಹುರುಳಿನ ಗುಣಗಳನ್ನು ಕಲಿತುಕೊಳ್ಳುವ ವಿವೇಕವನ್ನು ನಾವು ಕಳೆದುಕೊಂಡಿರುವೆವು ಎಂದು ಹೇಳಬಹುದು. ಪಾಶ್ಚಾತ್ಯ ಪದ್ಧತಿಯ ಜೀವನ, ಪಡುವಣದಲ್ಲಿ ಸಿದ್ಧವಾದ ವಸ್ತು–ವಿಚಾರಗಳ ಪ್ರಯೋಗಗಳ ಮೇಲೆ ಸಂಪೂರ್ಣ ಅವಲಂಬನ, ಪರರ ಪ್ರಯತ್ನದಿಂದ ಮಾತ್ರ ಹೊಂದುತ್ತಿರುವ ಸಮಾಧಾನ ಇವುಗಳನ್ನು ನಾವು ಪಡೆಯುವದರಿಂದ ನಮ್ಮಲ್ಲಿರುವ ವಿಚಾರ

ಸಾಮರ್ಥ್ಯ, ಕರ್ತೃತ್ವಶಕ್ತಿ ಮತ್ತು ನಿಸರ್ಗಸಂಪತ್ತು ಕುಂದುತ್ತಲಿವೆ. ಅಂತೆಯೆ ನಮ್ಮ ಭೂ-ಖನಿ-ಜನ-ಜಲಗಳ ಕಾಣಿಕೆಗಳು ಗಾತ್ರದಲ್ಲಿಯೂ ಗುಣದಲ್ಲಿಯೂ ದಿನದಿನಕ್ಕೆ ಹೀನಸ್ಥಿತಿಯನ್ನು ತಲುಪುತ್ತಲಿವೆ; ಅಂತೆಯೆ ನಮ್ಮಲ್ಲಿರುವ ಆರ್ಥಿಕ ಗಳಿಕೆಯು ಕಾಲಕಾಲಕ್ಕೆ ಕುಸಿಯುತ್ತಲಿದೆ; ಅಂತೆಯೆ ನಮ್ಮ ಬುದ್ಧಿವಂತರ, ವ್ಯಾಪಾರಸ್ಥರ ಮತ್ತು ಉದ್ಯೋಗಿಗಳ ಪರಿಶ್ರಮವು ಪ್ರಪಂಚದ ಇತರ ಇಂತಹ ಸಮುದಾಯಗಳ ಸಂಗಡ ಹೋಲಿಸಿ ನೋಡಲಾಗಿ ಕಡಿಮೆಯಾಗುತ್ತಲಿದೆ; ಅಂತೆಯೆ ನಮ್ಮ ನಾಡಿನ ಗೈಮೆ, ನಮ್ಮ ನಾಡಿನ ಹಿರಿಮೆ, ನಮ್ಮ ನಾಡಿನ ಮೇಲ್ಮೆಗಳು ಒಂದಾನೊಂದು ಕಾಲಕ್ಕೆ ಹೆಸರು ಪಡೆದಿದ್ದು ಇಂದು ಹಿಂದೆ ಬೀಳುತ್ತಲಿವೆ. ಇದಕ್ಕೆ, ನಾವು ನಮ್ಮ ಬೇರುಗಳನ್ನು ತಿಳಿಯದೆ, ನಮ್ಮ ಮೂಲಸಮಸ್ಯೆಗಳ ಪರಿಹಾರವನ್ನು ಮಾಡದೆ, ನಮ್ಮ ಮುಖ್ಯ ಜನಸಮುದಾಯದ ಕಷ್ಟನಷ್ಟಗಳನ್ನು ಅರಿತು ದೂರಮಾಡಲಿಕ್ಕೆ ಪ್ರಯತ್ನಿಸದೆ, ಮೇಲೆಮೇಲೆ ಮಾತ್ರ ಹೊಳಪಿನ ಪರಿಯಿಂದ ಒಳಗಿನ ಗಾಯಗಳನ್ನು ಮುಚ್ಚಿಕೊಳ್ಳುವಂತೆ ಜೀವನ ಮಾಡುತ್ತಿರುತ್ತೇವೆ, ಎಂಬುದೆ ಕಾರಣವಾಗಿದೆ. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಹಾಗೆ ಮುಂದುವರಿಯುವದು ವಿಹಿತವೂ ಅಲ್ಲ, ಸಾಧ್ಯವೂ ಇಲ್ಲ ಎಂಬ ಮಾತನ್ನು ನಾವು ಅರಿಯಬೇಕು.

ಜ್ಞಾನವನ್ನು ಪಡೆಯುವದು, ವಿದ್ಯೆಯನ್ನು ಗಳಿಸುವದು, ಶಿಕ್ಷಣವನ್ನು ಹೊಂದುವದು, ಅಕ್ಷರಪರಿಚಯದಿಂದ ಮಾತ್ರ, ಪುಸ್ತಕಗಳಿಂದಲೇ ಅಥವಾ ಶಿಕ್ಷಕರ ಮುಖಾಂತರವಷ್ಟೇ ಅಲ್ಲ ಎಂಬ ಇನ್ನೊಂದು ವಿಚಾರವನ್ನು ನಾವು ಇಲ್ಲಿ ತಿಳಿದುಕೊಳ್ಳಬೇಕಾಗಿದೆ. ನಮ್ಮ ನಾಡಿನಲ್ಲಿ ಸಾಕ್ಷರತೆಯು ಸಾಕಷ್ಟು ಪ್ರಮಾಣದಲ್ಲಿರದಿದ್ದರೂ, ಸಂಸ್ಕೃತಿಯು ಜೀವದಿಂದಿರುವದಕ್ಕೆ ಈ ವಿಷಯವನ್ನು ನಾವು ತಿಳಿದುಕೊಂಡಿರುವದರಿಂದಲೇ ಎಂಬ ಮಾತು ನಿಜವಾದುದು. ಆದರೆ ಸಂಸ್ಕೃತಿಯು ಜೀವದಿಂದಿರುವದು ಎಂದ ಮಾತ್ರಕ್ಕೆ ಅದು ಜೀವಂತವಾಗಿರುವದು, ಜಾಜ್ವಲ್ಯವಾಗಿರುವದು, ಚೇತನಯುಕ್ತ ಇರುವದು ಎಂದು ಮಾತ್ರ ಯಾರೂ ಅರ್ಥಮಾಡಿಕೊಳ್ಳಬಾರದು. ನಮ್ಮ ಜೀವನಕ್ಕೆ ಆವಶ್ಯಕವಾಗಿರುವ ಆಹಾರಪದಾರ್ಥಗಳನ್ನು ಒದಗಿಸಿಕೊಳ್ಳಲಿಕ್ಕೆ, ನಮ್ಮ ಶರೀರಸಂರಕ್ಷಣೆಗೆ ಅನಿವಾರ್ಯವಾದ ಬಟ್ಟೆಬರೆಗಳನ್ನು ಹುಟ್ಟಿಸಿಕೊಳ್ಳಲಿಕ್ಕೆ, ನಮ್ಮ ಕುಟುಂಬವನ್ನು ಕಾಪಾಡಿಕೊಳ್ಳಲು ಅಗತ್ಯವಾಗಿರುವ

ವಸತಿಗಳನ್ನು ಕಟ್ಟಿಸಿಕೊಳ್ಳಲಿಕ್ಕೆ, ನಮ್ಮ ಚಟುವಟಿಕೆಯನ್ನು ಇಟ್ಟುಕೊಂಡು ಜೀವನೋಪಾಯವನ್ನು ಅನುಸರಿಸಿಕೊಳ್ಳಲು ನಾವು ಮಾಡುತ್ತಿರುವ ಕಾಯಕಕ್ಕೆ, ನಮ್ಮ ಬೌದ್ಧಿಕ ಜಾಗೃತಿಯನ್ನು ಇಟ್ಟುಕೊಂಡು ಆತ್ಮವೈಶಿಷ್ಟ್ಯ ವನ್ನು ಉಳಿಸಿಕೊಳ್ಳಲು ನಾವು ಅನುಭವಿಸುತ್ತಿರುವ ಮನರಂಜನೆಯು ಇಲ್ಲವೆ ಮೋಕ್ಷಸಾಧನೆಯ ಕಾರ್ಯಕ್ರಮಗಳಿಗೆ ನಾವು ಎರಡನೆಯವರ ಮೇಲೆ ಅವಲಂಬಿಸಬೇಕಾದರೆ, ಹೆರವರ ಮುಂದೆ ಕೈಚಾಚಬೇಕಾದರೆ, ವಿದೇಶೀಯರ ಎದುರಿನಲ್ಲಿ ನಿಲ್ಲಬೇಕಾದರೆ ನಮ್ಮ ಸಂಸ್ಕೃತಿಯ ಮಟ್ಟವು ಎಲ್ಲಿಗೆ ಬಂದಿರು ವದು ಎಂಬುದರ ಕಲ್ಪನೆಯು ನಮಗುಂಟಾಗುವದು. ನೂರಾರು ವರ್ಷಗಳ ದಾಸ್ಯದ ಚಟವು ನಮ್ಮ ಎಲ್ಲ ಸತ್ವವನ್ನು ಹೀರಿಬಿಟ್ಟಿದೆ; ನಮ್ಮ ಚಲನವಲನ ವನ್ನು ಕೂಡ ನಿಯಂತ್ರಿಸಿದೆ. ನಾವು ತತ್ಪರಿಣಾಮವಾಗಿ ಬುದ್ಧಿಯ ಉಪ ಯೋಗದ ಮಾತು ದೂರ ಇರಲಿ, ಕೈಕಾಲುಗಳಂತಹ ಅವಯವಗಳನ್ನು ಸಹಿತ ಉಪಯೋಗಿಸುವದನ್ನು ಮರೆಯುತ್ತಲಿದ್ದೇವೆ. ಅಂತೆಯೆ ಹಳ್ಳಿ ಪಟ್ಟಣಗಳಲ್ಲಿ ಒಬ್ಬ ವ್ಯಕ್ತಿಗೆ ಸಹಜಸಾಧ್ಯವಾದ ಒಂದು ಕೆಲಸಕ್ಕೆ ಈಗ ನಾವು ಅನೇಕ ಜನರ ಸಹಾಯವನ್ನು ಕೋರುತ್ತೇವೆ. ಹೆಚ್ಚು ಶಕ್ತಿಯ, ಅತ್ಯಂತ ಮಿತವ್ಯಯದ ಮತ್ತು ಉಚ್ಚ ಉತ್ಪಾದನೆಯ ಸಾಧನಗಳ ಎದುರಿ ನಲ್ಲಿ ನಮ್ಮ ಪ್ರಾಥಮಿಕ ಪ್ರಯೋಗಗಳ ಫಲಗಳು ನಿಲ್ಲಲಾರವು ಎಂಬ ಮಾತನ್ನು ಎಲ್ಲರೂ ಒಪ್ಪುತ್ತಿದ್ದರೂ, ಅವಶ್ಯ ಬೀಳಬಹುದಾದ ಸ್ಥಳಗಳಲ್ಲಿ ಕೂಡ ನಾವು ಈಗ ನಮ್ಮವೇ ಆದ ಸಲಕರಣೆಗಳನ್ನು ಉಪಕರಣಗಳನ್ನು ವಿನಿಯೋಗಿಸಬೇಕು ಎಂಬ ಮಾತನ್ನು ನೆನಪು ಮಾಡಿಕೊಳ್ಳಬೇಕಾಗಿದೆ.

ಈ ವಿಚಾರವು ನಮ್ಮ ನಾಡಿನ ಕೈಗಾರಿಕೆಗಳು, ಉದ್ಯೋಗಗಳು, ವಿದ್ಯಾಭ್ಯಾಸ, ಸಾಹಿತ್ಯ, ಸಂಗೀತ, ಸಂಘಟನಾಕೌಶಲ ಮುಂತಾದವುಗಳಲ್ಲಿ ಸ್ಫುಟವಾಗಿ ಕಂಗೊಳಿಸುವದು. ಹೀಗೆ ಜೀವನದ ನಮ್ಮ ವಿವಿಧ ರಂಗಗಳಲ್ಲಿ ಭಾರತೀಯ ವೈಶಿಷ್ಟ್ಯವು ಮಾಯವಾಗುತ್ತ, ಇಂದಿನ ಭಾರತೀಯ ಸಂಸ್ಕೃತಿ ಯೆಂದರೆ ಯಾವುದು ಎಂಬ ಪ್ರಶ್ನೆಯನ್ನು ಕೇಳುವಂತಾಗುತ್ತದೆ. ಹಳ್ಳಿ ಗಳೊಳಗಿನ ಸಹಾಯಕವರ್ಗವು ಈಗ ಪೋಷಿತ ವರ್ಗವಾದರೂ ಆಗಿದೆ; ಶೋಷಿತವರ್ಗವಾದರೂ ಆಗಿದೆ. ಅದು ತನ್ನ ಮಾರ್ಗವನ್ನು ತಾನು ಕಂಡು ಕೊಂಡು ಸ್ವಯಂಪ್ರಕಾಶದ ವರ್ಗವಾಗಿ ಉಳಿದಿರುವದೇ ಇಲ್ಲ. ನಮ್ಮ ಉಪ

ವ್ಯವಸಾಯಗಳೆಲ್ಲ ಹೆಚ್ಚಾಗಿ ಕಣ್ಮರೆಯಾದುದು ಇಲ್ಲವೆ ನಿಃಸತ್ವವಾಗುತ್ತಿರುವದು ಹೆಚ್ಚಾಗಿ ಪರಕೀಯರ ಕಡಿಮೆ ಬೆಲೆಯ ಮತ್ತು ವಿಶೇಷ ಆಕರ್ಷಣೆಯ ವಸ್ತುಗಳ ಸ್ಪರ್ಧೆಯಿಂದಿರದೆ ಕೇವಲ ನಮ್ಮ ಆಲಸ್ಯದಿಂದ; ನಮ್ಮ ಮೋಹಾಂಧ ಪ್ರವೃತ್ತಿಯಿಂದ; ನಾವು ನಮ್ಮ ವೈಶಿಷ್ಟ್ಯವನ್ನು ಕಾಯ್ದುಕೊಳ್ಳಬೇಕೆಂಬ ಎಚ್ಚರಿಕೆ ನಮಗೆ ಇಲ್ಲದಿರುವದರಿಂದ ಎಂದು ಧಾರಾಳವಾಗಿ ಹೇಳಬಹುದು.

ಇದೆಲ್ಲ ವಿಷಯವನ್ನು ಇಲ್ಲಿ ಪ್ರಸ್ತಾಪಿಸುವ ಉದ್ದೇಶವೆಂದರೆ ಕೇವಲ ಲಿಖಿತ ವಸ್ತುಗಳ ಅಪರಿಚಯದಿಂದಷ್ಟೆ ನಾವು ನಮ್ಮ ನಿರಕ್ಷರತೆಯನ್ನು ಬೆಳೆಯಿಸಿಕೊಂಡಿರುವೆವಲ್ಲದೆ, ಸಮಾಜದೊಳಗಿನ ಮಿಕ್ಕ ಎಲ್ಲ ಕಾರ್ಯ ಕಲಾಪಗಳಲ್ಲಿಯೂ ಪರಾವಲಂಬನ ಪ್ರವೃತ್ತಿಯನ್ನು ಅನುಸರಿಸುರವದರಿಂದಲೂ ನಾವು ನಮ್ಮ ಅಜ್ಞಾನವನ್ನು ಗಳಿಸಿಕೊಂಡಿದ್ದೇವೆ ಎಂಬ ಮಾತನ್ನು ವಿಶದಗೊಳಿಸುವದು. ಜ್ಞಾನವನ್ನು ಪಡೆಯುವದು ವಾಚನ-ಶ್ರವಣಗಳಿಂದ ಮಾತ್ರವಲ್ಲದೆ ನಿಜವಾಗಿ ಉಪಯುಕ್ತವಾದುದು, ಮತ್ತು ಕೊನೆಬಾಳುವಂತಹ ಜ್ಞಾನವು ನಮ್ಮ ಉದ್ಯೋಗದಿಂದ ದೊರೆಯುವದು ಎಂದು ಸಾಮಾನ್ಯವಾಗಿ ಹೇಳಬಹುದು. ಮೊದಲು ಎರಡನೆಯವರು ಮಾಡುತ್ತಿರುವ ಕಾರ್ಯವನ್ನು ನೋಡಿಕೊಂಡು ಕಲಿಯುವದು; ಆ ಮೇಲೆ ಪರರಿಂದ ಹೇಳಿಸಿಕೊಂಡು ತಿಳಿದುಕೊಳ್ಳುವದು; ಅನಂತರ ತಾನೇ ಓದಿಕೊಂಡು ಅದರ ಪರಿಚಯವನ್ನು ಮಾಡಿಕೊಳ್ಳುವದು; ಆದರ ಹಿಂದೆ ಮಾಡಿದ ಪ್ರಯೋಗದಿಂದ ಕಲಿತುದನ್ನು ಮುಂದೆ ಜೀವನದಲ್ಲಿ ತಾನು ಪಡೆಯುವ ಅನುಭವದಿಂದ ಆದರಲ್ಲಿ ಹೊಂದಿಕೆಯನ್ನು ಮಾಡಿಕೊಂಡು ಅದನ್ನು ಪುಟಗೊಳಿಸುವದು ಮತ್ತು ಕೊನೆಯದಾಗಿ ತನ್ನ ವೈಶಿಷ್ಟ್ಯವನ್ನು–ವ್ಯಕ್ತಿತ್ವವನ್ನು ಆ ವಿಷಯದ ಮೇಲೆ ಮೂಡಿಸಿ ಅದನ್ನು ಮುಂದಿನ ಜನಾಂಗದ ಪರೀಕ್ಷೆ, ಪ್ರಯೋಜನ, ಪರಿವರ್ತನೆಗಳಿಗಾಗಿ ಬಿಟ್ಟುಕೊಡುವದು–ಹೀಗೆ ಜ್ಞಾನಾರ್ಜನೆ ಮತ್ತು ಜ್ಞಾನದಾನದ ದಾರಿಯಿರುವದು ಎಂದು ಸಾಧಾರಣವಾಗಿ ಹೇಳಬಹುದು. ಆದರೆ ಇತ್ತ ಕಳೆದ ಅನೇಕ ದಶಕಗಳಿಂದ ಸ್ವಯಂಪ್ರಯೋಗ, ಸ್ವಾವಲಂಬನ ಮತ್ತು ಸ್ವಯಂಪ್ರಕಾಶದ ಪದ್ಧತಿ–ರೂಢಿಗಳನ್ನೆ ನಾವು ಕಳೆದುಕೊಂಡಿದ್ದೇವೆ. ಅಂತೆಯೆ ಕೇವಲ ಅನುಕರಣದಲ್ಲಿ–ಜ್ಞಾನವರ್ಧನದ ಮೊದಲನೆಯ ಮೆಟ್ಟಲಿನಲ್ಲಿ ಮಾತ್ರ ಕೊಳೆಯುತ್ತಿದ್ದೇವೆ.

ಈ ಬಗೆಯಾಗಿ ಬೆಳೆದ ನಮ್ಮ ಪ್ರವೃತ್ತಿಯಲ್ಲಿ ಹಿಂದೆ ಬಿದ್ದ ಅನೇಕ ವಿಚಾರಗಳಲ್ಲಿ ಭಾಷೆಯು ಎಲ್ಲಕ್ಕಿಂತ ಹಿರಿಯದಾಗಿದೆ; ಅಂತೆಯೆ ಅದನ್ನು ನಾವು ಎಲ್ಲಕ್ಕಿಂತ ಹೆಚ್ಚು ಕೆಳಗೆ ಮೆಟ್ಟಿರುವೆವೊ ಏನೊ! ತೀರ ಒಳನಾಡಿನಲ್ಲಿರುವ ಹಳ್ಳಿಗಳ ಭಾಗದಲ್ಲಿ ಮತ್ತು ಪ್ರತಿಯೊಂದು ಮನೆಯ ಕೇವಲ ಅಡುಗೆಯ ಮನೆಯಲ್ಲಿ ಮಾತ್ರ ಇಂದು ನಮ್ಮ, ನಮ್ಮದು ಎನಿಸುವ–ಭಾಷೆಯು ಉಳಿದಿದ್ದು, ಮಿಕ್ಕ ಎಲ್ಲ ಕ್ಷೇತ್ರಗಳಿಂದಲೂ ಅದರ ಉಚ್ಚಾಟನೆಯಾದಂತಾಗಿದೆ. ಮಾತುಗಳಿಗೆ ಮಾತ್ರ ಆಗಿದ್ದರೂ ಭಾಷೆಯ ಉಪಯೋಗ ಇಷ್ಟು ಸಂಕುಚಿತವಾಗಿದ್ದಾಗ, ವಿದ್ಯೆಯನ್ನು ಕಲಿಯುವದು, ಶಿಕ್ಷಣವನ್ನು ಬೆಳೆಸಿಕೊಳ್ಳುವದು, ಜ್ಞಾನವನ್ನು ಹೆಚ್ಚಿಸಿಕೊಳ್ಳುವದು, ಸಾಂಸ್ಕೃತಿಕ ಮಟ್ಟವನ್ನು ಏರಿಸಿಕೊಳ್ಳುವದು ಇಂತಹ ದೊಡ್ಡ ದೊಡ್ಡ ಶಬ್ದಗಳ ಕೆಲಸವು ಸಾಧ್ಯವಾಗುವದೆಂತು? ಆಡುವ ಮಾತುಗಳಲ್ಲಿ ನಮ್ಮ ನುಡಿಯ ಬಳಕೆಯು ಕಡಿಮೆಯಾಗಿ, ನಾವು ನಮ್ಮ ಜನರನ್ನೆ ತಿಳಿದುಕೊಳ್ಳುವದು, ನಮ್ಮ ನಾಡನ್ನೆ ಅರಿತುಕೊಳ್ಳುವದು, ನಮ್ಮ ನಡೆಯನ್ನೆ ತಿದ್ದಿಕೊಳ್ಳುವದು ಇಂತಹ ಸಾಮಾನ್ಯವಾದ ಕೆಲಸವು ಆಗದಂತೆಯೆ, ಓದುಬರೆಯುವ ರೂಢಿಯನ್ನು ಕಳೆದುಕೊಂಡ ನಾವು ತಿಳಿದುದನ್ನು ಬೆಳೆಸಿಕೊಳ್ಳಲಿಕ್ಕಾಗಲಿ, ದೊರೆತುದನ್ನು ಗಟ್ಟಿಮಾಡಿಕೊಳ್ಳಲಿಕ್ಕಾಗಲಿ ತೀರ ಅಸಮರ್ಥರಾಗಿದ್ದೇವೆ. ಅಂತೆಯೆ ಮರೆತ ಈ ಸೌಕರ್ಯವನ್ನು, ಕಳೆದುಕೊಂಡ ಈ ಸಾಧನವನ್ನು ನಾವು ಹೇಗೆ ತಿರುಗಿ ಪಡೆಯಬಹುದು, ಮತ್ತೆ ಅಣಿಮಾಡಿಕೊಳ್ಳಬಹುದು ಎಂಬುದನ್ನು ನೋಡುವದು ಈಗ ಸೂಕ್ತವೆನಿಸಬಹುದು.

ಇಂದಿನ ನಮ್ಮ ಪರಿಸ್ಥಿತಿಯಲ್ಲಿ, ಈಗ ಭಾರತಕ್ಕೆ ಪ್ರಾಪ್ತವಾದ ನವೀನವಾದ ಒಂದು ಹೊಣೆಯ ಸ್ಥಾನಕ್ಕೆ ತಕ್ಕಂತೆ ನಾವು ನಮ್ಮ ದೇಶದಲ್ಲಿ ಜ್ಞಾನ ಪ್ರಸಾರ ಮಾಡುವದು ಅತ್ಯಗತ್ಯವಾಗಿದೆ. ಕೇವಲ ನಮ್ಮ ಅರ್ಹತೆಯನ್ನು ಹೆಚ್ಚುಮಾಡಿಕೊಳ್ಳಲಿಕ್ಕೆ ಅಷ್ಟೆ ಅಲ್ಲದೆ, ಬರಿಯೆ ನಾವು ಹೆಚ್ಚು ಸಂಪನ್ನರಾಗಬೇಕು ಎಂಬ ಏಕೈಕಸ್ವಾರ್ಥಪರಾಯಣತೆಯಿಂದ ಅಷ್ಟೆ ಅಲ್ಲದೆ, ಇಂದು ನಮ್ಮ ಸಾಂಸ್ಕೃತಿಕ ಮಟ್ಟವನ್ನು ಏರಿಸಿಕೊಳ್ಳುವದು ಇಡಿಯ ಪ್ರಪಂಚದ ಕಲ್ಯಾಣಕ್ಕಾಗಿಯೆ ಇದೆ ಎಂಬುದನ್ನು ನಾವು ಮನಗಾಣಬೇಕು. ಈ ರೀತಿಯ ಜ್ಞಾನಸಾಧನೆಯ ಕಾರ್ಯದಲ್ಲಿ ಗ್ರಂಥಾಲಯವು ಯಾವ ಬಗೆಯಾಗಿ

ಸಹಾಯವನ್ನು ಸಲ್ಲಿಸಬಹುದು, ಸಹಕಾರವನ್ನು ನೀಡಬಹುದು ಎಂಬುದನ್ನು ಇನ್ನೂ ನೋಡಿಕೊಳ್ಳಬಹುದು.

ಗ್ರಂಥಾಲಯಗಳು ಜ್ಞಾನಮಂದಿರಗಳಷ್ಟೆ! ಅಲ್ಲಿ ನಮಗೆ ಗೋಚರವಾಗುವದು ಒಂದು ಕಟ್ಟಡ—ಕೆಲವು ಕಡೆ ಅದೂ ಇಲ್ಲದಿರಬಹುದು; ಕೆಲವು ಕುರ್ಚಿ–ಮೇಜು–ಕಪಾಟುಗಳು ಮತ್ತು ಹಲವು ಪುಸ್ತಕಗಳನ್ನಿಟ್ಟುಕೊಂಡು ಕುಳಿತ ಒಬ್ಬ ವ್ಯಕ್ತಿ–ಇಷ್ಟು ಮಾತ್ರ ಇವುಗಳಿಂದ ಜ್ಞಾನದಾನವಾಗಬೇಕೆಂದರೆ ಅದು ಹೇಗೆ ಸಾಧ್ಯ! ಕೇವಲ ಮೂರಕ್ಷರಗಳನ್ನು ಕಲಿಯಲಿಕ್ಕೆ ಎಷ್ಟೋ ದಿನ ಮುಂಜಾನೆ–ಸಂಜೆ ಶಾಲೆಯಲ್ಲಿ ಶಿಕ್ಷಕರ ಪರಿಶ್ರಮಪೂರ್ಣ ಪ್ರಯತ್ನ ಮತ್ತು ವಿದ್ಯಾರ್ಥಿಯ ಸತತೋದ್ಯಮ ಸಾಲದಂದ್ದಾಗ್ಗೆ ಇಂತಹ "ಸ್ವಾತಂತ್ರ್ಯಪೂರ್ಣ" ವಾತಾವರಣದಲ್ಲಿ, ಗ್ರಂಥಾಲಯದಲ್ಲಿರುವಂತಹ "ಅಪೌರುಷೇಯ" ಪರಿಸ್ಥಿತಿಯಲ್ಲಿ ಜ್ಞಾನವನ್ನು ಪಡೆಯುವದು ಹೇಗೆ ಎಂದು ಒಬ್ಬರು ಕೇಳಬಹುದು. ಇನ್ನೊಬ್ಬರು ಇದ್ದ ಕೆಲಸವನ್ನು ಬಿಟ್ಟು ಇಲ್ಲದ ಈ ಓದಿನ ತಲೆನೋವನ್ನು ಕಟ್ಟಿಕೊಂಡು ಗೋಳಾಡಲಿಕ್ಕೆ ಬಿಡುವು ಯಾರಿಗಿದೆ ಎಂದು ಪ್ರಶ್ನಿಸಬಹುದು. ಅತ್ತ ಮತ್ತೊಬ್ಬರು ಕೈಕೊಂಡ ಉದ್ಯಮದಿಂದ ಸಾಕಷ್ಟು ಬುದ್ಧಿಯ ಓಟ ಮತ್ತು ಸಾಮರ್ಥ್ಯದ ಹೋರಾಟ ನಡೆಯುತ್ತಿದ್ದಾಗ್ಗೆ ಜೀವಂತವಾಗಿರುವ ಆ ಜ್ಞಾನಭಂಡಾರವನ್ನು ಬಿಟ್ಟು ನಿರ್ಜೀವ ಪುಸ್ತಕಗಳಿಂದ ತುಂಬಿದ, ಅರೆಜೀವದಿಂದಿರುವಂತೆ ಕಾಣುವ ಭಂಡಾರಿಗನಿಂದ ನಡೆಯಿಸಲಾದ ಆ ಗ್ರಂಥಭಂಡಾರದಿಂದ ನಮಗೇನು ಪ್ರಯೋಜನ ಎಂದು ಮೂದಲಿಸಬಹುದು. ಇಂತಹ ಬಗೆಬಗೆಯ ಆಕ್ಷೇಪಗಳಿಗೂ ಅಪವಾದಗಳಿಗೂ ಆರೋಪಗಳಿಗೂ ಇಂದಿನ ಗ್ರಂಥಭಂಡಾರಗಳು ಗುರಿಯಾಗಿದ್ದರೂ, ಸರಿಯಾಗಿ ಕಾರ್ಯ ಮಾಡುವ ಇಂತಹ ಸಂಸ್ಥೆಯಲ್ಲಿ ಈ ಬಗೆಯ ಸಕಲಸಮಸ್ಯೆಗಳನ್ನು ಪರಿಹರಿಸುವ ಸಾಮರ್ಥ್ಯವಿರುವದಷ್ಟೆ ಅಲ್ಲದೆ, ಅಂತಹ ಇನ್ನೂ ಎಷ್ಟೋ ಪ್ರಮೇಯಗಳನ್ನು ಬಿಡಿಸಬಹುದಾದಂತಹ ಉಪಾಯಗಳನ್ನು ಸೂಚಿಸುವ ಸಂಜೀವಿನಿಯು ಇದಾಗಿದೆ ಎಂಬುದನ್ನು ನಾವು ತೋರಿಸಿಕೊಡಬಹುದು.

ಮೊದಲನೆಯದಾಗಿ ಶಿಕ್ಷಣದ ಕ್ರಮಕ್ಕೆ ಅನುಗುಣವಾಗಿ ವಿದ್ಯಾರ್ಥಿಗಳಲ್ಲಿ ನಾವು ಎರಡು ಬಗೆಗಳಿರುವದನ್ನು ತಿಳಿದುಕೊಳ್ಳಬಹುದು. ಒಂದನೆಯ ಗುಂಪು–ಅದೇ ಹಿರಿಯ ಗುಂಪು ಮತ್ತು ಅದೇ ಚಿರಂತನವಾದ ಗುಂಪು–ಚಿಕ್ಕ

ವರೆದು; ಇನ್ನೊಂದು ಹಿರಿಯರ ಗುಂಪು-ಅದು ತಾತ್ಪೂರ್ತಿಕವಾದ, ಅಥವಾ ಅಲ್ಪಕಾಲೀನವೆನ್ನಿಸುವ—ಪ್ರೌಢರ ಗುಂಪು, ಇಂದಿನ ಮಿತಿಯಲ್ಲಿ ಇವೆರಡು ಪಂಗಡಗಳಲ್ಲದೆ ಒಮ್ಮೆ ಓದು ಕಲಿತು ಅದನ್ನು ಮರೆತಿರುವ ಇಲ್ಲವೆ ಒಂದು ಘಟ್ಟದ ವರೆಗೆ ವಿದ್ಯೆಯನ್ನು ಪಡೆದು ಮುಂದುವರಿಯಲಿಕ್ಕೆ ದಾರಿಯನ್ನು ಕಾಣದೆ ಇರುವ ಇನ್ನೊಂದು ವರ್ಗ—ಅದು ಚಿಕ್ಕ ಗುಂಪು ಮತ್ತು ಆವರ್ತ ಎನಿಸುವ ಅಥವಾ ಆಗಾಗ್ಗೆ ಹುಟ್ಟುವ ಗುಂಪು-ನವವಿದ್ಯಾರ್ಥಿಗಳ ಗುಂಪು-ಬೇರೆಯಾಗಿ ಇದ್ದರೂ ಆ ವಿಷಯವಾಗಿ ನಾವು ಮುಂದೆ ಯೋಚನೆಮಾಡ ಬಹುದಾಗಿದೆ.

ಸದ್ಯದ ಮಟ್ಟಿಗೆ ಕೆಲವು ರೀತಿಯಲ್ಲಿ ಮೊದಲಿನ ಎರಡೂ ಗುಂಪುಗಳಿಗೆ ಸಮಾನವಾದ ಸಮಸ್ಯೆಗಳೆ ಹೆಚ್ಚಾಗಿರುವದರಿಂದ ಮೊದಲು ಅವುಗಳನ್ನು ಕುರಿತು ವಿಚಾರ ಮಾಡಬಹುದು. ಹೊಚ್ಚ ಹೊಸದಾಗಿ ವಿದ್ಯೆಯನ್ನು ಕಲಿಯು ವವರು ಒಂದು ಶಾಲೆಯನ್ನು ಸಾಮಾನ್ಯವಾಗಿ ಸೇರುತ್ತಾರಷ್ಟೆ! ಅಲ್ಲಿ ದೊರೆ ಯುವ ಶಿಕ್ಷಣವನ್ನು ಅವರು ಒಂದು ವ್ಯವಸ್ಥಿತ ಗ್ರಂಥಭಂಡಾರದ ಮುಖಾಂತರ ಹೆಚ್ಚು ಪರಿಣಾಮಕಾರಕ ಮಾಡಿಕೊಳ್ಳಬಹುದು. ಅದು ಶಾಲೆಯ ಗ್ರಂಥ ಭಂಡಾರವೆ ಇರಲಿ, ಸಮಾಜದ ಗ್ರಂಥಸಂಗ್ರಹವೆ ಆಗಿರಲಿ ಇಲ್ಲವೆ ಸಾರ್ವ ಜನಿಕ ಗ್ರಂಥಭಂಡಾರವೆ ಆಗಿರಲಿ ಅಂತಹ ಸಂಸ್ಥೆಯಲ್ಲಿ ಜ್ಞಾನಾರ್ಜನೆಯಲ್ಲಿ ನಿರತರಾಗಿರುವ ಮಕ್ಕಳ ಸಲುವಾಗಿಯೆಂದೇ ಅನೇಕ ವಿಶಿಷ್ಟಸಾಧನಗಳಿದ್ದುದು ಅವರಿಗೆ ಗೋಚರವಾಗಬಹುದು. ವಿಷಯವನ್ನು ಹೆಚ್ಚು ಸ್ಫುಟವಾಗಿಯೂ, ಮನಂಬುಗುವಂತೆಯೂ ತಿಳಿಸುವಂತಹ ಆದರೂ ಅನೇಕ ತರಗತಿಗಳಿಗೆ, ವರ್ಗಗಳಿಗೆ ಉಪಯೋಗವಾಗುವಂತಹ ಕೆಲವು ಉಪಕರಣಗಳನ್ನು ಹೆಚ್ಚಿನ ಅನುಕೂಲತೆಯ ದೃಷ್ಟಿಯಿಂದ ಗ್ರಂಥಭಂಡಾರದಲ್ಲಿಯೆ ಇಟ್ಟಿರಬಹುದು. ದೃಷ್ಟಾಂತಕ್ಕಾಗಿ ತರತರದ ಪಕ್ಷಿಗಳನ್ನು ಅವುಗಳ ಚಿತ್ರಗಳ ಮೂಲಕವಾಗಿ ಆಗಲಿ, ಮಾದರೀ ಪಕ್ಷಿಗಳ ಮೂಲಕ ಆಗಲಿ ತಿಳಿಸುವದು ಸಹಜವೂ, ಸರಳವೂ ಎನಿಸಬಹುದು. ಇವುಗಳ ಪುಟಗಳನ್ನು, ಇಂತಹವೇ ಆದ ಭೂಪಟ ಗಳನ್ನು ಮತ್ತು ನಕಾಶ ಪುಸ್ತಕ ( Atlas ) ಗಳನ್ನು ನಾವು ಸಾಮಾನ್ಯವಾಗಿ ಗ್ರಂಥಾಗಾರದಲ್ಲಿಯೆ ಕಾಣಬಹುದು. ಇಲ್ಲಿಗೆ ಬಂದು ವಿದ್ಯಾರ್ಥಿಗಳು ಅವು ಗಳನ್ನು ನೋಡಿಕೊಂಡು ತಮ್ಮ ವರ್ಗದಲ್ಲಿ ಅಧ್ಯಾಪಕರಿಂದ ಕಲಿತ ಪಾಠ ವನ್ನು ಮನನಮಾಡಿಕೊಂಡು ಹೆಚ್ಚು ಗಟ್ಟಿಪಡಿಸಿಕೊಳ್ಳಬಹುದು.

ಗ್ರಂಥಾಲಯಗಳಲ್ಲಿ ಅದೇ ರೀತಿಯಾಗಿ ದೊರೆಯುವ ಇನ್ನೊಂದು ಜ್ಞಾನಸಾಧನವೆಂದರೆ ವೃತ್ತಪತ್ರ ಮತ್ತು ನಿಯತಾಲಿಕೆಗಳದು. ವರ್ಗದಲ್ಲಿ ಎಷ್ಟೆ ಆದ್ಯತನ ವಿಷಯವನ್ನೊಳಗೊಂಡ ವಿಷಯವು ನಡೆದಿರಲಿ, ಅದರ ರೂಪರೇಷೆಯನ್ನು ಹಾಕಿ ಕೆಲವು ತಿಂಗಳಾದರೂ ಆಗಿರುವದರಿಂದ ಮತ್ತು ಎಷ್ಟೆ ಪ್ರಗತಿಶೀಲ ಶಿಕ್ಷಕನಿರಲಿ ಅವನು ಒಂದು ಪಾಠಕ್ರಮಕ್ಕೆ ಅನುಸರಿಸಿ ಕೊಂಡು ಹೋಗುವದಿರುವದರಿಂದ, ದೈನಂದಿನ ಘಟನೆಗಳ ಸಮಾಚಾರವು ವರ್ಗಗಳಲ್ಲಿ ದೊರೆಯಲಾರದು. ಅಂತೆಯೆ ಚಿಕ್ಕವರಾಗಲಿ, ಪ್ರೌಢರಾಗಲಿ ವಿಶಾಲವಾದ ದೃಷ್ಟಿ ಮತ್ತು ಅಭಿರುಚಿಯುಳ್ಳವರು ಆಧುನಿಕ ಪ್ರಪಂಚದ ಪರಿಚಯವನ್ನು ಮಾಡಿಕೊಳ್ಳಲಿಕ್ಕೆ ಮತ್ತು ಪ್ರಚಲಿತ ವಿಷಯಗಳ ಸಂಪರ್ಕ ವನ್ನು ಇಟ್ಟುಕೊಳ್ಳಲಿಕ್ಕೆ ಗ್ರಂಥಭಂಡಾರದೊಳಗಿನ ವೃತ್ತಪತ್ರಗಳತ್ತ ನಡೆ ಯುತ್ತಾರೆ. ಅಲ್ಲಿ ಕೇವಲ ದಿನದಿನದ ಪತ್ರಿಕೆಗಳು ಮಾತ್ರ ದೊರೆಯುವವಲ್ಲದೆ, ಹಿಂದಿನ ಸಂಚಿಕೆಗಳ ಸಂಪುಟಗಳೂ, ಪತ್ರಿಕಾ—ಲೇಖನ—ಸಾರಗಳ ಪಟ್ಟಿ ಗಳೂ, ಕೆಲವು ವಿಶಿಷ್ಟ ವಿಷಯಗಳ ಮೇಲೆ ತೆಗೆದಿಟ್ಟ ಲೇಖನಗಳ—ಸಮಾ ಚಾರಭಾಗಗಳ ಸಂಗ್ರಹವೂ ವಿದ್ಯಾರ್ಥಿಗಳಿಗೆ ದೊರೆಯುವದರಿಂದ, ಕಲಿತ ವಿಷಯಗಳನ್ನು ನಿತ್ಯನೂತನ ಮಾಡಿಕೊಳ್ಳಲಿಕ್ಕೂ, ಇರುವ ಜ್ಞಾನವನ್ನು ಖಚಿತವಾಗಿಸಿಕೊಳ್ಳಲಿಕ್ಕೂ ಸಹಾಯವಾಗುತ್ತದೆ.

ಇವರ ಮುಂದಿನ ಹೆಜ್ಜೆಯೆಂದರೆ ಇಂತಹ ಸಮಾಚಾರವು ಸಂಕಲನವಾಗಿ ಪ್ರಕಟವಾದ ಆಧಾರಗ್ರಂಥಗಳ ವಿಷಯ. ಈ ವರ್ಗದಲ್ಲಿ ಶಬ್ದಕೋಶಗಳು ಜ್ಞಾನಕೋಶಗಳು, ಕೈಪಿಡಿಗಳು, ವಾರ್ಷಿಕೆಗಳು ಬರುತ್ತವೆ. ಇವು ಸಾಮಾನ್ಯ ವಾಗಿ ಎಲ್ಲ ತರಗತಿಯ ವಿದ್ಯಾರ್ಥಿಗಳಿಗೂ ಅಷ್ಟೆ ಅಗತ್ಯವಾಗುವದರಿಂದಲೂ, ಇವುಗಳ ಬೆಲೆಗಳು ಹೆಚ್ಚಾಗಿರುವದರಿಂದಲೂ ಇವುಗಳ ಪ್ರತಿಗಳು ಕೇವಲ ಗ್ರಂಥಭಂಡಾರಗಳಲ್ಲಿಯೆ ಕೇಂದ್ರಿಕೃತವಾಗಿರುವವು. ಇಲ್ಲಿ ಕೇವಲ ಇಂತಹ ಪುಸ್ತಕಗಳ ಒಂದೊಂದು ಪ್ರತಿಯನ್ನು ತೆಗೆದುಕೊಂಡು ಸುಮ್ಮನಿರುವರು ಎಂದಲ್ಲ; ಹೊಸಹೊಸ ಆವೃತ್ತಿಗಳು, ಮುದ್ರಣಗಳು ಮಾರಲಿಕ್ಕೆ ದೊರೆವಂತೆ ಅವುಗಳನ್ನು ಭಂಡಾರವು ಪಡೆದಿರುತ್ತದೆ. ಅಂತೆಯೆ ಡಾ. ಭಾರದ್ವಾಜರ ಶಬ್ದಕೋಶದಂತಹ ಗ್ರಂಥವನ್ನಾಗಲಿ, ಶ್ರೀ ಕಾರಂತರ ಬಾಲಪ್ರಪಂಚದಂತಹ ಜ್ಞಾನಕೋಶವನ್ನಾಗಲಿ ಓದಲಿಕ್ಕೆ ಸಾಧಾರಣವಾಗಿ ಎಲ್ಲ ವಿದ್ಯಾರ್ಥಿಗಳು

ಗ್ರಂಥಭಂಡಾರದತ್ತ ಹೋಗಬೇಕಾಗುತ್ತದೆ. ಇವುಗಳ ವ್ಯಾಪಕದೃಷ್ಟಿ, ಚಿತ್ರಮೂಲಕ ವಿಶದವಾಗಿ ತಿಳಿಸುವ ಪದ್ಧತಿ ಮತ್ತು ಇವುಗಳಲ್ಲಿ ಅಧಿಕೃತ ವಾಗಿ ದೊರೆಯುವ ಸಾಹಿತ್ಯ ಇವುಗಳಿಂದ ಖಂಡಿತವಾಗಿಯೂ ವಿದ್ಯಾರ್ಥಿಯ ಜ್ಞಾನವು ಕುದುರುವುದು, ಬೆಳೆಯುವದು ಮತ್ತು ಪ್ರೇರಣೆಯನ್ನು ಪಡೆಯು ವದು. ಇದೇ ತರಗತಿಯಲ್ಲಿ ಚಿತ್ರಪುಸ್ತಕಗಳು, ಹಸ್ತಪ್ರತಿಗಳು, ಮುಂತಾದ ಸಾಮಗ್ರಿಗಳು ಕೂಡ ಸಮಾವೇಶ ಹೊಂದುತ್ತವೆ. ಇವುಗಳನ್ನು ಒದಗಿಸಿ ಗ್ರಂಥಭಂಡಾರವು ಶಾಲೆಯು ಕೈಕೊಂಡ ಕಾರ್ಯವನ್ನು ಪೂರ್ತಿಗೊಳಿಸು ವದು; ಭಂಡಾರಿಗನು ಅಧ್ಯಾಪನ ಕೆಲಸವನ್ನು ಮುಂದುವರಿಸುವದು; ವಿದ್ಯಾರ್ಥಿಯು ಸಮಾಜದ ಪರಂಪರೆಯನ್ನು ಪ್ರಗತಿಯತ್ತ ಸಾಗಿಸಲಿಕ್ಕೆ ಸಮರ್ಥನಾಗುವನು.

ಒಳಗಿನ ವಸ್ತುಗಳಿಂದ ಈ ರೀತಿಯಾಗಿ ಗ್ರಂಥಭಂಡಾರವು ಪೂರಕ ಕಾರ್ಯವನ್ನು ಮಾಡುತ್ತಿದ್ದರೆ ಹೊರಗಿನಿಂದ ಕೆಲವು ವಿಶಿಷ್ಟ ಸಹಾಯವನ್ನು ಪಡೆದು ಹೊಸ ವಿದ್ಯಾರ್ಥಿಗಳಿಗೆ ಅವರ ಜ್ಞಾನಸಾಧನೆಯ ಪ್ರಯತ್ನದಲ್ಲಿ ಲಾಭವೂ ಹೆಚ್ಚು ಉತ್ಸಾಹವೂ ಹುಟ್ಟುವಂತೆ ಮಾಡಬಹುದು. ಈ ಬಗೆಯ ಕಾರ್ಯಕ್ರಮಗಳು ಶಾಲೆ—ವಿದ್ಯಾಲಯಗಳಲ್ಲಿ ಕೂಡ ತಮ್ಮ ಶಾಲೇತರ ಚಟುವಟಿಕೆಗಳೆಂದು ಏರ್ಪಡಬಹುದಾದರೂ, ಜ್ಞಾನಪ್ರಪಂಚದಲ್ಲಿ ಗ್ರಂಥ ಭಂಡಾರವು ಪಡೆದಿರುವ ಕೇಂದ್ರ ಮತ್ತು ವಿಶಿಷ್ಟ ಸ್ಥಾನದ ಮೂಲಕ, ಇಲ್ಲಿ ಇಂತಹ ಕಾರ್ಯವು ಹೆಚ್ಚು ಸುಗಮವಾಗಿಯೂ ಯಶಸ್ವಿಯಾಗಿಯೂ ನಡೆ ಯುತ್ತಿದೆ. ಅಷ್ಟೆ ಅಲ್ಲದೆ ಶಾಲೆಯಲ್ಲಿ ಅಥವಾ ಕಾಲೇಜುಗಳಲ್ಲಿ ಓದುತ್ತಿದ್ದ ಚಿಕ್ಕವರಿಗೆ ಮಾತ್ರ ಹೆಚ್ಚಾಗಿ ಆ ಸಂಸ್ಥೆಗಳೊಳಗೆ ಏರ್ಪಡಿಸಬಹುದಾದ ಶಾಲೇತರ ಪಾಠಕ್ರಮದ ವಿಷಯವು ಲಭಿಸುತ್ತಿದ್ದರೆ, ಗ್ರಂಥಾಲಯದಲ್ಲಿ ವಿದ್ಯಾರ್ಥಿಗಳಂತೆ ಜ್ಞಾನಾರ್ಜನೆಯ ಬಗ್ಗೆ ಉತ್ಸುಕರಾದ ಮಿಕ್ಕ ಎಲ್ಲ ನಾಗರಿ ಕರಿಗೂ ಅವರಲ್ಲಿ ಪಾಲುಗಾರಿಕೆಯನ್ನು ಪಡೆಯಲಿಕ್ಕೆ ಸಾಧ್ಯವಿರುವದು.

ಚಿಕ್ಕವರಿಗೆ ಕತೆಗಳೆಂದರೆ ವಿಶೇಷವಾದ ಒಂದು ಆಕರ್ಷಣೆಯಷ್ಟೆ, ಹೊಸದಾಗಿ ಎಂತಹ ಬಿರುಸಾದ ವಿಷಯಗಳನ್ನಾಗಲಿ, ಜಟಿಲವಾದ ಸಮಸ್ಯೆ ಯನ್ನಾಗಲಿ ಕತೆಯ ರೂಪದಲ್ಲಿ ಹೇಳಿ ಅದನ್ನು ಸಹಜಗ್ರಾಹ್ಯ ಮಾಡ ಬಹುದು. ಆದರಂತೆಯೆ ಆ ವಿಷಯದಲ್ಲಿ ಹೆಚ್ಚಿನ ಆಸಕ್ತಿಯಿಂದ ದುಡಿದವರು

ಮತ್ತು ಪರಿಣತಿಯನ್ನು ಪಡೆದವರು ಈ ಯುಕ್ತಿಯನ್ನು ಬಲ್ಲವರಾಗಿದ್ದಾಗ, ವಿದ್ಯಾರ್ಥಿಗಳಿಗೆ ತಮ್ಮ ವಿಚಾರವನ್ನು ಕತೆಯ ಮುಖಾಂತರವಾಗಿ ತಿಳಿಸಿದರೆ ಅದು ಕೂಡಲೆ ಕೇಳುಗರ ಮನಂಬುಗುವದು. ಊರಲ್ಲಿ ಇರುವ ಒಬ್ಬ ಸಾಹಿತಿಯೆ ಆಗಲಿ, ಊರಿಗೆ ಬಂದ ಇನ್ನೊಬ್ಬ ವಿಜ್ಞಾನಿಯೆ ಆಗಲಿ ಒಂದು ವಿಶೇಷ ಉತ್ಸವದಲ್ಲಿ ಆಮಂತ್ರಿತರಾಗಿ ಗ್ರಂಥಾಲಯದಲ್ಲಿ ಬಂದು ತಮ್ಮ ಕಾರ್ಯ ಇಲ್ಲವೆ ತಮ್ಮ ಕಾಣಿಕೆಯ ಬಗೆಯಲ್ಲಿ ಜಿಜ್ಞಾಸುಗಳಿಗೆ ಹೇಳಬಹುದು. ಇಂತಹ ಕಾರ್ಯಕ್ರಮಗಳನ್ನು ಗ್ರಂಥಭಂಡಾರಗಳಲ್ಲಿ ಏರ್ಪಡಿಸಿ ಭಂಡಾರಿಗರು ಜ್ಞಾನದಾನದ ಮಾರ್ಗದಲ್ಲಿ ಎರಡು ರೀತಿಯಿಂದ ಪ್ರಯೋಜನವನ್ನು ಪಡೆಯ ಬಹುದು. ಮೊದಲನೆಯದಾಗಿ, ಶಾಲೆಯಲ್ಲಿ ಕೇಳಿ ತಿಳಿದುಕೊಂಡ ವಿಷಯಗಳ ಮುಂದಿನ ಭಾಗವೆಂದಾಗಲಿ, ಹೆಚ್ಚಿನ ಸಂಗತಿಯೆಂದಾಗಲಿ ಆ ವಿಚಾರದಲ್ಲಿ ಕೃಷಿಯನ್ನು ಮಾಡಿದ ಶಿಕ್ಷಕೇತರ ವ್ಯಕ್ತಿಗಳಿಂದ ಜ್ಞಾನವನ್ನು ಪಡೆದಂತಾಗು ವದು; ಇನ್ನೊಂದು ರೀತಿಯಲ್ಲಿ, ಅಂತಹ ಯಾವುದೊಂದು ಭಾಷಣ ಇಲ್ಲವೆ ವ್ಯಾಖ್ಯಾನ ಇಲ್ಲವೆ ಕಥನದ ಕಾರ್ಯಕ್ರಮವನ್ನು ಏರ್ಪಡಿಸುವ ಮೊದಲು ಮತ್ತು ಏರ್ಪಡಿಸಿದ ನಂತರ ಕೆಲವು ದಿನ ಗ್ರಂಥಭಂಡಾರದಲ್ಲಿ ಆ ವಿಷಯದ ಮೇಲೆ ಬರೆಯಲಾಗಿದ್ದ, ಮಿಕ್ಕ ಎಷ್ಟೋ ಪುಸ್ತಕಗಳನ್ನು, ಪತ್ರಿಕೆಗಳನ್ನು, ಚಿತ್ರಗಳನ್ನು ಮತ್ತು ಸಮಾಚಾರವನ್ನು ಭಂಡಾರಿಗನು ಒಂದೆಡೆ ಸೇರಿಸಿ ಅದರದೊಂದು ಚಿಕ್ಕ ಪ್ರದರ್ಶನವನ್ನಾದರೂ ಏರ್ಪಡಿಸಬಹುದು; ಇಲ್ಲವೆ ಪಟ್ಟಿಯೊಂದನ್ನು ಮಾಡಿ ಸೂಚನೆಯ ಹಲಗೆಯ ಮೇಲೆ ಹಚ್ಚಿ, ಬೇಡಿದವರಿಗೆ ಅವು ದೊರೆಯುವಂತೆ ವ್ಯವಸ್ಥೆಯನ್ನಾದರೂ ಮಾಡಬಹುದು. ಇಂತಹ ಒಂದು ಮುಂಜಾಗ್ರತೆಯ ಕೆಲಸದಿಂದ ವಿಶೇಷ ಕಾರ್ಯಕ್ರಮದಲ್ಲಿ ತಿಳಿದು ಕೊಳ್ಳಬಹುದಾದ ಸಂಗತಿಯ ಬಗ್ಗೆ ವಿದ್ಯಾರ್ಥಿಗಳು ಮೊದಲೆ ಕೆಲವು ಅಂಶ ಗಳನ್ನು ಅವಗತ ಮಾಡಿಕೊಂಡಿರುವದರಿಂದ, ಅಂದಿನ ಉತ್ಸವದ ಸಮಯದಲ್ಲಿ ಹೆಚ್ಚು ಆಳದ ವಿಚಾರಗಳನ್ನು, ಚರ್ಚಾಸ್ಪದವಾದ ಭಾಗದ ಬಗೆಯಲ್ಲಿ ಸ್ಪಷ್ಟೀಕರಣವನ್ನು ಪಡೆಯಲಿಕ್ಕೆ ಸಹಾಯಕವಾಗುವದು. ಈ ರೀತಿಯಾಗಿ ಜ್ಞಾನದಾನದ ಎರಡು ಘಟಕಗಳು, ಗ್ರಂಥಭಂಡಾರ ಮತ್ತು ಪರಿಣತರು, ಇಂತಹದೊಂದು ಹಬ್ಬವನ್ನು ಆಚರಿಸುವದರಿಂದ ದ್ವಿಗುಣಕ್ಕಿಂತ ಹೆಚ್ಚು ಉಪಯೋಗವು ಜಿಜ್ಞಾಸುಗಳಿಗೆ ಆಗುವದು ಸ್ವಾಭಾವಿಕವಾಗಿದೆ.

ಇಂತಹವೇ ಆದ ಪ್ರಾತ್ಯಕ್ಷಿಕೆಗಳಿಂದ ಪಾಠಗಳನ್ನು ಮನದಟ್ಟು ಮಾಡಿಕೊಡುವ ಸಾಧನಗಳು ಮತ್ತು ಯೋಜನೆಗಳು ಇನ್ನೂ ಕೆಲವು ಇರುತ್ತವೆ. ಅವುಗಳಲ್ಲಿ ಪ್ರಾಮುಖ್ಯವಾಗಿ ಮಾಯಾದೀಪ, ವೃತ್ತ-ಚಿತ್ರಪಟ, ಗ್ರಾಮೋಫೋನು, ಪ್ರದರ್ಶನಗಳು, ಆಕಾಶವಾಣಿ, ಟಿಲಿವಿಜನ್ ಮುಂತಾದವುಗಳನ್ನು ಇಲ್ಲಿ ಸೂಚಿಸಬಹುದು. ಇಂದಿನ ನಮ್ಮ ರಾಷ್ಟ್ರದ ಪರಿಸ್ಥಿತಿಯಲ್ಲಿ ಇಂತಹ ಹಣದ ಮತ್ತು ಹೆಚ್ಚಿನ ವೈಜ್ಞಾನಿಕ ಮಟ್ಟದ ಸಲಕರಣೆಗಳು ಸಿಗುವ ಸಂಭವ ಎಲ್ಲಿದೆ ಎಂದು ಯಾರಾದರೂ ಕೇಳಬಹುದು. ಆದರೆ ಇದು ಹಣದ ಸಂಬಂಧದ ಪ್ರಶ್ನೆಯಾಗಿದ್ದು ಅದನ್ನು ಸಂಯೋಜಕರಾಗಲಿ, ಆಡಳಿತಕ್ಕೆ ಹೊಣೆಗಾರರಾದ ಜನರಾಗಲಿ ಯೋಚಿಸಬೇಕು. ರಾಷ್ಟ್ರದಲ್ಲಿ ಸಾಕ್ಷರತೆಯಷ್ಟೆ ಅಲ್ಲದೆ ಸುಶಿಕ್ಷಿತತೆಯು ಸಾರ್ವತ್ರಿಕವಾಗಿ ಹಬ್ಬಬೇಕೆಂಬ ಹಂಬಲವುಳ್ಳ ನಾವು ಹಣವನ್ನು ಪಡೆಯುವ ಮಾರ್ಗವನ್ನು ಹುಡುಕಲಿಕ್ಕೆಬೇಕು. ಅದಲ್ಲದೆ ಈ ಕೆಲಸಕ್ಕೆ ಒಂದು ಪಾಲು ಹಣ ಬೇಕಾಗಿದ್ದರೆ ಅದರ ನಾಲ್ಕು ಪಟ್ಟು ಹುರುಪು ಆವಶ್ಯಕ ಇರುತ್ತದೆ. ಒಂದು ಪ್ರಸಂಗದಲ್ಲಿ ನಗರಸಭೆಯ ಅಧಿಕಾರಿಗಳಾಗಲಿ, ಶಿಕ್ಷಣಸಂಸ್ಥೆಯ ಆಡಳಿತಗಾರರಾಗಲಿ ಇವೆಲ್ಲ ಸಲಕರಣೆಗಳನ್ನು ಅಣಿಮಾಡಿಕೊಡುವೆವು ಎಂಬ ಆಶ್ವಾಸನವನ್ನು ಕೊಟ್ಟರೂ ಕೂಡ ಅದರ ಪ್ರಯೋಜನವನ್ನು ನಾಗರಿಕರಿಗೆ, ವಿದ್ಯಾರ್ಥಿಗಳಿಗೆ, ಜಿಜ್ಞಾಸುಗಳಿಗೆ ಮಾಡಿಕೊಡುವ ಹೊಣೆಯನ್ನು ವಹಿಸಿಕೊಳ್ಳಲಿಕ್ಕೆ ತಕ್ಕ ಗ್ರಂಥಭಂಡಾರವಾಗಲಿ, ಅಧಿಕಾರಿಗಳ ಮನೋಭಾವವಾಗಲಿ ಇರದೆ ಹೋಗಬಹುದು. ಅಂತೆಯೆ ಗ್ರಂಥಭಂಡಾರದಲ್ಲಿ ಯಾವ ಬಗೆಯ ವಾತಾವರಣವು ಅಗತ್ಯ ಎಂಬುದನ್ನು ನಾವು ಮೊದಲು ನಿಶ್ಚಿತಗೊಳಿಸಿಕೊಂಡು, ಮಿಕ್ಕ ಸಲಕರಣೆಗಳ ಸಹಾಯದಿಂದ ಒಂದು ಕಡೆಯಿಂದ ಶಾಲೆ-ವಿದ್ಯಾಲಯಗಳ ಕೆಲಸವನ್ನು ಮುಂದುವರಿಸುವದು, ಇನ್ನೊಂದು ಕಡೆಯಿಂದ ಗ್ರಂಥಭಂಡಾರದ ಅಸ್ತಿತ್ವವನ್ನು ಸಾರ್ಥಕಗೊಳಿಸುವದು ಹೀಗೆ ದ್ವಿಮುಖವಾದ ಕಾರ್ಯವನ್ನು ಹೇಗೆ ಸಾಧಿಸಬಹುದು ಎಂಬುದನ್ನು ಈಗ ನೋಡುತ್ತಿದ್ದೇವೆ.

ನಮ್ಮ ದೇಶದಲ್ಲಿ ಅಲ್ಪಪ್ರಮಾಣದ ಸಾಕ್ಷರತೆಯು ಇರುತ್ತದೆಯೇನೋ ನಿಜ. ಆದರೆ ಆ ಸಂಖ್ಯೆಯಲ್ಲಿಯೂ ಹೆಚ್ಚಾಗಿ ಸಾಹಿತ್ಯ—ಅಂದರೆ ಕೇವಲ ಮನರಂಜನೆಯ ಸಾಹಿತ್ಯ, ವೇದಾಂತ—ಅದೂ ಸಾಮಾನ್ಯವಾಗಿ ಪ್ರಾಥಮಿಕ

ಘಟ್ಟದ ವರೆಗೆ ಮಾತ್ರ, ಚರಿತ್ರೆ—ಅದರಲ್ಲಿ ನಾವು, ನಮ್ಮವರು, ನಮ್ಮ ಸುತ್ತಮುತ್ತಲಿನವರು ಇವರನ್ನು ಬಿಟ್ಟು ವಿದೇಶೀಯರ, ಆಳುವ ಜನಾಂಗದ ಇಲ್ಲವೆ ಬೇರೆ ಅಸಂಬದ್ಧ ಜನರ ಚರಿತ್ರೆ ಹಾಗೂ ರಾಜಕೀಯ—ರಾಜಕೀಯ ದಲ್ಲಿಯೂ ಜಾತೀಯ ವೈಲಕ್ಷಣ್ಯಗಳು, ಆತ್ಮೀಯ ಕುಂದುಕೊರತೆಗಳು, ವೈಯಕ್ತಿಕ ಅವಗುಣಗಳು-ಇಂತಹ ವಿಷಯಗಳ ಬಗೆಯಲ್ಲಿಯ ಆಸಕ್ತಿಯು ಹೆಚ್ಚಾಗಿದ್ದು ವಿವಿಧ ಕಲೆಗಳು, ಪ್ರಪಂಚದ ಅನೇಕ ಭಾಷೆಗಳು, ಉಚ್ಚ ವರ್ಗದ ವಿಜ್ಞಾನಗಳು, ಸ್ಥಾಪತ್ಯ — ರೇಖಾಶಾಸ್ತ್ರ— ಗಣಿತಗಳು, ಅರ್ಥ ಶಾಸ್ತ್ರ—ಸಮಾಜಶಾಸ್ತ್ರ—ಸಂಖ್ಯಾಶಾಸ್ತ್ರಗಳಂತಹ ಸಾಮಾಜಿಕ ಶಾಸ್ತ್ರಗಳು, ಪ್ರಾಣಿಜೀವನ, ಸಸ್ಯಕುಟುಂಬ, ಭೂಗತವಸ್ತುಗಳು ಈ ಬಗೆಯ ಎಷ್ಟೋ ವಿಷಯಗಳ ಬಗೆಯಲ್ಲಿ ಇನ್ನೂ ನಮ್ಮ ಆಸ್ಥೆಯು ಕುಸಿರಬೇಕಾಗಿದೆ; ಉತ್ಸಾಹ ಬೆಳೆಯಬೇಕಾಗಿದೆ; ಬೇಡಿಕೆಯು ಸಾರ್ವತ್ರಿಕವಾಗಬೇಕಾಗಿದೆ. ಈ ಪ್ರಚಾರದ, ಈ ವಿತರಣೆಯ ಮತ್ತು ಈ ಪ್ರೇರಕ ಕಾರ್ಯಗಳಲ್ಲಿ ಗ್ರಂಥ ಭಂಡಾರವು ಅತಿಮಹತ್ವದ ಹೊಣೆಯನ್ನು ಹೊರಬಹುದು.

ಉದಾಹರಣೆಗಾಗಿ ಪ್ರಾಣಿಜೀನವದಂತಹ ಸೂಕ್ಷ್ಮ ವಿಷಯಗಳನ್ನೊಳ ಗೊಂಡ, ಆಧುನಿಕ ಪ್ರಯೋಗಗಳಿಂದ ಹೊಸ ಬೆಳಕನ್ನು ದಿನಂಪ್ರತಿ ಪಡೆ ಯುತ್ತಿರುವ ಶಾಸ್ತ್ರವನ್ನೇ ತೆಗೆದುಕೊಳ್ಳಬಹುದು. ಶಾಲೆ ಮತ್ತು ವಿದ್ಯಾಲಯ ಗಳಲ್ಲಿ, ಮಹಾವಿದ್ಯಾಲಯ ಮತ್ತು ವಿಶ್ವವಿದ್ಯಾಲಯಗಳಲ್ಲಿ ದಕ್ಷತೆ ಯಿಂದಲೂ, ಪರಿಪೂರ್ಣ ಎನಿಸುವಂತೆಯೂ ಆ ಬಗೆಯಲ್ಲಿ ಪಾಠಗಳನ್ನು ಸಿದ್ಧಗೊಳಿಸಿ, ವಿದ್ಯಾರ್ಥಿಗಳಿಗೆ ಹೇಳುತ್ತಿರುವರು. ಅವರಲ್ಲಿ—ಆ ಅಧ್ಯಾಪಕರಲ್ಲಿ ವಿಶಿಷ್ಟವಾದ ಒಂದು ಸಂಶೋಧನೆಯನ್ನು ಯಾರಾದರೊಬ್ಬರು ಮಾಡಿರ ಬಹುದು. ಅದರ ಲಾಭವು ಕೇವಲ ವಿದ್ಯಾರ್ಥಿಗಳಿಗೆಷ್ಟೆ ಅಲ್ಲ, ಸಾರ್ವಜನಿಕ ರಿಗೂ ಆಗಬೇಕೆಂದು ಮನಸ್ಸು ಮಾಡಿದರೆ, ಅದನ್ನು ವಿಶದವಾಗಿಯೂ, ಸಹಜಭಾಷೆಯಲ್ಲಿಯೂ ತಿಳಿಸುವದಕ್ಕಾಗಿ ಅವರು ಯೋಜಿಸಿದ ಅದರ ಸಂಬಂಧದ ಅನೇಕ ಚಿತ್ರಗಳು, ಪಡಿಯಚ್ಚುಗಳು, ಮುಂತಾದವುಗಳನ್ನು ತಂದು ತೋರಿಸಿದರೆ, ಇಲ್ಲವೆ ಮಾಯಾದೀಪದ ಸಹಾಯದಿಂದ ಅವರೇ ಅದನ್ನು ತಿಳಿಸಿದರೆ ನಾಲ್ಕಾರು ಪಾಠಗಳಲ್ಲಿ ಶಾಲೆ, ವಿದ್ಯಾಲಯಗಳಲ್ಲಿ ಹೇಳ ಬಹುದಾದ ವಿವರಗಳನ್ನು, ಜಟಿಲ ಭಾಗಗಳನ್ನು ಒಂದೇ ಪ್ರಯೋಗದಲ್ಲಿ

ತಿಳಿಸಿಬಿಡಬಹುದು. ಈ ಬಗೆಯ ಕಾರ್ಯಕ್ರಮವನ್ನು ಗ್ರಂಥಭಂಡಾರದಲ್ಲಿ ಏರ್ಪಡಿಸುವದರಿಂದ ಹೆಚ್ಚು ಜನರಿಗೆ ಅನುಕೂಲವಾಗುವದೆಂಬಲ್ಲಿ ಸಂಶಯವಿಲ್ಲ.

ಅದರಂತೆಯೆ ಭಾಷಾಶಾಸ್ತ್ರದಂತಹ ಒಂದು ವಿಷಯವನ್ನು ತಿಳಿಸುವ ಉದಾಹರಣೆಯನ್ನು ನೋಡಬಹುದು. ಒಂದು ಭಾಷೆಯ ಶಬ್ದರಚನೆ, ಶಬ್ದವ್ಯುತ್ಪತ್ತಿ, ಶಬ್ದೋಚ್ಚಾರ ಇವುಗಳನ್ನು ಇನ್ನೊಂದು ಭಾಷೆಯವರು ಕಲಿಯಬೇಕಾದರೆ ಅದಕ್ಕೆ ಎಷ್ಟೋ ಪಾಠಗಳು, ಪಠ್ಯಪುಸ್ತಕಗಳು, ಕ್ರಮಿಕ ಗ್ರಂಥಗಳು ಸಹಾಯಕ ಎನಿಸಬಹುದು. ಆದರೆ ಒಬ್ಬ ಶಿಕ್ಷಕನಿಂದ ಇಲ್ಲವೆ ಆ ಭಾಷೆಯನ್ನು ಬಲ್ಲವನಿಂದ ತಿಳಿದುಕೊಳ್ಳುವಷ್ಟು ಪರಿಣಾಮಕಾರಕವಾಗಿ ಎಷ್ಟು ಪುಸ್ತಕಗಳನ್ನು ಓದಿದರೂ ಕಲಿತುಕೊಳ್ಳುವದು ಶುದ್ಧ ಮತ್ತು ಸಂಪೂರ್ಣ ಆಗುವದಿಲ್ಲ. ಒಂದು ಭಾಷೆಯನ್ನು ಕಲಿಯಬೇಕಾದರೆ ಆ ಭಾಷೆಯ ಜನರ ಸಂಪರ್ಕ, ಅವರ ಸಮಾಜದಲ್ಲಿ ಇದ್ದು ಕಲಿಯುವ ಸಂದರ್ಭ ಹೆಚ್ಚು ಉಪಯುಕ್ತ ಮತ್ತು ಸಹಜವಾದ ಉಪಾಯ. ಒಂದು ವೇಳೆ ಇಂತಹ ಜನರ ಸಹಕಾರ ಇಲ್ಲವೆ ಸಹಾಯ ಪ್ರತ್ಯಕ್ಷವಾಗಿ ಸಿಗುವದು ಸಾಧ್ಯ ವಿಲ್ಲದೆ ಹೋದರೆ ಆ ವಿದ್ಯಾರ್ಥಿಯು ಆ ಭಾಷೆಯ ಬಗ್ಗೆ ಪಡೆದ ಜ್ಞಾನವೆಲ್ಲ ವ್ಯರ್ಥವಾದಂತಾಗುವದು. ಅಂತೆಯೆ ಗ್ರಾಮೋಫೋನ್ ರೆಕಾರ್ಡುಗಳ ಮುಖಾಂತರ ಈ ಕೊರತೆಯನ್ನು ಹೋಗಲಾಡಿಸುವದು ಆಧುನಿಕ ಪದ್ಧತಿ ಯಾಗಿದೆ. ಒಂದು ಕ್ರಮಬದ್ಧ ಪಾಠಮಾಲೆಯನ್ನಾಗಲಿ, ಅಂತಹ ನಿರೂಪಣೆ ಯುಳ್ಳ ಕೆಲವು ಭಾಷಣಗಳನ್ನಾಗಲಿ ಸಿದ್ಧಗೊಳಿಸಿ ಅವುಗಳ ಧ್ವನಿಮುದ್ರಿಕೆ ಗಳನ್ನು ಮಾಡಿಕೊಳ್ಳುವದು; ಈ ಧ್ವನಿಮುದ್ರಿಕೆಗಳ ಸಹಾಯದಿಂದ ಶಬ್ದಗಳ ಉಚ್ಚಾರ, ವಾಕ್ಯಗಳ ರಚನೆಗಳೆ ಮೊದಲಾದ ಭಾಗಗಳನ್ನೊಳಗೊಂಡ ಭಾಷೆಯ ವೈಲಕ್ಷಣ್ಯ ಮತ್ತು ವೈಶಿಷ್ಟ್ಯಗಳನ್ನು ತಿಳಿದುಕೊಳ್ಳುವದು; ತಾವು ಪುಸ್ತಕಗಳ ಮೂಲಕ ತಾತ್ವಿಕ ಜ್ಞಾನವನ್ನು ಮೊದಲು ಪಡೆದುದರಿಂದ ಅನಂತರ ಇಂತಹ ಉಚ್ಚಾರ– ವ್ಯಾಕರಣಗಳ ಸ್ವತಂತ್ರ ಶ್ರವಣದಿಂದ ಆ ಭಾಷೆಯ ಮೇಲೆ ಸಂಪೂರ್ಣ ಪ್ರಭುತ್ವವನ್ನು ಪಡೆಯುವದು—ಇವು ಈಗಿನ ದರ್ಶನ ಮತ್ತು ಶ್ರವಣಗಳಿಂದ ವಿದ್ಯೆಯನ್ನು ಕಲಿಯುವ ಸಾಧನಗಳು. ಈ ದೃಶ್ಯ ಮತ್ತು ಶ್ರಾವ್ಯ ಉಪಕರಣಗಳನ್ನು ಗ್ರಂಥಭಂಡಾರಗಳಲ್ಲೆಲ್ಲ ಸಂಗ್ರಹಿಸಿ ಇಟ್ಟಿರುವದು ಇಂದು ಎಲ್ಲ ಕಡೆಯಲ್ಲಿ ಸಾಮಾನ್ಯವಾಗಿರುವದು.

ಇಲ್ಲಿಯವರೆಗೆ ಚಿಕ್ಕವರು ಮತ್ತು ಪ್ರೌಢರು ಇವರಿಗೆ ಸಮಾನವಾದ ಕೆಲವು ಪ್ರಶ್ನೆಗಳನ್ನು ಯೋಚಿಸಲಾಯಿತು. ಈಗ ವಯಸ್ಕರು ಪಡೆಯುತ್ತಿರುವ ಅಕ್ಷರಜ್ಞಾನದಲ್ಲಿ ಮತ್ತು ಅವರ ಆ ಪ್ರಯತ್ನದಲ್ಲಿ ಗ್ರಂಥಭಂಡಾರವು ಹೇಗೆ ಸಹಾಯಕವಾಗಬಹುದು; ಅವರು ಎದುರಿಸುವ ವಿಶಿಷ್ಟ ಸಮಸ್ಯೆಗಳನ್ನು ಗ್ರಂಥಾಲಯವು ಹೇಗೆ ಪರಿಹರಿಸುವದು ಎಂಬುದನ್ನು ತುಸು ನೋಡಬಹುದು. ಪ್ರೌಢರಿಗೆ ಕೇವಲ ಅಕ್ಷರಜ್ಞಾನದ ಅಗತ್ಯವಿಷ್ಟೆ ಇರುವದಲ್ಲದೆ ಅವರಿಗೆ ಪ್ರಪಂಚಜ್ಞಾನವನ್ನು ಬಿಡಿಸಿ, ತಿಳಿಸಿ, ತೋರಿಸಿ, ಕೊಡುವ ಅಗತ್ಯವು ಅಷ್ಟಿರುವದಿಲ್ಲ. ಅಂತೆಯೆ ಅವರ ವಿಷಯವಾಗಿ ನಾಗರಿಕರನ್ನೆಲ್ಲ ಸುವಿದ್ಯರನ್ನಾಗಿ ಮಾಡಬೇಕೆಂಬ ಆಸೆಯುಳ್ಳ ಪ್ರತಿಯೊಬ್ಬ ಕಾರ್ಯಕರ್ತೃವಿಗೆ ಕೆಲವು ವಿಚಿತ್ರವಾದ ಪ್ರಮೇಯಗಳನ್ನು ಅರಿಯಬೇಕಾಗುವದು. ಸಾಮಾನ್ಯವಾಗಿ ದೈನಂದಿನ ಜೀವನದ ಘಟನೆಗಳ ಬಗ್ಗೆ ಪ್ರೌಢರಿಗೆ ಸಾಕಷ್ಟು ಪರಿಚಯವಿದ್ದರೂ ಅವರಿಗೆ ಆ ಬಗೆಯಾಗಿ ಸಾಕಷ್ಟು ಸ್ಪಷ್ಟ ಕಲ್ಪನೆಯಾಗಲಿ, ಸಂಪೂರ್ಣವಾದ ಸಮಾಚಾರವಾಗಲಿ ತಿಳಿದಿರುವದಿಲ್ಲ. ಅಂತೆಯೆ ವಿಶಿಷ್ಟ ಸಾಧನ ಮತ್ತು ಕಾರ್ಯಕ್ರಮಗಳ ಮೂಲಕವಾಗಿ ಪ್ರೌಢರು ಒಮ್ಮೆ ಅಕ್ಷರವನ್ನು ಕಲಿತುಕೊಂಡರೆಂದರೆ ಅವರ ಶಿಕ್ಷಣವನ್ನು ಮುಂದುವರಿಸಬೇಕಾಗುತ್ತದೆ. ಇಂದಿನ ಸಮಾಜದಲ್ಲಿ ಪ್ರತಿಯೊಂದು ವಿಷಯವು ಅತಿವೇಗದಿಂದ ಮುಂದುವರಿಯುತ್ತಿರುತ್ತದೆ. ಪ್ರತಿಯೊಂದು ಕ್ಷಣದಲ್ಲಿ ಅದು ಪರಿವರ್ತನೆಯನ್ನು ಹೊಂದುತ್ತಿರುತ್ತದೆ. ಅಂತೆಯೆ ಪ್ರಪಂಚದಲ್ಲಿ ಅವರಿಗೆ ಸಂಬಂಧಿಸಿದ ವಿಷಯಗಳ ಪರಿಚಯವನ್ನು ಅವರಿಗೆ ಮಾಡಿಕೊಡುವದಷ್ಟೆ ಅಲ್ಲದೆ ಕ್ರಮವಾಗಿ ಅವರು ತಮ್ಮ ಮೇಲೆಯೆ ತಾವು ಅವಲಂಬಿಸಿಕೊಳ್ಳುವ ಸಾಮರ್ಥ್ಯವನ್ನು ಪಡೆಯುವಂತೆ ಅವರಿಗೆ ಜ್ಞಾನಾರ್ಜನೆಯ ಮಾರ್ಗವನ್ನು ತೋರಿಸಿಕೊಡಬೇಕಾಗುತ್ತದೆ. ಅಂದರೆ ಅಲ್ಪಾವಧಿಯಲ್ಲಿಯೆ ಪ್ರತಿಯೊಬ್ಬ ಸಾಕ್ಷರ ವ್ಯಕ್ತಿಯು ಸ್ವಯಂಶಿಕ್ಷಕನಾಗುವಂತೆ ಅವನಿಗೆ ಸಹಾಯ–ಸಹಕಾರಗಳನ್ನು ನೀಡಬೇಕಾಗುತ್ತದೆ. ಸ್ವಾವಲಂಬನ, ಸ್ವಪ್ರಯತ್ನ, ಸ್ವಪ್ರಯೋಗಗಳಂತೆಯೆ ಸ್ವಯಂಶಿಕ್ಷಕನಾಗುವದೇ ಪ್ರತಿಯೊಬ್ಬ ವ್ಯಕ್ತಿಗೆ ಉತ್ತಮವಾದ ಮತ್ತು ಫಲದಾಯಕವಾದ ಆದರ್ಶ. ಮನರಂಜನೆಯ ಮೂಲಕ ಸಾಮಾನ್ಯ ಜ್ಞಾನವನ್ನು ಪಡೆದು, ಸಾಮಾನ್ಯಜ್ಞಾನದ ಮುಖಾಂತರ ಆತ್ಮಜ್ಞಾನವನ್ನು

ಮಾಡಿಕೊಳ್ಳುವದೇ ಪ್ರತಿಯೊಬ್ಬ ನಾಗರಿಕನ ಗುರಿಯಾಗಬೇಕಾಗಿದೆ. ರಾಷ್ಟ್ರದಲ್ಲಿ ಎಲ್ಲ ಪ್ರಜೆಗಳು ಸುಶಿಕ್ಷಿತ, ಸುಸಂಸ್ಕೃತ ಮತ್ತು ಸ್ವಸಂತುಷ್ಟ ನಾಗರಿಕರಾಗುವದೇ ಈಗಿನ ನಮ್ಮ ಉದ್ದೇಶವಾಗಿರುವದರಿಂದ, ಎಲ್ಲ ಸಾಕ್ಷರ ಪ್ರಜೆಗಳಿಗೆ ಆ ರಾಜಮಾರ್ಗವನ್ನು ತೋರಿಸುವದು ಇಂದು ಗ್ರಂಥಾಲಯದ ಮೂಲಕ ಸಾಧಿಸಬಹುದಾದ ಒಂದು ಕಾರ್ಯವಾಗಿದೆ.

ಗ್ರಂಥಾಲಯವು ಕೇವಲ ಪುಸ್ತಕಗಳನ್ನು ಕೊಡುವ ಒಂದು ಸ್ಥಳ ವೇನೊ ನಿಜ. ಆದರೆ ಆ ಪುಸ್ತಕಗಳನ್ನು, ಅಕ್ಷರಜ್ಞಾನವಾದ ಕೂಡಲೆ ಪ್ರತಿಯೊಬ್ಬ ಪ್ರೌಢನು ಓದಲಿಕ್ಕೆ ಸಮರ್ಥನಾಗುವನು ಇಲ್ಲವೆ ಮನಸ್ಸುಳ್ಳವ ನಾಗುವನು ಎಂದು ಹೇಳಬಹುದೆ? ಒಂದು ಕಡೆಯಲ್ಲಿ ಅವನಿಗೆ ಅಂತಹ ಗ್ರಂಥಗಳನ್ನು ಓದುವಷ್ಟು ಅವನ ಸಾಹಿತ್ಯಜ್ಞಾನ ಬೆಳೆದಿರುವದಿಲ್ಲ; ಇನ್ನೊಂದು ಕಡೆಯಿಂದ ಸಾವಕಾಶವಾಗಿ ಅದನ್ನು ಓದುತ್ತ ವಿಷಯಗ್ರಹಣ ಮಾಡು ವಷ್ಟು ಅವನಿಗೆ ತಾಳ್ಮೆಯಾಗಲಿ ಸಮಯವಾಗಲಿ ಇರುವದಿಲ್ಲ. ಅಂತೆಯೆ ಆ ಪುಸ್ತಕಗಳನ್ನು ಓದಲಿಕ್ಕೆ ಸವಿ ಹತ್ತುವಂತೆ ಮತ್ತು ಅವುಗಳಲ್ಲಿ ಆತನಿಗೆ ಆಕರ್ಷಣೆ ಹುಟ್ಟುವಂತೆ ಮಾಡುವದೇ ಗ್ರಂಥಭಂಡಾರದ ಮುಖ್ಯ ಕಾರ್ಯ ವೆನಿಸುತ್ತದೆ. ಈ ತೊಡಕನ್ನು ಬಿಡಿಸುವದಕ್ಕಾಗಿ ಅನೇಕ ಬಗೆಯ ಕಾರ್ಯ ಕ್ರಮಗಳನ್ನು ಗ್ರಂಥಾಲಯವು ಯೋಜಿಸಬಹುದು.

ಮೊದಲನೆಯದಾಗಿ ಸ್ವದೇಶ ಇಲ್ಲವೆ ಸ್ವಸ್ಥಳದ ಬಗೆಯಲ್ಲಿ ಹೆಚ್ಚಿನ ಮಾಹಿತಿಯನ್ನು ತನ್ನ ವಾಚಕವೃಂದಕ್ಕೆ ಮಾಡಿಕೊಡುವದು ಗ್ರಂಥಾಲಯದ ಉದ್ದೇಶವಾಗಿರುವದು ಎಂದು ತಿಳಿದುಕೊಳ್ಳೋಣ. ಆ ಸಂಬಂಧದಲ್ಲಿ ಜಿಲ್ಹೆಯ ಗ್ಯಾಜಿಟಿಯರ, ಇಲ್ಲವೆ ಪ್ರಾದೇಶಿಕ ಭೂಗೋಲ, ಅಥವಾ ಬೇರೆ ಕೈಪಿಡಿ ಮುಂತಾದ ಅನೇಕ ಪುಸ್ತಕಗಳು ತನ್ನ ಗ್ರಂಥಸಂಗ್ರಹದಲ್ಲಿರಬಹುದು. ಆದರೆ ವಾಚಕರಿಗೆ ಅದರಲ್ಲಿಯೂ ಪ್ರೌಢವಾಚಕರಿಗೆ ಅವುಗಳತ್ತ ಮನಸ್ಸು ಹರಿಯುವದಿಲ್ಲ. ಆ ಸಮಯದಲ್ಲಿ ಗ್ರಂಥಭಂಡಾರವು ಆ ದೇಶದ ಅಪ್ರತಿಮ ವಾದ ಪ್ರೇಕ್ಷಣೀಯ ಸ್ಥಳಗಳ ಚಿತ್ರಗಳನ್ನು, ಅನುಪಮವಾದ ಶಿಲ್ಪದ ಮಾದರಿ ಗಳನ್ನು, ಅದ್ಭುತವೆನಿಸಬಹುದಾದ ಪ್ರಾಣಿ—ಪಶು—ಪಕ್ಷಿಗಳ ಚಿತ್ರಪಟ ಗಳನ್ನು, ಸುಂದರವಾದ ಕೆರೆ—ಕಾಲುವೆ—ಹೊಳೆಗಳ ಮಾದರಿಯ ಕೃತಿ ಗಳನ್ನು (Models) ಇವೇ ಮುಂತಾದ ಸಾಮುಗ್ರಿಗಳನ್ನು ತಂದು ಒಂದು

ಚೆಂದವಾದ ಮತ್ತು ಚೊಕ್ಕಟವಾದ ಪ್ರದರ್ಶನವನ್ನು ಏರ್ಪಡಿಸಿ, ಊರೊಳಗಿನ ಪ್ರೌಢ ಸಾಕ್ಷರರನ್ನು ಅವುಗಳನ್ನು ನೋಡುವದಕ್ಕಾಗಿ ಆಮಂತ್ರಿಸಿದರೆ ಆ ಬಗೆಯ ಪ್ರತ್ಯಕ್ಷ ಶಿಕ್ಷಣದಿಂದ ಅಪೂರ್ವವಾದ ಉತ್ಸಾಹ, ಸಂತೋಷಗಳು ಪ್ರೇಕ್ಷಕರಲ್ಲಿ ಹುಟ್ಟುವದು ಸ್ವಾಭಾವಿಕ. ಆಗ ಕ್ರಮವಾಗಿ ಅವರು ತಮ್ಮ ಪ್ರದೇಶದೊಳಗಿನ ಮುಖ್ಯ ಬೆಳೆಗಳಾವುವು, ಅಲ್ಲಿ ದೊರೆಯುವ ವಿಶಿಷ್ಟ ಖನಿಜ ಗಳೆಂತಹವು-ತಮ್ಮ ಭಾಗದಲ್ಲಿ ಹೆಸರು ಗಳಿಸಿದ ಪ್ರಶಾಂತ ಮತ್ತು ರಮಣೀಯ ಸ್ಥಳಗಳೆಲ್ಲಿವೆ ಮುಂತಾದ ಸಂಗತಿಗಳ ಬಗ್ಗೆ ಕುತೂಹಲವನ್ನು ತಳೆದು, ಪ್ರಶ್ನೆಗಳ ಮೂಲಕ, ಹೆಚ್ಚು ವಿವರಣೆಯ ರೂಪವಾಗಿ ಇಲ್ಲವೆ ವಿಶೇಷ ಸ್ಪಷ್ಟೀ ಕರಣಕ್ಕಾಗಿ ತಮ್ಮ ಕೌತುಕವನ್ನು ವ್ಯಕ್ತಗೊಳಿಸುವರು ಅಂತಹ ಉಪಾಯ ದಿಂದ ಗ್ರಂಥಭಂಡಾರವು ಸಾವಕಾಶವಾಗಿ ಅವರಿಗೆ ಕೆಲವು ಪ್ರಶ್ನೆಗಳ ಮೌಖಿಕ ಉತ್ತರಗಳಿಂದಾಗಲಿ, ಹೆಚ್ಚಿನ ವಿವರಗಳಿಗಾಗಿ ಬೇರೆ ಪುಸ್ತಕಗಳನ್ನು ನೋಡ ಬಹುದು ಎಂಬ ಸೂಚನೆಯಿಂದಾಗಲಿ ಅವರನ್ನು ಒಂದು ದಾರಿಗೆ ಹಚ್ಚ ಬಹುದು. ಅದೇ ದಾರಿ ಗ್ರಂಥಾಲಯದೊಳಗಿರುವ ಇಲ್ಲವೆ ಗ್ರಂಥಾಲಯದ ಮೂಲಕ ಆ ವಿಷಯವನ್ನು ತಿಳಿದುಕೊಳ್ಳಬಹುದಾದ ಆಧಾರಗ್ರಂಥಗಳೊಳ ಗಿರುವ ಸಮಾಚಾರದತ್ತ ಓದುಗರನ್ನು ಕಳಿಸಬೇಕೆಂಬುದು.

ಇನ್ನು ಒಂದು ಸ್ಥಳದಲ್ಲಿ, ಊರ ಯಾವುದೇ ಒಂದು ಭಾಗದಲ್ಲಿ ತಾಲೂಕಿನ ಅಥವಾ ಜಿಲ್ಲೆಯ ಯಾವುದೊ ಒಂದು ಊರಲ್ಲಿ ಇಂತಹ ಗ್ರಂಥಾಲಯವು ಇರುವದೆಂದು ವಾಚಕರಿಗೆ ತಿಳಿದಿದ್ದರೂ ಅದರ ಲಾಭವನ್ನು ಪಡೆಯಲಿಕ್ಕೆ ಸಂಚಾರದ ಅನಾನುಕೂಲತೆಗಾಗಿ ಆಗಲಿ, ಆರ್ಥಿಕ ಅಡಚಣೆಯ ಮೂಲಕ ಆಗಲಿ ಸಾಧ್ಯವಾಗಲಿಕ್ಕಿಲ್ಲ. ಪುಸ್ತಕಗಳನ್ನು ಪಡೆದು ಓದಲಿಕ್ಕೆ ಮತ್ತು ತಮ್ಮ ಜ್ಞಾನ ಮತ್ತು ಅನುಭವವನ್ನು ಹೆಚ್ಚಿಸಿಕೊಳ್ಳಲಿಕ್ಕೆ ಎಷ್ಟೇ ಆತುರರಾಗಿದ್ದರೂ ಅನೇಕರಿಗೆ ಗ್ರಂಥಾಲಯದ ಸೌಕರ್ಯಗಳನ್ನು ಪಡೆಯ ಲಿಕ್ಕೆ ಶಕ್ಯವಾಗಲಿಕ್ಕಿಲ್ಲ. ಅಂತಹ ಸಂದರ್ಭಗಳಲ್ಲಿ ಗ್ರಂಥಾಲಯವು ತನ್ನದೆ ಆದ ಒಂದು ಮೋಟರು ಅಥವಾ ಬೇರೆ ವಾಹನವನ್ನಿಟ್ಟುಕೊಂಡು ಊರಲ್ಲಿ ಯಾಗಲಿ, ಆ ವಿಭಾಗದಲ್ಲಿಯಾಗಲಿ ಕೆಲವು ಶಾಖೆಗಳನ್ನು ನಡೆಯಿಸಬಹುದು. ಈ ಶಾಖೆಗಳನ್ನು ಕೂಡ ಮೂರು–ನಾಲ್ಕು ವಿಧವಾಗಿ ಯೋಜಿಸಿಕೊಳ್ಳ ಬಹುದು. ಕೆಲವು ದಿನಗಳನ್ನು ಗೊತ್ತುಪಡಿಸಿ ಆಗ್ಗೆ ಒಂದೊಂದು ಭಾಗದಲ್ಲಿ

ಹೋಗಿ ಪುಸ್ತಕಗಳನ್ನು ಹಂಚಿಬರುವದು ಮತ್ತು ತಿರುಗಿ ಪಡೆಯುವದು ಹೀಗಾದರೂ ಮಾಡಬಹುದು; ಇಲ್ಲವೆ ಕೆಲವು ಸ್ಥಳಗಳನ್ನು ಗೊತ್ತುಪಡಿಸಿ ಅಲ್ಲಿಂದ ಪುಸ್ತಕಗಳು ಓದಲಿಕ್ಕೆ ದೊರೆಯುವಂತೆ ವ್ಯವಸ್ಥೆಯನ್ನಾದರೂ ಮಾಡಬಹುದು; ಇಲ್ಲವೆ ಈ ಬಗೆಯ ತಾತ್ಪೂರ್ತಿಕ ಏರ್ಪಾಡು ಸಮರ್ಪಕ ಎನಿಸದಿದ್ದರೆ ಒಂದು ಸಂಪೂರ್ಣ ಸೌಕರ್ಯದ ಉಪಗ್ರಂಥಾಲಯವನ್ನೆ ಅಲ್ಲಿ ಸ್ಥಾಪಿಸಬಹುದು. ಈ ರೀತಿಯಾಗಿ ಪ್ರತಿಯೊಬ್ಬ ಓದುಗನು ಪುಸ್ತಕಗಳು ಇದ್ದಲ್ಲಿಯೇ ಬರಬೇಕು—ಅದು ಎಷ್ಟೆ ದೂರದಲ್ಲಿ ಇರಲಿ—ಅಲ್ಲಿಂದಲೇ ಪುಸ್ತಕಗಳನ್ನು ಪಡೆಯಬೇಕು ಎಂಬ ನಿಗ್ರಹ—ಆತಂಕಗಳಿರದೆ, ಓದುಗರಿದ್ದಲ್ಲಿಯೆ ಓದುವ ಸಾಧನಗಳು ದೊರೆಯುವಂತೆ ಪ್ರಯತ್ನವನ್ನು ಮಾಡಬೇಕಾಗುವದು. ಆದರಲ್ಲಿಯೂ ವಾಹನಸೌಕರ್ಯಗಳು ಕಡಿಮೆ ಮತ್ತು ಅಪ್ರಬುದ್ಧ ಇದ್ದ ನಮ್ಮ ದೇಶದಲ್ಲಿ ಮತ್ತು ಜ್ಞಾನಪ್ರಸಾರವನ್ನು ಭರದಿಂದ ಸಾಗಿಸಬೇಕಾದ ಇಂದಿನ ಪರಿಸ್ಥಿತಿಯಲ್ಲಿ ಇಂತಹ ಪ್ರಯೋಗಗಳನ್ನು ಗ್ರಂಥಭಂಡಾರಗಳ ಮುಖಾಂತರವಾಗಿಯೆ ಕೈಕೊಳ್ಳುವದು ಅಗತ್ಯವಾಗಿದೆ.

ಇದೇ ಸಂಬಂಧದಲ್ಲಿ ಪ್ರಚಾರ ವ್ಯಾಖ್ಯಾನ ಮಾಲೆಯಂತಹ ಇನ್ನೊಂದು ಯೋಜನೆಯನ್ನು ಇಲ್ಲಿ ಸೂಚಿಸಬಹುದು. ಈ ಪ್ರಯತ್ನವು ಮೈಸೂರು ವಿಶ್ವವಿದ್ಯಾನಿಲಯದ ಪರವಾಗಿ ಕೆಲವು ವರ್ಷಗಳಿಂದ ಆಚರಣೆಯಲ್ಲಿ ತರಲಾಗಿದೆ ಮತ್ತು ಇದೇ ಹೊಸದಾಗಿ ಕರ್ನಾಟಕ ವಿಶ್ವವಿದ್ಯಾಲಯದ ಆಶ್ರಯದಲ್ಲಿ ಬಂದಿದೆ. ವಿಶ್ವವಿದ್ಯಾಲಯಿೀನ ಉಚ್ಚಶಿಕ್ಷಣದ ಲಾಭವು ಒಂದು ನಗರದಲ್ಲಿ ಮಾತ್ರ ದೊರೆಯುವದರಿಂದ ಅದರ ಪ್ರಯೋಜನವನ್ನು ಕೆಲಮಟ್ಟಿಗಾದರೂ ಬೇರೆ ಊರ ಜನರು ಮಾಡಿಕೊಳ್ಳಬೇಕೆಂದು ಈ ಯೋಜನೆಯನ್ನು ಪಶ್ಚಿಮದ ಎಷ್ಟೋ ರಾಷ್ಟ್ರಗಳಲ್ಲಿ ಕೈಕೊಂಡಿದ್ದಾರೆ. ವಿಶ್ವವಿದ್ಯಾಲಯವು ಕೆಲಜನ ವಿದ್ವಾಂಸರನ್ನು ಅಧ್ಯಾಪಕರನ್ನು ಸುತ್ತಲಿನ ಬೇರೆಬೇರೆ ಸ್ಥಳಗಳಿಗೆ ಕಳಿಸಿ ಅವರು ವ್ಯಾಸಂಗ ಮಾಡಿದ ಇಲ್ಲವೆ ಪಾಠ ಹೇಳುವ ವಿಷಯಗಳ ಬಗೆಯಾಗಿ ಕೆಲವು ಭಾಷಣಗಳನ್ನು, ವಿಚಾರಸಂಕಿರಣಗಳನ್ನು ಜರುಗಿಸುವಂತೆ ವ್ಯವಸ್ಥೆಯು ಮಾಡಲಾಗುತ್ತದೆ. ಅಲ್ಲಿ ಆ ಅಧ್ಯಾಪಕರು ಹೋಗಿ ತಮ್ಮ ಕಾರ್ಯಕ್ರಮವನ್ನು ನಡೆಸುತ್ತಿದ್ದಾಗ್ಗೆ ವಿಶ್ವವಿದ್ಯಾಲಯದ ಗ್ರಂಥಭಂಡಾರವಾಗಲಿ, ಅದರ ಆಶ್ರಯದಲ್ಲಿ ಮತ್ತು ಆದರ ಸಹಾಯದಿಂದ ಸ್ಥಳಿಕ ಗ್ರಂಥಾ

ಲಯವಾಗಲಿ ಆ ಭಾಷಣಗಳನ್ನೊಳಗೊಂಡ ವಿಷಯಗಳ ಬಗ್ಗೆ ಕೆಲವು ಗ್ರಂಥಗಳ ಮತ್ತು ಬೇರೆ ಸಲಕರಣೆಗಳ ಒಂದು ಪ್ರದರ್ಶನವನ್ನು ಏರ್ಪಡಿಸುವ ಕಾರ್ಯವು ಜರುಗುತ್ತದೆ. ಅತ್ತ ವ್ಯಾಖ್ಯಾನಗಳನ್ನು ಕೇಳಿದ ಮೇಲಾಗಲಿ ಅದಕ್ಕಿಂತ ಮುಂಚೆಯಾಗಲಿ ಅದಕ್ಕೆ ಸಂಬಂಧಿಸಿದ ಎಲ್ಲ ಸಾಹಿತ್ಯವು ಊರ ಜನರಿಗೆ ಓದಲಿಕ್ಕೆ ದೊರೆತರೆ ಶ್ರವಣ ಮತ್ತು ದರ್ಶನದ ಸಹಾಯದಿಂದ ಆ ವಿಷಯದ ಮಟ್ಟಿಗೆ ಸಾಕಷ್ಟು ಸಂಪೂರ್ಣವಾದ ಜ್ಞಾನವನ್ನು ಅಲ್ಲಿಯ ಜನರಿಗೆ ಪಡೆಯಲಿಕ್ಕೆ ಸಾಧ್ಯವಾಗುವದು.

ಇತ್ತ ವಾಚನ ಮತ್ತು ಅಧ್ಯಯನದ ರೂಢಿಯನ್ನು ಬೆಳೆಸುವಂತೆ ಲೇಖನ ಮತ್ತು ವಿಮರ್ಶೆಯ ಪರಿಪಾಠವೂ ಜನರಿಗೆ ಆಗುವಂತೆ ಗ್ರಂಥಾಲಯವು ಇನ್ನೂ ಕೆಲವು ಕಾರ್ಯಕ್ರಮಗಳನ್ನು ಯೋಜಿಸಬಹುದು. ನಮ್ಮ ದೇಶದಂತೆಯೆ ಸಾಮಾನ್ಯವಾಗಿ ಶಿಕ್ಷಣಪ್ರಸಾರವನ್ನು ಭರದಿಂದ ಕೈಕೊಳ್ಳಬೇಕೆಂಬ ಎಲ್ಲ ರಾಷ್ಟ್ರಗಳಲ್ಲಿಯೂ ಒಂದು ಕಡೆಯಿಂದ ಹೊಸದಾಗಿ ಅಕ್ಷರ ಜ್ಞಾನವನ್ನು ಮಾಡಿಕೊಂಡ ಜನರಿಗೆ ತಕ್ಕ ಎನಿಸುವಂತಹ ಮತ್ತು ಸಾಮಾನ್ಯವಾಗಿ ಶಿಕ್ಷಣಕ್ರಮದಲ್ಲಿ ಹೊಂದಿಕೆಯಾಗುವಂತಹ ಸಾಹಿತ್ಯದ ನಿರ್ಮಾಣವಾಗುವದಿಲ್ಲ ಎಂಬ ನಿಯೋಜಕರ ದೂರು ಕೇಳಬರುತ್ತಿದ್ದರೆ ಇನ್ನೊಂದು ಕಡೆಯಿಂದ ತಾವು ರಚಿಸಿದ ಕೃತಿಗಳನ್ನು ಓದಿ ತಿಳಿದುಕೊಳ್ಳುವ ಮತ್ತು ಅದರ ಲಾಭವನ್ನು ಮಾಡಿಕೊಳ್ಳುವ ಪ್ರವೃತ್ತಿಯೆ ಜನರಲ್ಲಿಲ್ಲ ಎಂಬ ಸಾಹಿತಿಗಳ ಕೂಗು ಒಮ್ಮೆಲೆ ಕೇಳಬರುತ್ತದೆ. ಹೀಗಿದ್ದ ಪ್ರಸಂಗಗಳಲ್ಲಿ ಮುಂದುವರಿದ ರಾಷ್ಟ್ರಗಳು ಕೆಲವು ಉಪಾಯಗಳನ್ನು ಮಾಡಿವೆ. ಅವುಗಳಲ್ಲಿ ವಿಶೇಷವಾಗಿ ಗ್ರಂಥಭಂಡಾರದ ಪರವಾಗಿ ಲೇಖಕ ಸಂಘ, ವಾಚಕ ಮಂಡಲ, ವಿಮರ್ಶಾಕೂಟ ಮೊದಲಾದ ಉಪಸಮಿತಿಗಳನ್ನು ಕಟ್ಟಿಕೊಳ್ಳುವದಾಗಿದೆ. ಊರಲ್ಲಿಯ ಇಲ್ಲವೆ ಆ ಭಾಗದ ಲೇಖಕರನ್ನೂ ಉದಯೋನ್ಮುಖ ಲೇಖಕರನ್ನೂ ಆಮಂತ್ರಿಸಿ ಅವರ ಪರಸ್ಪರ ಪರಿಚಯ, ಅವರ ಕೃತಿಗಳ ಪರಿಚಯ ಮತ್ತು ಅವರ ಸಮಸ್ಯೆಗಳ ಪರಿಚಯವಾಗುವಂತೆ ಒಂದು ಸಂದರ್ಭವನ್ನು ಉಂಟು ಮಾಡುವರು. ಅದರಂತೆಯೆ ಒಮ್ಮೊಮ್ಮೆ ಒಬ್ಬ ಲೇಖಕನನ್ನು ಕರೆದಾಗಲಿ, ಅವನ ಕೃತಿಗಳನ್ನು ಸಂಗ್ರಹಿಸಿಯಾಗಲಿ, ಅವನ ಒಂದೊಂದು ರಚನೆಯನ್ನು ಓದುವ ಕಾರ್ಯಕ್ರಮವನ್ನು ಏರ್ಪಡಿಸುತ್ತಾರೆ. ಆಗ್ಗೆ ಕೇವಲ

ಅವನ ಕೃತಿಯ ಅಭ್ಯಾಸವಾಗುವದಷ್ಟೆ ಅಲ್ಲದೆ ಆತನು, ಆ ಪುಸ್ತಕ ವನ್ನಾಗಲಿ ವಿಷಯವನ್ನಾಗಲಿ ಯೋಜಿಸುವಾಗ್ಗೆ ಎಂತಹ ಸನ್ನಿವೇಶವನ್ನು ಎದುರಿಸಿದ ಎಂಬಿವೇ ಮೊದಲಾದ ಹಿನ್ನೆಲೆಯ ಸಂಗತಿಗಳನ್ನು ತಿಳಿದು ಕೊಳ್ಳಲಿಕ್ಕೆ ಅದೊಂದು ಸುಸಂಧಿಯಾಗಿ ಪರಿಣಮಿಸುವದು. ಅತ್ತ ಅವನ ಒಂದು ಕೃತಿಯಿಂದ ಬೇರೆ ಕೆಲವನ್ನು ತಿಳಿದುಕೊಳ್ಳಬೇಕೆಂಬ ಸಹಜ ಕುತೂ ಹಲವೂ ಉದ್ಭವಿಸುವದು. ಅದೇ ಸಮಯದಲ್ಲಾಗಲಿ ಅಥವಾ ಅದಕ್ಕಾಗಿ ಬೇರೊಂದು ದಿನವನ್ನು ಗೊತ್ತುಪಡಿಸಿಯಾಗಲಿ ಆ ಸಾಹಿತ್ಯಕೃತಿಯ ವಿಮರ್ಶೆಯನ್ನು ಮಾಡುವದರಿಂದ ಮತ್ತು ಅದರ ವಿಷಯವಾಗಿ ಚರ್ಚೆ ಯನ್ನು ಏರ್ಪಡಿಸುವದರಿಂದ ವಾಚಕರಲ್ಲಿ ಹೆಚ್ಚಿನ ಸಮಾಚಾರವೂ ಹರಡು ವದು; ಅವರ ದೃಷ್ಟಿಯಿಂದ ತನ್ನಲ್ಲಿ ಎಂತಹ ತಿದ್ದುಪಾಟಗಳನ್ನು ಮಾಡಿ ಕೊಳ್ಳಬೇಕು ಎಂಬ ಸೂಚನೆಯು ಲೇಖಕನಿಗೆ ದೊರೆತು ಅವನ ದೂರುಗಳು ದೂರಾಗಲಿಕ್ಕೆ ಒಂದು ಅವಕಾಶವೂ ದೊರೆಯುವದು.

ಇತ್ತ ಹೊಸ ಲೇಖಕರನ್ನು ಪ್ರೋತ್ಸಾಹಿಸಲಿಕ್ಕೆ ಮತ್ತು ಜನರ ಹಾಗೂ ಲೇಖಕರ ಪರಸ್ಪರ ಸಂಪರ್ಕವನ್ನು ತಂದು ಕೊಡಲಿಕ್ಕೆ ಈ ಬಗೆಯ ಉತ್ಸವಗಳು ಬಹಳ ಸಹಾಯಕವಾಗುವವು. ತನ್ನ ಮೊದಲನೆಯ ಕವನ ವಾಗಲಿ, ಕತೆಯಾಗಲಿ, ಕೃತಿಯಾಗಲಿ, ನಾಟಕವಾಗಲಿ, ಹೇಗೆ ಆಗಿರುವದು, ತಾನು ಮಾಡಿಕೊಂಡ ಉದ್ದೇಶವು ಎಷ್ಟರ ಮಟ್ಟಿಗೆ ಸಾಧಿಸಿರುವದು, ಎಂಬ ಬಗ್ಗೆ ಲೇಖಕನ ಮನಸ್ಸಿನಲ್ಲಿ ಹೊಯ್ದಾಟ, ಲವಲವಿಕೆಗಳು ಇರುವದು ಸಹಜವೆ. ಗ್ರಂಥಭಂಡಾರದ ಒಂದು ಉಪಸಮಿತಿಯ ಪರವಾಗಿ ಯುವಕರಿಗೆ ತಮ್ಮ ಲೇಖನಗಳನ್ನು ಓದಿತೋರಿಸಲಿಕ್ಕೆ ಮತ್ತು ಹೊಸ ಬರೆಹಗಾರರಿಗೆ ತಮ್ಮ ಸೇವೆಯನ್ನು ಸಲ್ಲಿಸಿ ಅದರ ಮೌಲ್ಯಮಾಪನವನ್ನು ಮಾಡಿಕೊಳ್ಳಲಿಕ್ಕೆ ವಿಶೇಷ ಕಾರ್ಯಕ್ರಮವನ್ನು ನಿರ್ಧರಿಸಬಹುದು. ಈ ಕಾರ್ಯಕ್ರಮಗಳಲ್ಲಿ ನಿಜವಾಗಿ ಸ್ವಾರಸ್ಯವುಳ್ಳ ಮತ್ತು ಉಪಯುಕ್ತವಾದ ಸಾಹಿತ್ಯವು, ಪರೀಕ್ಷಾ ವಿಧಿಯನ್ನು ದಾಟಿ, ನಿರ್ಮಾಣವಾಗುವದು. ಇತ್ತ ಪ್ರಚಲಿತ ವಿಚಾರ ಗಳನ್ನು ತಿಳಿದುಕೊಳ್ಳಲಿಕ್ಕೆ ಗ್ರಂಥಾಲಯದ ವಾಚಕ ಮಹಾಶಯರಿಗೆ ಅನು ಕೂಲವಾಗುವದು; ಅತ್ತ ತಾನು ಕೈಕೊಂಡ ಕಾರ್ಯವು ಯೋಗ್ಯವಾದುದು ಎಂಬ ಪ್ರೋತ್ಸಾಹ ದೊರೆತು ನವಸಾಹಿತಿಗೆ ಹೆಚ್ಚಿನ ಸ್ಫೂರ್ತಿಯುಂಟಾಗು

ವದು; ಅದರಂತೆಯೆ ಈಗಿನ ದಿನಮಾನದಲ್ಲಿ ನಮಗೆ ಬೇಕಾದ ಅಥವಾ ಸಹಾಯಕವಾಗಬಹುದಾದ ಸಾಹಿತ್ಯವೆ ದೊರೆಯುತ್ತಿಲ್ಲ ಎಂಬ ಆಕ್ಷೇಪವು ಮಾಯವಾಗುವಂತೆ ಹೊಸ ಕೃತಿಗಳೂ ಹುಟ್ಟುವವು.

ಇದೇ ಬಗೆಯಾಗಿ ನಾಟಕಗಳನ್ನು ಓದಿಸುವದು ಆಡಿಸುವದು, ಕೀರ್ತನೆಗಳನ್ನು ರಚಿಸುವದು ಹೇಳಿಸುವದು, ಸಂಗೀತವನ್ನು ತಿಳಿಸುವದು ಏರ್ಪಡಿಸುವದು, ಇನ್ನೇ ಮೊದಲಾದ ಕಾರ್ಯಕಲಾಪಗಳಿಂದ ಗ್ರಂಥ ಭಂಡಾರವು ಜನರಲ್ಲಿ ವಾಚನಾಭಿರುಚಿಯನ್ನು ಹೆಚ್ಚಿಸಬಹುದು; ಸಾಹಿತ್ಯ ದಲ್ಲಿ ಹೊಸ ನಿರ್ಮಾಣ ಕಾರ್ಯ ಜರುಗುವಂತೆ ಹೆಣಗಬಹುದು ಮತ್ತು ನವ ಲೇಖನಗಳ ಉಚಿತ ಅಭ್ಯಾಸ ಆಗುವಂತೆ ವ್ಯವಸ್ಥೆಯನ್ನು ಮಾಡ ಬಹುದು. ಒಂದು ಊರಲ್ಲಿ ಅಥವಾ ಒಂದು ಭಾಗದಲ್ಲಿ ವ್ಯಾಖ್ಯಾನಗಳನ್ನು ಹೇಳಬಲ್ಲ ವಿದ್ವಾಂಸರಿರುವರು; ಧರ್ಮಬೋಧನೆಯನ್ನು ಮಾಡಬಲ್ಲ ಪುರೋ ಹಿತರು ಇರಬಹುದು; ನಾಟಕಗಳನ್ನು ಆಡಿ ತೋರಿಸಬಲ್ಲ ಮಂಡಲಗಳಿರ ಬಹುದು; ಆಟಗಳನ್ನು ಆಡಬಹುದಾದ ಕ್ರೀಡಾಸಂಘಗಳಿರಬಹುದು. ಹಾಗೆಯೆ ವಾಕ್ಪಟಮಂದಿರಗಳು, ಪುಸ್ತಕ ಪ್ರಕಾಶಕರು, ವಿದ್ಯಾಲಯಗಳು ಮುಂತಾದ ಅನೇಕ ಸಂಘ-ಸಂಸ್ಥೆಗಳಿರಬಹುದು. ಜ್ಞಾನದಾನದ ಕಾರ್ಯ ದಲ್ಲಿ ಗ್ರಂಥಾಲಯವು ಇಂತಹ ಎಲ್ಲ ಸಂಘಗಳಿಗೆ ಒಂದು ಕೇಂದ್ರವಾಗಬೇಕು. ಸಂದರ್ಭ ಒದಗಿದಾಗ ಇವುಗಳಲ್ಲಿ ಯಾವುದೇ ಸಂಘದ ಸದಸ್ಯರ ಸಹಾಯ ವನ್ನು ಅದು ಕೋರಬಹುದು; ಪಡೆಯಬಹುದು. ಅಗತ್ಯವಾದಲ್ಲಿ ಅವರಲ್ಲಿ ಕೆಲವು ಜನರನ್ನು ವೈಯಕ್ತಿಕವಾಗಿ ಕಲೆಹಾಕಿ, ತನ್ನದೇ ಆದ ಒಂದು ಸಂಘ ಟನೆಯನ್ನು ಗ್ರಂಥಾಲಯವು ಮಾಡಿಕೊಳ್ಳಬಹುದು. ಜ್ಞಾನಭಂಡಾರವಾದ ಈ ಸಂಸ್ಥೆಯು ಜ್ಞಾನಪ್ರಸಾರವೆ ತನ್ನ ಗುರಿ, ಕೇವಲ ಪ್ರತಿಷ್ಠೆಯನ್ನು ಗಳಿಸುವದಲ್ಲ, ಅಥವಾ ಊರ ಜನರಲ್ಲಿ ಒಡಕುಗಳನ್ನು ಹುಟ್ಟಿಸುವದಲ್ಲ —ಎಂಬ ಮಾತನ್ನು ಮೊದಲು ಗಟ್ಟಿಯಾಗಿ ತಿಳಿದುಕೊಂಡಿರಬೇಕು.

ಕೊನೆಯದಾಗಿ ನವಶಿಕ್ಷಿತ ವ್ಯಕ್ತಿಯ ಸಂಬಂಧವಾಗಿ ಕೆಲವು ಸಂಗತಿ ಗಳನ್ನು ನೋಡಬಹುದು. ಈ ಸಮಸ್ಯೆಯು ಭಾರತದಂತಹ ಸಾಕ್ಷರತೆಯು ಹೊಸದಾಗಿ ಹಬ್ಬುತ್ತಿರುವ ಮತ್ತು ಸರಿಯಾದ ಸೌಕರ್ಯಗಳಿಂದ ಸಾಕ್ಷರತೆಯ ಸಸಿಯನ್ನು ಬೆಳೆಸದೆ ಬಿಡುವ ದೇಶಗಳಲ್ಲಿ ಮಾತ್ರ ತಲೆದೋರು

ವದು ಎಂದು ಭಾವಿಸಬಾರದು. ಒಂದು ದೃಷ್ಟಿಯಿಂದ ನೋಡಿದರೆ ಸಮಾಜ ದಲ್ಲಿ ಪ್ರಗತಿಯು ಹೆಚ್ಚಾದಂತೆ ಇಂತಹ ನವಶಿಕ್ಷಿತರ ಸಂಗಡವು ಕೂಡ ಬೆಳೆಯುತ್ತ ಹೋಗುತ್ತದೆ. ಮತ್ತು ಅವರ ಸಲುವಾಗಿಯೆ ವಿಶೇಷ ಪರಿಶ್ರಮವನ್ನು ಮಾಡಬೇಕಾಗುವಂತಹ ಪ್ರಸಂಗ ಮೇಲಿಂದ ಮೇಲೆ ಬರುತ್ತದೆ. ಈ ನವಶಿಕ್ಷಿತ (new literate) ಜನರೆಂದರೆ, ಒಮ್ಮೆ ಅಕ್ಷರಜ್ಞಾನವನ್ನು ಪಡೆದು ಕಾಲಾಂತರದಲ್ಲಿ ಅಲಕ್ಷ್ಯದಿಂದಾಗಲಿ, ನಿರುಪಯೋಗದಿಂದಾಗಲಿ ಅದನ್ನು ಮರೆತುಬಿಡುವ ಜನರಂತೆಯೆ, ಒಂದು ಪದ್ಧತಿಯನ್ನಾಗಲಿ, ಒಂದು ಶಾಸ್ತ್ರವನ್ನಾಗಲಿ. ಒಂದು ಉದ್ಯಮವನ್ನಾಗಲಿ ಮೊದಲು ಕಲಿತುಕೊಂಡು ಅದರಲ್ಲಿ ಪ್ರಗತಿಯನ್ನು ಸಾಧಿಸದೆ, ಅದರಲ್ಲಿ ದಿನದಿನಕ್ಕೆ ಆಗುತ್ತಿರುವ ಬದಲಾವಣೆ ಮತ್ತು ಸುಧಾರಣೆಗಳನ್ನು ತಿಳಿಯದೆ ಇಲ್ಲವೆ ಗ್ರಹಿಸದೆ ಹಿಂದಿನ ಸ್ಥಿತಿಯಲ್ಲಿಯೆ ಉಳಿದಿರುವ ಜನರ ಸಮಾವೇಶವೂ ಆಗುತ್ತದೆ. ಈ ಬಗೆಯ ಪದ್ಧತಿಯ ಇಲ್ಲವೆ ಉಪಕರಣೆಯ ಪರಿವರ್ತನೆಯು ಇದ್ದ ವಸ್ತುಗಳೊಳಗಿನ ಒಂದು ಹೊಸ ಸಂಯೋಜನೆಯಿಂದಾದರೂ ಆಗಿರಬಹುದು, ಇಲ್ಲವೆ ಪೂರ್ಣ ನವೀನವಾದ ಒಂದು ಸಾಧನವನ್ನು ಸಂಶೋಧಿಸಿಯೆ ಹೊರಟಿರಬಹುದು. ಇದು ಪ್ರಾಯೋಗಿಕ ಸ್ಥಿತಿಯನ್ನು ದಾಟಿ ಪ್ರತ್ಯಕ್ಷ ಉಪಯೋಗದ ಮಟ್ಟಕ್ಕೆ ಬರಬೇಕಾದರೆ ತುಸು ಸಮಯವೂ ಹಿಡಿಯಬಹುದು; ಅದರಲ್ಲಿ ಹಣದ ಪ್ರಶ್ನೆಯೂ ಅಡಕವಾಗಿರಬಹುದು.

ಇಂತಹ ಯಾವುದಾದರೊಂದು ವೈಯಕ್ತಿಕ ತೊಡಕಿನ, ಯೋಜನೆಯಲ್ಲಿರುವ ನ್ಯೂನತೆಯ ಇಲ್ಲವೆ ಆರ್ಥಿಕ ಕೊರತೆಯ ಪರಿಣಾಮವಾಗಿ ಹೊಸ ಪ್ರಘಾತಗಳು ಸಮಾಜದಲ್ಲಿ ಕೂಡಲೆ ಪ್ರಚಾರದಲ್ಲಿ ಬರುವದಿಲ್ಲ. ಅಂತಹ ಸಂದರ್ಭಗಳಲ್ಲಿ ಗ್ರಂಥಭಂಡಾರದಂತಹ ಸಂಸ್ಥೆಯು ಮುಂದೆ ಬರುತ್ತದೆ. ಯಾವುದಾದರೊಂದು ಹೊಸ ವಿಚಾರವು ಒಂದು ನಿಟ್ಟಿನಲ್ಲಿ ತಿಳಿದಿರುವದು ಎಂಬ ಸಮಾಚಾರವು ಪತ್ರಿಕೆಗಳ ಮೂಲಕ ಕೂಡಲೆ ಗ್ರಂಥಾಲಯವನ್ನು ತಲುಪುತ್ತದೆ. ಆಗ್ಗೆ ಆ ವಿಷಯದೊಳಗೆ ಆಸಕ್ತಿಯಿದ್ದ ಜನರ ಒಂದು ಸಭೆಯನ್ನು ಕೂಡಿಸಿ, ಅದರಲ್ಲಿ ಪರಿಣತಿಯನ್ನು ಪಡೆದ ಸಂಶೋಧಕನಿಂದ ನೂತನ ಆವಿಷ್ಕರಣದ ಬಗೆಯಲ್ಲಿ ಭಾಷಣವನ್ನಾಗಲಿ ಸ್ಪಷ್ಟೀಕರಣವನ್ನಾಗಲಿ ಏರ್ಪಡಿಸಬೇಕು. ಈ ಬಗೆಯ ವಿಚಾರಪ್ರಸಾರದಿಂದ ಮತ್ತು

ವಿನಿಮಯದಿಂದ ನವವಿಷಯದ ಬಗ್ಗೆ ಅದರಲ್ಲಿ ನಿಷ್ಣಾತನಾಗಿರುವವನಿಗೊಂದು ಧೈರ್ಯವೂ ಹುಟ್ಟುವದು; ನಾವು ಹಿಂದೆ ಬಿದ್ದಿರುವೆವು ಎಂದು ತಿಳಿದುಕೊಂಡಿರುವ ಅನ್ಯರಲ್ಲಿ ಆ ಹೊಸ ಬೆಳಕೂ ಹರಿಯುವದು. ಈ ಬಗೆಯ ಉತ್ಸವಗಳನ್ನು ಹೊಸದೊಂದು ಪುಸ್ತಕವು ಪ್ರಕಟವಾದಾಗ ಆಗಲಿ, ನೂತನವಾದ ಶಾಖೆಯನ್ನು ಗ್ರಂಥಾಲಯವು ಆರಂಭಮಾಡಿದಾಗ ಆಗಲಿ, ಮತ್ತೊಂದು ವಿಷಯದ ಮೇಲಿನ ಗ್ರಂಥಸಂಗ್ರಹವನ್ನು ಗ್ರಂಥಭಂಡಾರಕ್ಕೆ ಸೇರಿಸಿದಾಗ ಆಗಲಿ ಕೂಡ ಏರ್ಪಡಿಸಬಹುದು. ಹೊಸ ವಿಚಾರವು ಸಮಾಜದಲ್ಲಿ ಯಾವ ಬಗೆಯಿಂದ ನಡೆದಿದೆ ಎಂಬ ಕಡೆಗೆ ಸಾರ್ವಜನಿಕರ ಲಕ್ಷ್ಯವನ್ನು ನೊದಲು ಎಳೆಯಬೇಕಾದುದು ಗ್ರಂಥಭಂಡಾರವೆ.

ನವಶಿಕ್ಷಿತನನ್ನು ಎಷ್ಟೋ ಸಾರೆ ಹೊಸದಾಗಿ ಅಕ್ಷರಗಳನ್ನು ಕಲಿತ ವಿದ್ಯಾರ್ಥಿಯಂತೆಯೆ ನೋಡಿಕೊಳ್ಳಬೇಕಾಗುತ್ತದೆ. ಒಂದು ಶಾಲೆಯೊಳಗಿನ ಇಲ್ಲವೆ ವಿದ್ಯಾಲಯದೊಳಗಿನ ಶಿಕ್ಷಕರೆಂದಾಗಲಿ, ಒಂದು ಕಾರ್ಯಾಲಯದೊಳಗಿನ ಸಹಾಯಕ ಅಥವಾ ಅಧಿಕಾರಿಗಳಾಗಲಿ, ಅಥವಾ ಒಂದು ಉದ್ಯಮದೊಳಗಿನ ವ್ಯಕ್ತಿಯಾಗಲಿ ಮೊದಲು ತಮ್ಮ ಕಸಬಿನ ಪದ್ಧತಿಯೊಂದನ್ನು ತಿಳಿದುಕೊಂಡು ಕೆಲಸವನ್ನು ಆರಂಭಿಸುವರು. ಅದರೊಳಗೆ ದೈನಂದಿನ ಕಾರ್ಯವೆಲ್ಲ ಹೆಚ್ಚಾಗಿ ಒಂದೇ ಮಾದರಿಯದಿದ್ದ ಮೂಲಕ ಮತ್ತು ಬೇರೆ ವೈಶಿಷ್ಟ್ಯವನ್ನಾಗಲಿ, ಪ್ರಗತಿಪರ ರೀತಿಯನ್ನಾಗಲಿ ಕಲಿತುಕೊಳ್ಳಲಿಕ್ಕೆ ಅವರಿಗೆ ಸಾಧ್ಯವಾಗುವದಿಲ್ಲವಾದ ಕಾರಣ ಬಹುತರವಾಗಿ ಅವರು ಆ ಕೆಲಸದ ಒಂದು ಹಳೆಯ ಪಡಿಯಚ್ಚಿನಲ್ಲಿಯೆ ಸಾಗುತ್ತಿರುವರು. ಕಾಲಕ್ರಮಕ್ಕೆ ತಕ್ಕ ಸುಧಾರಣೆಯ ಸಲಕರಣೆಗಳನ್ನು ಮತ್ತು ರೀತಿಗಳನ್ನು ಅವರಿಗೆ ಕಲಿಸದಿದ್ದರೆ, ಅವರು ಮಾಡುತ್ತಿರುವ ಕೆಲಸದ ಗುಣ ಮತ್ತು ಪರಿಣಾಮವು ಪ್ರತಿದಿನ ಅವನತಿಯನ್ನು ತೋರುವದು. ಅಂತೆಯೆ ಅವರಲ್ಲಿ ಅವರ ಕೆಲಸದ ವಿಷಯವಾಗಿಯೆ ಹೊಸ ಹುರುಪನ್ನು ಹುಟ್ಟಿಸಲಿಕ್ಕೆಂದು ಯೋಜಕರು ಕೆಲವು ಉಪಾಯಗಳನ್ನು ಕೈಕೊಳ್ಳಬೇಕಾಗುತ್ತದೆ.

ಕೇವಲ ಹೊಸ ನಮೂನೆಯ ಶಿಕ್ಷಣವನ್ನು ಪಡೆದ ಇಲ್ಲವೆ ತರಬೇತಿಯನ್ನು ಹೊಂದಿದ ತರುಣ ಜನರನ್ನು ಕೆಲಸದಲ್ಲಿ ತೆಗೆದುಕೊಳ್ಳುವದರಿಂದ ಈ ಸಮಸ್ಯೆಯ ಪರಿಹಾರವು ಪೂರ್ಣವಾಗಿ ಆಗುವದಿಲ್ಲ. ಇದ್ದ ಕೆಲಸಗಾರರಲ್ಲಿ,

ಅಷ್ಟೆ ಕೆಲಸಮಾಡಿ ಅನುಭವವನ್ನು ಪಡೆದ ಸಹಾಯಕವರ್ಗದಲ್ಲಿ ನವ ಚೇತನವನ್ನು, ಹೊಸ ತಿಳಿವನ್ನು ತುಂಬುವದು ಆವಶ್ಯಕ ಇರುತ್ತದೆ. ಈ ಕಾರ್ಯವನ್ನು ಆ ಕೆಲಸದ ವಿಷಯದಲ್ಲಿ ನೂತನ ಪ್ರಯೋಗಗಳನ್ನು ಮಾಡಿ ಪದ್ಧತಿಗಳನ್ನು ಕಂಡುಹಿಡಿದ ಜನರ ಕೆಲವು ಭಾಷಣ-ಬೋಧನ-ಪ್ರಾತ್ಯಕ್ಷಿಕೆಗಳಿಂದ ತಮ್ಮ ಜನರಲ್ಲಿಯೂ ಅವುಗಳ ಪ್ರಚಾರ ಮಾಡಬಹುದು; ಇಲ್ಲವೆ ಅಂತಹ ಶಿಕ್ಷಣವನ್ನು ಕೊಡುವದಕ್ಕೆಂದು ಒಂದೊಂದು ಸಾರೆ ವಿಶಿಷ್ಟ ವರ್ಗಗಳನ್ನಾಗಲಿ, ಕಾರ್ಯಕ್ರಮವನ್ನಾಗಲಿ ನಡೆಯಿಸಬಹುದು. ಅದ ರಂತೆಯೆ ತಮ್ಮ ಕಾರ್ಯಕರ್ತೃಗಳ ಒಂದು ಶಿಕ್ಷಣಯಾತ್ರೆಯನ್ನು ಏರ್ಪಡಿಸಿ ಆ ಸಮಯದಲ್ಲಿ ಹೊಸ ಪ್ರಯೋಗಗಳು ಪ್ರಚಾರದಲ್ಲಿದ್ದ ಸ್ಥಳಗಳನ್ನು, ಸಂಸ್ಥೆಗಳನ್ನು ಸಂದರ್ಶಿಸಬಹುದು. ಇಂತಹ ಕಾರ್ಯಯೋಜನೆಯ ಜೊತೆ ಯಲ್ಲಿಯೆ ಆ ಹೊಸ ಸಂಶೋಧನಗಳ ಬಗೆಯಲ್ಲಿ ತಾತ್ವಿಕ ಹಿನ್ನೆಲೆಯನ್ನು ಹುಟ್ಟಿಸಿ, ಗಟ್ಟಿಮಾಡಿಕೊಡಲಿಕ್ಕೆಂದು ಒಂದು ಗ್ರಂಥಸಂಗ್ರಹವಿದ್ದರೆ ಮತ್ತು ಗ್ರಂಥಭಂಡಾರದ ಪರವಾಗಿಯೇ ವರ್ಗಗಳು ಇಲ್ಲವೆ ಪ್ರವಾಸಗಳು ಏರ್ಪಟ್ಟರೆ ನವಶಿಕ್ಷಿತರ ಸಮಸ್ಯೆಗಳು ದೂರವಾಗುವವಷ್ಟೆ ಅಲ್ಲದೆ ಅವರು ಪಡೆದ ಹೊಸ ಬೆಳಕು ಅವರಿಗೆ ಪೂರ್ಣವಾಗಿ ಸಹಾಯಕವಾಗುವದು.



# ೫. ವಂಶಾವಳಿ



ಗ್ರಂಥಭಂಡಾರಗಳು ನಮ್ಮ ದೇಶದಲ್ಲಿ ಅಸ್ತಿತ್ವದಲ್ಲಿದ್ದು ಅದೆಷ್ಟೋ ಕಾಲವಾಗಿದ್ದರೂ ಅದರಲ್ಲಿ ವೈವಿಧ್ಯವಿಲ್ಲದಿರುವದೊಂದು ವಿಶೇಷವಾಗಿ ಗಮನಾರ್ಹವಾದ ವಿಷಯವಾಗಿದೆ. ಇಲ್ಲಿಯ ವರೆಗೆ ಪುರಾತನ ಕಾಲದ ಗ್ರಂಥಾಲಯಗಳ ಬಗೆಯಲ್ಲಿ ನಮಗೆ ದೊರೆತ ವಿವರಗಳಿಂದ ಒಂದು ಗ್ರಂಥಾಲಯದಲ್ಲಿ ಅನೇಕ ವಿಷಯಗಳ ಬಗ್ಗೆ ಬರೆಯಲಾದ ಅಥವಾ ರಚಿತವಾದ ಪುಸ್ತಕಗಳು ಇದ್ದವು ಎಂಬ ಸಂಗತಿಯು ತಿಳಿದಿದ್ದರೂ ಒಂದೊಂದು ವಿಶಿಷ್ಟವಾದ ವಿಷಯದ ಇಡಿಯ ಒಂದು ಗ್ರಂಥಭಂಡಾರವೆ ಆಗಲಿ, ಒಂದೊಂದು ವಿಷಯದಲ್ಲಿ ಇಂತಹದೊಂದು ಪ್ರದೇಶದವರ ಸಲುವಾಗಿಯೆ ಸಂಕಲಿತವಾದ ಪುಸ್ತಕಗಳಿದ್ದವು ಎಂಬ ಸಮಾಚಾರವಾಗಲಿ ಸಿಕ್ಕಿಲ್ಲ. ಬಹುತರವಾಗಿ ಆಗಿನ ಕಾಲದಲ್ಲಿ ಈ ಸೂಕ್ಷ್ಮವಾದ ವೈಶಿಷ್ಟ್ಯವನ್ನು ತೋರಿಸುವಷ್ಟು ಪ್ರಗತಿಯು ಗ್ರಂಥಾಲಯ ವ್ಯವಸ್ಥೆಯಲ್ಲಿ ಆಗಿರಲಿಲ್ಲ ಎಂಬುದಾಗಲಿ, ಒಂದೊಂದು ವಿಷಯದ ಮೇಲೆ ಒಂದೊಂದು ಗ್ರಂಥಭಂಡಾರವನ್ನೆ ಏರ್ಪಡಿಸುವಷ್ಟು ಪುಸ್ತಕಗಳು ಆಗ್ಗೆ ಬರೆಯಲ್ಪಟ್ಟಿರಲಿಲ್ಲ ಎಂಬುದಾಗಲಿ ಇದಕ್ಕೆ ಕಾರಣವಾಗಿರಬಹುದು. ಆದರೆ ಆಗಿನ ಗ್ರಂಥಭಂಡಾರದ ಪುಸ್ತಕನಿಧಿಯಲ್ಲಿ ಸಾಕಷ್ಟು ಪ್ರಮಾಣವೂ ಪ್ರೌಢಿಮೆಯೂ ಇದ್ದಿತು ಎಂಬ ಮಾತು ಮಾತ್ರ ನಿಜವಾದುದು.

ಇತ್ತ ಭಾರತದ ಗ್ರಂಥಾಲಯಗಳ ಬಗೆಯಲ್ಲಿ ಈಗ ದೊರೆತ ಸಮಾಚಾರನೆಂದರೆ ಪ್ರಾಚೀನ ಗ್ರಂಥಾಲಯಗಳಲ್ಲಿ ಕೆಲವು ವಿಶ್ವವಿದ್ಯಾಲಯಗಳ ಗ್ರಂಥಭಂಡಾರಗಳ ಬಗ್ಗೆ ಮತ್ತು ಮಧ್ಯಯುಗದಲ್ಲಿ ಹಲಕೆಲವು ಪ್ರತಿಷ್ಠಿತ ಜನರ—ಅಂದರೆ ರಾಜರು-ಅಧಿಪತಿಗಳು-ಶ್ರೀಮಂತರು-ಸರದಾರರು-ಪಂಡಿತರು-ಅಧ್ಯಾಪಕರು ಮುಂತಾದವರ ವೈಯಕ್ತಿಕ ಗ್ರಂಥಸಂಗ್ರಹಗಳ

ಬಗೆಯಲ್ಲಿ ಅಲ್ಪ-ಸ್ವಲ್ಪ ವಿವರಗಳು. ಇವುಗಳ ಉದ್ದೇಶಗಳು, ಇವುಗಳನ್ನು ಏರ್ಪಡಿಸಿದ ಸ್ಥಳ ಮತ್ತು ಇವುಗಳ ವಿನಿಯೋಗಕ್ಕಾಗಿ ಮಾಡಿಕೊಂಡ ವ್ಯವಸ್ಥೆ ಈ ವಿಷಯಗಳನ್ನು ನೋಡಿದರೆ ಅವೆಲ್ಲ ಆಧುನಿಕ ಗ್ರಂಥಭಂಡಾರ ಗಳನ್ನು ನಡೆಯಿಸಲಿಕ್ಕೆ ಯಾವ ಉದ್ದೇಶ ಮತ್ತು ನಿಯಮಗಳನ್ನು ಇಟ್ಟು ಕೊಂಡಿರುವೆವೋ ಹಾಗೆಯೆ ಇದ್ದುವು ಎಂಬುದು ತಿಳಿದು ಬರುವದು. ಆಗಿನ ಕಾಲದಲ್ಲಿ ಸಹಿತ ಸರಸ್ವತೀ ಭಂಡಾರಿಕರೆಂಬ ಅಧಿಕಾರಿಗಳು ಇರುತ್ತಿದ್ದರು. ಅವರು ಕೆಲವೊಂದು ಪರಂಪರೆ ಮತ್ತು ಪದ್ಧತಿಗಳಿಗನುಸರಿಸಿ ತಮ್ಮ ಸಂಸ್ಥೆ ಗಳನ್ನು ನಡೆಯಿಸುತ್ತಿದ್ದರು. ಆದರೆ ಇಂತಹ ಗ್ರಂಥಭಂಡಾರಗಳಲ್ಲಿ ಹೆಚ್ಚಿನ ಪ್ರಾವೀಣ್ಯದ ಪರಿಪಾಠಗಳಾಗಲಿ, ವಿಶಿಷ್ಟ ಪ್ರಗತಿಯನ್ನು ತೋರಿಸುವ ಸೌಕರ್ಯಗಳಾಗಲಿ ಆಗತ್ಯ ಬೀಳುವಷ್ಟು ಅವು ದೊಡ್ಡ ಗ್ರಂಥಭಂಡಾರ ಗಳಿರಲಿಲ್ಲ ಮತ್ತು ಅವುಗಳ ಸಂಗ್ರಹದಲ್ಲಿ ಹೆಚ್ಚಿನ ವೈವಿಧ್ಯವೂ ಇರುತ್ತಿರಲಿಲ್ಲ.

ಆದರೆ ಈಗಿನ ಪರಿಸ್ಥಿತಿಯಲ್ಲಿ ಗ್ರಂಥಾಲಯಗಳ ಉದ್ದೇಶವು ಅದೇ ಆಗಿದ್ದರೂ ಅವುಗಳ ಪ್ರಮಾಣ, ಅವುಗಳ ಸೌಕರ್ಯ ಮತ್ತು ಅವುಗಳ ಸಂಖ್ಯೆ ಕಲ್ಪನಾತೀತವಾಗಿ ಬೆಳೆದಿರುವದಲ್ಲದೆ ಅವುಗಳ ಸೇವೆಯನ್ನು ಸಲ್ಲಿಸುವ ಕ್ಷೇತ್ರದಲ್ಲಿ ಮತ್ತು ಅವುಗಳು ಸಂಗ್ರಹಿಸುವ ಪುಸ್ತಕಗಳೆ ಮೊದಲಾದ ಮಿಕ್ಕ ಉಪಕರಣಗಳ ವೈವಿಧ್ಯದಲ್ಲಿ ಎಷ್ಟೋ ಪರಿವರ್ತನೆಯಾಗಿದೆ. ಅಂತೆಯೆ ಇಂದು ಅವುಗಳ ಅಭ್ಯಾಸವನ್ನು ಮಾಡುವ ಮೊದಲು ಅವುಗಳಲ್ಲಿ ವರ್ಗ ಗಳನ್ನು ಮಾಡಿದರೆ ನಮಗೆ ಆ ಕಾರ್ಯವು ಹೆಚ್ಚು ಸರಳ ಮತ್ತು ಸುಲಭ ಎನಿಸುವದು.

ಹಾಗಾದರೆ ಇಂತಹ ವರ್ಗೀಕರಣಕ್ಕೆ ಯಾವ ಆಧಾರಗಳನ್ನು ತಗೆದು ಕೊಳ್ಳಬೇಕು ? ಪುಸ್ತಕಗಳ ಸಂಖ್ಯೆಯ ಮೇಲಿಂದ ಅವುಗಳ ಪ್ರಮಾಣ ವನ್ನು ಗೊತ್ತುಹಿಡಿದು ಆ ವೈಶಿಷ್ಟ್ಯದ ಮೇರೆಗೆ ವರ್ಗಗಳನ್ನು ಮಾಡಿ ಕೊಳ್ಳಬೇಕೆ ? ಒಂದು ಗ್ರಂಥಾಲಯದಲ್ಲಿ ಸೇವೆಯನ್ನು ಸಲ್ಲಿಸಲಿಕ್ಕೆ ಇರುವ ಕಾರ್ಯಕರ್ತೃಗಳ ಸಂಖ್ಯೆಯ ಪ್ರಕಾರ ಗ್ರಂಥಭಂಡಾರಗಳನ್ನು ವರ್ಗೀಕರಿಸ ಬೇಕೆ ? ಅಥವಾ ಗ್ರಂಥಭಂಡಾರಗಳ ವ್ಯವಸ್ಥೆಗಾಗಿ ವಿನಿಯೋಗಿಸುತ್ತಿರುವ ಹಣದ ಮೇಲಿಂದ ಗ್ರಂಥಭಂಡಾರಗಳ ವರ್ಗಗಳನ್ನು ನಿರ್ಮಿಸಬೇಕೆ ? ಈ ಎಲ್ಲ ಬಗೆಯ ವಿಚಾರಗಳು ಗ್ರಂಥಭಂಡಾರಗಳ ಸಂಘಟನೆಯ ಮತ್ತು

ಸಂಚಾಲನೆಯ ದೃಷ್ಟಿಯಿಂದ ಅಷ್ಟು ಪ್ರಯೋಜಕ ಮತ್ತು ಮಹತ್ವದ ಎನಿಸುವದಿಲ್ಲವೆಂದೇ ಗ್ರಂಥಭಂಡಾರಗಳಲ್ಲಿ ವರ್ಗಗಳನ್ನು ಕಲ್ಪಿಸುವಾಗ್ಗೆ ಬೇರೆ ಕೆಲವು ವಿಚಾರಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಅವುಗಳಿಗೆ ಗ್ರಂಥಭಂಡಾರಗಳು ಸೇವೆಯನ್ನು ಸಲ್ಲಿಸುವ ಕ್ಷೇತ್ರ, ಗ್ರಂಥಭಂಡಾರಗಳಲ್ಲಿ ಸಂಗ್ರಹವಾಗಿರುವ ಗ್ರಂಥಗಳ ವಿಷಯಗಾಂಭೀರ್ಯ, ಗ್ರಂಥಾಲಯಗಳು ಯಾರ ಸಲುವಾಗಿ ನಿರ್ಮಿಸಲ್ಪಟ್ಟಿರುವವೊ ಅವರ ಬೇಡಿಕೆಗಳು ಇವು ಮುಖ್ಯವಾದ ಆಧಾರಗಳೆನ್ನಬಹುದು. ಈ ತಳಹದಿಯ ಮೇರೆಗೆ ಗ್ರಂಥಾಲಯಗಳಲ್ಲಿ ಗ್ರಾಮ ಗ್ರಂಥಾಲಯಗಳು, ನಗರ ಗ್ರಂಥಾಲಯಗಳು ಎಂದೂ, ಪ್ರಾದೇಶಿಕ ಗ್ರಂಥಾಲಯಗಳು, ರಾಜ್ಯ ಅಥವಾ ಪ್ರಾಂತೀಯ ಗ್ರಂಥಾಲಯಗಳು, ರಾಷ್ಟ್ರೀಯ ಗ್ರಂಥಾಲಯ ಎಂದೂ ಒಂದು ಬಗೆಯ ಗ್ರಂಥಾಲಯ ವೃಕ್ಷವನ್ನು ಮಾಡಿಕೊಳ್ಳಬಹುದು. ಅದರಂತೆಯೆ ಚಿಕ್ಕವರಿಗಾಗಿ ಗ್ರಂಥಭಂಡಾರಗಳು, ಪ್ರೌಢರಿಗಾಗಿ ಗ್ರಂಥಭಂಡಾರಗಳು, ಮುಂತಾಗಿ ಬೇರೆ ಒಂದು ವರ್ಗವನ್ನು ನಿರ್ಮಿಸಿಕೊಳ್ಳಬಹುದು. ಮೊದಲನೆಯ ವರ್ಗನಿರ್ಮಾಣದಲ್ಲಿ ಕ್ಷೇತ್ರವು ಅಥವಾ ಪ್ರದೇಶವು ಮೂಲ ಘಟಕವಾಗಿದ್ದರೆ ಎರಡನೆಯದರಲ್ಲಿ ವಾಚಕರ ಮನಸ್ಸಿನ ಬೆಳವಣಿಗೆ, ಅಕ್ಷರ ಪರಿಚಯದ ಕ್ರಮ, ಜ್ಞಾನಸಾಧನೆಯ ಮಟ್ಟ, ಇವು ನಿರ್ಣಾಯಕ ಅಂಶಗಳಾಗಿರುತ್ತವೆ. ಮುಂದೆ ಮತ್ತೆ ಓದುಗರ ವಯಸ್ಸು, ಅವರಿಗೆ ಬೇಕಾಗುವ ವಿಷಯಗಳು ಮತ್ತು ಅವುಗಳನ್ನು ಅವರು ಕಲಿಯುವ ರೀತಿ ಇವುಗಳಿಗೆ ತಕ್ಕಂತೆ ಶಾಲೆಯ ಗ್ರಂಥಾಲಯಗಳು, ವಿದ್ಯಾಲಯದ ಗ್ರಂಥಾಲಯಗಳು ಮತ್ತು ವಿಶ್ವವಿದ್ಯಾಲಯ ಗ್ರಂಥಾಲಯಗಳು ಎಂದು ಇನ್ನು ಒಂದು ವಂಶವನ್ನು ನಾವು ನಿರ್ಧರಿಸಬಹುದು. ಈ ವರ್ಗದಲ್ಲಿ ವಿಶೇಷವಾಗಿ ಜ್ಞಾನದಾನವನ್ನು ಮಾಡುವ ಕ್ರಮವು ಮಹತ್ವದ್ದಾಗಿರುವದರಿಂದ ಆ ರೀತಿಯಾಗಿ ವಿಭಾಗಗಳನ್ನು ಮಾಡಬೇಕಾಗುತ್ತದೆ. ಇನ್ನು ಬೇರೆ ಕೆಲವು ವಿಶಿಷ್ಟ ಆಧಾರಗಳ ಮೇಲೆಯೂ ಗ್ರಂಥಭಂಡಾರಗಳ ವರ್ಗಗಳನ್ನು ವಿಂಗಡಿಸಿಕೊಳ್ಳಬೇಕಾಗುತ್ತದೆ. ವೈದ್ಯರು, ವಕೀಲರು, ಸ್ಥಾಪತ್ಯವಿಶಾರದರು, ಕಲಾವಿದರು, ತಂತ್ರಜ್ಞರು, ಅಧ್ಯಾಪಕರು, ವ್ಯಾಪಾರಿಗಳು, ಉದ್ಯಮಿಗಳು ಮುಂತಾದ ಸಮಾಜದ ಬೇರೆ ಬೇರೆ ವ್ಯವಸಾಯದ ಇಲ್ಲವೆ ಜೀವನೋಪಾರ್ಜನೆಯ ಪಂಗಡಗಳು ತಮ್ಮ ತಮ್ಮ ಬೇಡಿಕೆ

ಗಳಿಗೆ ತಕ್ಕಂತೆ ತಮ್ಮ ಗ್ರಂಥಭಂಡಾರಗಳನ್ನು ಸ್ಥಾಪಿಸಿಕೊಳ್ಳಬಹುದು. ಇವುಗಳಿಗೆಲ್ಲ ಸೇರಿ ಅಮೇರಿಕೆಯಲ್ಲಿ ವಿಶಿಷ್ಟ ಗ್ರಂಥಾಲಯಗಳು ಎಂಬ ಒಂದು ಮಹಾವರ್ಗವನ್ನು ಮಾಡಿದ್ದಾರೆ. ಆದರೆ ಇಂತಹ ಸ್ಥೂಲ ಅರ್ಥದ ಶಬ್ದವು ಯಾವ ಸ್ಪಷ್ಟವಾದ ಅಭಿಪ್ರಾಯವನ್ನೂ ಹುಟ್ಟಿಸುವದಿಲ್ಲವಾದ ಕಾರಣ ಮಿಕ್ಕ ದೇಶಗಳಲ್ಲಿ ಆ ಹೆಸರನ್ನು ಬಿಟ್ಟು ಆ ಆ ವ್ಯವಹಾರ ಇಲ್ಲವೆ ಕೆಲಸದ ಹೆಸರಿನ ಮೇಲಿಂದ ಅವುಗಳ ಗ್ರಂಥಭಂಡಾರಗಳನ್ನು ಕರೆಯುವದು ವಾಡಿಕೆಯಾಗಿದೆ. ಉದಾಹರಣಕ್ಕಾಗಿ ವಕೀಲರು ಕಟ್ಟಿಕೊಂಡ ಒಂದು ಪುಸ್ತಕಸಂಗ್ರಹಕ್ಕೆ ವಕೀಲರ ಪುಸ್ತಕಭಂಡಾರ ಎನ್ನಬಹುದು. ಉದ್ಯಮಿಗಳು ಮಾಡಿಕೊಂಡ ಇಂತಹ ಒಂದು ವ್ಯವಸ್ಥೆಗೆ ಉದ್ಯಮಿಗಳ ಗ್ರಂಥಭಂಡಾರ ಎಂದೆನ್ನಬಹುದು.

ಒಂದು ವಿಷಯದಲ್ಲಿ ಇಲ್ಲವೆ ಒಂದು ಕಸಬಿನಲ್ಲಿ ತಜ್ಞತೆಯನ್ನು ಪಡೆದವರ ಇಂತಹ ಗ್ರಂಥಾಲಯಗಳಂತೆಯೆ ಆ ಬಗೆಯ ಪರಿಣತಿಯನ್ನು ಪಡೆಯಲಿಕ್ಕೆ ದೈಹಿಕ ಕೊರತೆ ಅಥವಾ ಅಡಚಣಿಯುಳ್ಳ ಬೇರೆ ಕೆಲ ಜನರ ಇನ್ನೊಂದು ವರ್ಗದ ಗ್ರಂಥಸಂಗ್ರಹಗಳೂ ಇರುತ್ತವೆ. ಅವುಗಳಿಗೆ ಸಾಮಾನ್ಯವಾಗಿ ಅಂಗಹೀನರ ಗ್ರಂಥಭಂಡಾರ ಎಂದೆನ್ನಬಹುದು. ಕಿವುಡರು, ಮೂಕರು ಮತ್ತು ಕುರುಡರೇ ಮೊದಲಾದ ದುರ್ದೈವಿಗಳಿಗೆ, ಸಾಮಾನ್ಯ ಮನುಷ್ಯರಿಗೆ ಸಾಕಾಗಬಹುದಾದ ಗ್ರಂಥಗಳು ಅಥವಾ ವಾಚನದ ಬೇರೆ ಉಪಕರಣಗಳು ಸರಿಯಾಗುವದಿಲ್ಲ. ಅವರಿಗೆ ವಿದ್ಯೆಯನ್ನು ಕಲಿಸಲಿಕ್ಕೆ ಮತ್ತು ವ್ಯವಸಾಯವನ್ನು ತಿಳಿಸಲಿಕ್ಕೆ ಬೇರೆ ಸಾಧನಗಳನ್ನು ಉಪಯೋಗಿಸ ಬೇಕಾಗುತ್ತದೆ. ಅಂತೆಯೆ ಅಂತಹ ದೃಷ್ಟಿಯಿಂದ ಕೊಡುವ ಶಿಕ್ಷಣದಲ್ಲಿ ಸಹಾಯಕವಾಗಬಹುದಾದ ಬೇರೆ ವಸ್ತುಗಳ ಗ್ರಂಥಾಲಯವೆ ಅಂಗಹೀನರ ಗ್ರಂಥಾಲಯ ಎಂದು ಪರಿಣಮಿಸುತ್ತದೆ. ಇಂತಹ ಸಂಸ್ಥೆಗಳಲ್ಲಿ ಗ್ರಂಥಗಳು ಸಾಮಾನ್ಯವಾಗಿ ಇರುವ ನಮ್ಮ ಕಲ್ಪನೆಯ ಗ್ರಂಥಗಳಾಗಿರದೆ ಅವರಿಗೆ ಕೊಡುವ ಶಿಕ್ಷಣಕ್ಕಾಗಿ ಅನುಸರಿಸುವ ಪದ್ಧತಿಯ ಮೇಲೆ ಮಾತ್ರ ರಚಿಸಿದ ವಿಶಿಷ್ಟ ವಸ್ತುಗಳೆ ಅವರ ಗ್ರಂಥಗಳಾಗಿರುತ್ತವೆ.

ಅದೇ ರೀತಿಯಾಗಿ ಒಂದು ತರಹದ ಜನರಿಗೆ ಒಪ್ಪುವಂತಹ ಗ್ರಂಥ ಭಂಡಾರಗಳು ಇವು ಆಗಿದ್ದರೆ ಒಂದು ವಿಚಾರಕ್ಕೆ ತಕ್ಕಂತಹ ಗ್ರಂಥ ಅಥವಾ ಜ್ಞಾನವಸ್ತು ಭಂಡಾರಗಳು ಇನ್ನು ಕೆಲವು ಇರುತ್ತವೆ. ಜ್ಞಾನಸಾಧನದ

ಉಪಕರಣಗಳಲ್ಲಿ ವೈವಿಧ್ಯ ಹುಟ್ಟಿದಂತೆ ಗ್ರಂಥಾಲಯಗಳಲ್ಲಿ ಕೂಡ ವೈವಿಧ್ಯವು ತಲೆದೋರಿರುವದು ಸ್ವಾಭಾವಿಕವೇ ಸೈ. ಇಂದು ಜ್ಞಾನದಾನಕ್ಕಾಗಿ ನಾವು ಕೇವಲ ಪುಸ್ತಕ ಮತ್ತು ಪತ್ರಿಕೆಗಳನ್ನಷ್ಟೆ ಅಲ್ಲದೆ ಇನ್ನು ಅನೇಕ ಬಗೆಯ ಸಾಧನಗಳನ್ನು ಬಳಸುತ್ತೇವಷ್ಟೆ. ಅವುಗಳಲ್ಲಿ ಹಸ್ತಪ್ರತಿಗಳು, ಚಿತ್ರಸಂಪುಟ ಗಳು, ಭೂಪಟಮಾಲೆಗಳು, ಧ್ವನಿಮುದ್ರಿಕೆಗಳು, ಮಾಯಾದೀಪ ಮತ್ತು ಅದರ ಚಿತ್ರಮಾಲೆ, ಮುಂತಾದವುಗಳನ್ನು ಇಂದು ಗ್ರಂಥಾಲಯದ ಕಾರ್ಯ ದಲ್ಲಿ ಧಾರಾಳವಾಗಿ ಉಪಯೋಗಿಸುತ್ತಿದ್ದಾರೆ. ಅಂತೆಯೇ ಆ ಆ ವಸ್ತುಗಳ ಒಂದು ಆಧುನಿಕ ಮತ್ತು ಪರಿಪೂರ್ಣ ಸಂಗ್ರಹವನ್ನು ಮಾಡಿಟ್ಟುಕೊಳ್ಳು ವದು ಅವಶ್ಯಕವಾಗಿದೆ. ಈ ಬಗೆಯ ಸಂಗ್ರಹವೆ ಆ ವಸ್ತುವಿನ ಗ್ರಂಥ ಭಂಡಾರ ಎಂದೆನ್ನಬಹುದು. ವಸ್ತುವಿನ ಗ್ರಂಥಭಂಡಾರ ಎಂದರೆ ಕೊಂಚ ಆಭಾಸವೆನ್ನಿಸಬಹುದು; ಅಂತೆಯೆ ಅನುಕೂಲತೆಗಾಗಿ ಅವುಗಳಿಗೆ ಗ್ರಂಥ ಭಂಡಾರ ಎನ್ನಬಹುದಾದರೂ ಔಚಿತ್ಯಕ್ಕೆ ಅವು ವಸ್ತುಭಂಡಾರಗಳೆ ಆಗಿರು ವವು. ಜ್ಞಾನಪ್ರಸಾರ ಕಾರ್ಯದಲ್ಲಿ ಸಹಾಯಕ ಆಗುವದು ಅವುಗಳ ಮೂಲ ಮತ್ತು ಮುಖ್ಯ ಧ್ಯೇಯ ಎಂಬಲ್ಲಿ ಯಾವ ಭಿನ್ನಾಭಿಪ್ರಾಯವಿಲ್ಲ.

ಕೊನೆಯದಾಗಿದ್ದರೂ ಸಮಾಜದ ಮತ್ತು ವ್ಯಕ್ತಿಗತ ಸಂಸ್ಕೃತಿಯ ಮಟ್ಟದ ದೃಷ್ಟಿಯಿಂದ ಇನ್ನೊಂದು ನಮೂನೆಯ ಗ್ರಂಥಭಂಡಾರವು ಸೂಚ ನೀಯವಾಗಿದೆ. ಅದೆಂದರೆ ಕುಟುಂಬದ ಇಲ್ಲವೆ ವೈಯಕ್ತಿಕ ಗ್ರಂಥಭಂಡಾರವೆ. ಇಂತಹ ಪ್ರಯತ್ನಗಳು ನಮ್ಮ ದೇಶದಲ್ಲಿ ಅಪರಿಚಿತವಾಗಿರದಿದ್ದರೂ ಸದ್ಯದ ಪರಿಸ್ಥಿತಿಯಲ್ಲಿ ಅವು ಕಾಣುವದು ತೀರ ವಿರಳವಾಗಿದೆ. ಅಂತೆಯೆ ಆ ಬಗೆಯಲ್ಲಿ ಒಂದೆರಡು ಅವಶ್ಯಕ ಮಾತುಗಳನ್ನು ಇಲ್ಲಿ ಹೇಳುವದು ಅಪರಿಹಾರ್ಯ ವಾಗಿದೆ. ಗ್ರಂಥಾಲಯವು ಪ್ರಾಮುಖ್ಯವಾಗಿ ಪ್ರತಿಯೊಬ್ಬ ವ್ಯಕ್ತಿಯ ಬೇಡಿಕೆಯಂತೆ ಪುಸ್ತಕಗಳನ್ನು ಒದಗಿಸಿಕೊಡುವ ಮತ್ತು ಸಮಾಚಾರವನ್ನು ಪೂರೈಸುವ ಸಂಸ್ಥೆಯೊಂದಾಗಿದೆಯಷ್ಟೆ. ಅಲ್ಲಿ ಪ್ರತಿಯೊಬ್ಬ ವಾಚಕನಿಗೆ ತನ್ನ ಸಮಸ್ಯೆಯನ್ನು ಬಿಡಿಸಿಕೊಳ್ಳಲಿಕ್ಕೆ, ತನ್ನ ವ್ಯಾಸಂಗವನ್ನು ಮುಂದು ವರಿಸಲಿಕ್ಕೆ ಅಪಾರವಾದ ಸಾಧನಗಳು ದೊರೆಯುತ್ತಿವೆಯೇನೋ ನಿಜ. ಆದರೆ ತನ್ನದು ಎಂಬ ಒಂದು ವಿಷಯದಲ್ಲಿ ಮೂಲ ಮತ್ತು ಮುಖ್ಯವಾದ ಕೆಲವು ಗ್ರಂಥಗಳನ್ನಾದರೂ ಆತನು ತನ್ನ ಬಳಿಯಲ್ಲಿ ಸಂಗ್ರಹಿಸಿ ಇಟ್ಟು

ಕೊಳ್ಳದಿದ್ದರೆ ಆತನು ತನ್ನ ವೈಶಿಷ್ಟ್ಯವನ್ನೆ ಕಳೆದುಕೊಳ್ಳಬಹುದು. ಅಂತೆಯೆ ತನ್ನ ಬೌದ್ಧಿಕ ಮಟ್ಟವನ್ನು ಜಾಗ್ರತವಾಗಿ ಇರಿಸಿಕೊಳ್ಳಲಿಕ್ಕೂ ಪ್ರಸಂಗ ಬಂದಾಗ ತನ್ಮೂಲಕ ತನ್ನ ಸಾಂಸ್ಕೃತಿಕ ನಿಲುವೆಯನ್ನು ವ್ಯಕ್ತಗೊಳಿಸಲಿಕ್ಕೂ ಪ್ರತಿಯೊಬ್ಬ ನಾಗರಿಕನು ಚಿಕ್ಕದಾದರೂ ಚೊಕ್ಕಟವಾದ ಒಂದು ಸ್ವಕೀಯವಾದ ಗ್ರಂಥಸಂಚಯವನ್ನಿಟ್ಟುಕೊಂಡಿರಬೇಕು. ಅದರಲ್ಲಿ ತನ್ನ ಕುಟುಂಬದ ವಿಷಯವಾಗಿ ಇರುವ ಗ್ರಂಥಗಳು, ತನ್ನ ಭಾಷೆ, ತನ್ನ ಪ್ರದೇಶ, ತನ್ನ ಸಮಾಜ ಇವುಗಳ ಬಗೆಯಲ್ಲಿ ಬರೆದ ಗ್ರಂಥಗಳು, ತನ್ನ ಜನ, ತನ್ನ ದೇಶ, ಇವುಗಳ ಸ್ಥೂಲ ಕಲ್ಪನೆಯನ್ನಾದರೂ ಕೊಡುವಂತಹ ಸಮಾಚಾರವುಳ್ಳ ಗ್ರಂಥಗಳು ಸಮಾವೇಶವಾಗಿರುವದು ಸಾರ್ಥಕ ಎನಿಸಬಹುದು.

ಇದಿಷ್ಟು ಬಗೆಯ ಗ್ರಂಥಭಂಡಾರಗಳ ವರ್ಗಗಳನ್ನು ಮಾಡಿ ನೋಡಿದ ನಂತರ ಅವುಗಳ ವ್ಯವಸ್ಥೆ ಮತ್ತು ಅವುಗಳ ಸೇವೆ ಇವುಗಳ ಬಗೆಯಾಗಿ ಇನ್ನು ವಿವರವಾಗಿ ತಿಳಿದುಕೊಳ್ಳುವದು ಉಚಿತವೆನಿಸಬಹುದು. ಈ ದೃಷ್ಟಿಯಿಂದ ಅನುಕೂಲತೆಗಾಗಿ ಒಂದು ವ್ಯವಸ್ಥೆಯಲ್ಲಿ ಅಥವಾ ಸಂಘಟನೆಯಲ್ಲಿ ಬರಬಹುದಾದ ಕೆಲವು ಗ್ರಂಥಾಲಯುಗಳನ್ನು ಮೊದಲು ತೆಗೆದುಕೊಳ್ಳಬಹುದು. ಅದಕ್ಕೆ ನಾವು ತಾತ್ಪೂರ್ತಿಕವಾಗಿ ರಾಷ್ಟ್ರೀಯ ಗ್ರಂಥಭಂಡಾರ ವಿಧಾನ ( system ) ಎಂದು ಕರೆಯೋಣ. ಈ ವಿಧಾನದ ಅಂಗವಾಗಿ ಮೊದಲು ಬರುವದು ಕೇಂದ್ರ ಗ್ರಂಥಭಂಡಾರ; ಆ ಮೇಲೆ ಬರುವದು ಪ್ರಾಂತೀಯ ಗ್ರಂಥಭಂಡಾರ ವಿಧಾನಗಳು. ಆರಂಭಕ್ಕೆ ಕೇಂದ್ರ ಗ್ರಂಥಭಂಡಾರವೊಂದೆ ರಾಷ್ಟ್ರೀಯ ಗ್ರಂಥಭಂಡಾರ ವಿಧಾನದ ಆಡಳಿತದಲ್ಲಿ ಬರುವದರಿಂದ ಅದರ ಅಂತರ್ವ್ಯವಸ್ಥೆಯನ್ನು ಅಭ್ಯಸಿಸಬಹುದು.

ರಾಷ್ಟ್ರೀಯ ಗ್ರಂಥಭಂಡಾರವು ರಾಷ್ಟ್ರದಲ್ಲಿ ಮುದ್ರಿತವಾದ ಎಲ್ಲ ಪುಸ್ತಕಗಳನ್ನು ಪಡೆಯಬೇಕು. ಮತ್ತು ಸಂಗ್ರಹಿಸಿರಬೇಕು ಎಂಬುದು ಪ್ರಾಥಮಿಕ ಮಾತು. ಆದರೆ ಈ ಬಗೆಯಾಗಿ ಎಲ್ಲ ಪುಸ್ತಕಗಳನ್ನು ಆ ಸಂಸ್ಥೆಯು ಪಡೆಯುವವೆಂತು? ಸದ್ಯ ನಮ್ಮ ರಾಷ್ಟ್ರದಲ್ಲಿ ಆಚರಣೆಯಲ್ಲಿರುವ ೧೮೬೭ರ ಮುದ್ರಣಾಲಯ ಮತ್ತು ಪುಸ್ತಕನೋಂದಕ ಕಾಯದೆ ( ಅದರ ೧೯೫೪ರ ತಿದ್ದುಪಡೆ ಸಹಿತವಾಗಿ ) ಯನ್ನು ಈ ಭಂಡಾರದ ಸಲುವಾಗಿ ನಾವು ಸುಧಾರಿಸಿಕೊಳ್ಳಬಹುದು; ಸಾಧ್ಯವಾದರೆ ಒಂದು ವ್ಯಾಪಕವಾದ ಗ್ರಂಥಾಲಯ

ಶಾಸನವನ್ನೆ ಹೊಸದಾಗಿ ಕೇಂದ್ರ ಸಂಸತ್ತಿದಲ್ಲಿ ಸ್ವೀಕರಿಸಿಕೊಳ್ಳಬಹುದು. ಆ ಕಾಯದೆಯಂತೆ ಪುಸ್ತಕಗಳನ್ನು ಮುದ್ರಿಸುವ ಪ್ರತಿಯೊಂದು ಮುದ್ರಣ ಮಂದಿರದ ಒಡೆಯನಾಗಲಿ, ಅವುಗಳನ್ನು ಪ್ರಕಟಗೊಳಿಸುವ ಪ್ರತಿಯೊಬ್ಬ ಪ್ರಕಾಶಕನಾಗಲಿ ಅಂತಹ ಪುಸ್ತಕಗಳ ಎರಡು ಇಲ್ಲವೆ ಮೂರು ಪ್ರತಿಗಳನ್ನು ತಮ್ಮ ಜಿಲ್ಲೆಯ ಅಧಿಕಾರಿಗಾಗಲಿ, ನೇರವಾಗಿ ಪ್ರಾಂತೀಯ ಗ್ರಂಥಭಂಡಾರ ಕ್ಕಾಗಲಿ ಅಥವಾ ಕೇಂದ್ರ ಗ್ರಂಥಭಂಡಾರಕ್ಕಾಗಲಿ ಕಳಿಸುವಂತೆ ಏರ್ಪಾಡು ಮಾಡಬೇಕು. ಈ ಬಗೆಯ ಕಟ್ಟಳೆಯು ಈಗ ಮದರಾಸು ರಾಜ್ಯದಲ್ಲಿ ಆಗಳೆ ಅಸ್ತಿತ್ವದಲ್ಲಿರುವದಲ್ಲದೆ ದೆಹಲಿ, ಮುಂಬಯಿ ಮತ್ತು ಮಧ್ಯ ಭಾರತ ಗಳೆ ಮೊದಲಾದ ರಾಜ್ಯಗಳಲ್ಲಿ ಸರಕಾರದ ಕೆಲವು ಘೋಷಣೆಗಳ ಮೂಲಕ ಇದೇ ಬಗೆಯ ನಿಯಮಗಳನ್ನು ಸಂಬಂಧಪಟ್ಟ ಮುದ್ರಕರು ಮತ್ತು ಪ್ರಕಾಶ ಕರು ಪಾಲಿಸುವಂತೆ ಮಾಡಲಾಗಿದೆ.

ಹೀಗೆ ಸ್ವಾಮಿತ್ವದ ಶಾಸನವನ್ನು (Copyright Act ನ್ನು) ಮಾಡು ವದರಿಂದ ರಾಷ್ಟ್ರದ ಪುಸ್ತಕಸಂಪತ್ತು ನಿರಾಯಾಸವಾಗಿಯೂ, ವೆಚ್ಚ ವಿಲ್ಲದೆಯೂ, ಖಚಿತವಾಗಿಯೂ ರಾಷ್ಟ್ರೀಯ ಗ್ರಂಥಭಂಡಾರಗಳಿಗೆ ದೊರೆಯು ತ್ತದೆ. ಈ ಮಾರ್ಗದಿಂದ ಪಡೆದ ಪ್ರತಿಗಳಲ್ಲಿ ಒಂದನ್ನು ಕೇಂದ್ರ ಭಂಡಾರವು ತನ್ನಲ್ಲಿ ಇಟ್ಟುಕೊಳ್ಳಬಹುದು. ಒಂದನ್ನು ಪ್ರಾಂತೀಯ ಗ್ರಂಥಭಂಡಾರ ಗಳಿಗೆ ಕಳಿಸಬಹುದು. ಬಹುಭಾಷಾ ರಾಜ್ಯಗಳಾಗಿರುವ ಮುಂಬಯಿ, ಮದರಾಸು, ಹೈದರಾಬಾದ ಮತ್ತು ಮಧ್ಯಪ್ರದೇಶಗಳಂತಹ ರಾಜ್ಯಗಳಿಗೆ ಅಲ್ಲಿರುವ ಅಥವಾ ಇರಬಹುದಾದ ಪ್ರಾದೇಶಿಕ ಗ್ರಂಥಾಲಯಗಳಿಗೆ ಇನ್ನೊಂದು ಪ್ರತಿಯನ್ನು ತಾತ್ಪೂರ್ತಿಕವಾಗಿ ಕೊಡುವ ಸಿದ್ಧತೆಗಾಗಿ ಪಡೆಯ ಬಹುದು. ಭಾರತದಲ್ಲಿ ಭಾಷಾನ್ವಯ ಪ್ರಾಂತರಚನೆಯ ತತ್ವದ ಮೇರೆಗೆ ಪ್ರಾಂತಗಳ ಪುನರ್ನಿರ್ಮಾಣವಾಯಿತೆಂದರೆ ಈ ಕಾಯಿದೆಯ ಆಧಾರದಿಂದ ಕೇವಲ ಎರಡೇ ಪ್ರತಿಗಳನ್ನು ಪಡೆಯುವಂತೆ ನಿರ್ಧರಿಸಬಹುದು.

ಆ ಮೇಲೆ ಎರಡನೆಯದಾಗಿ ಕೇಂದ್ರ ಗ್ರಂಥಭಂಡಾರವು ಇನ್ನೊಂದು ಬಗೆಯ ಗ್ರಂಥಸಂಗ್ರಹ ಮಾಡುವದು ಅಗತ್ಯವೆನಿಸುತ್ತದೆ; ಅದೆಂದರೆ ಭಾರತದ ವಿಷಯವಾಗಿ ಬರೆದ ಮತ್ತು ಪ್ರಪಂಚದ ಯಾವುದೇ ದೇಶದಲ್ಲಿಂದ ಭಾರತೀಯರು ಬರೆದ ಎಲ್ಲ ಗ್ರಂಥಗಳ ಸಂಗ್ರಹ. ಈ ರೀತಿಯ ಸಂಗ್ರಹ

ವನ್ನು ಕೇಂದ್ರ ಗ್ರಂಥಭಂಡಾರದಲ್ಲಿ ಇಡುವದು ರಾಷ್ಟ್ರದ ದೃಷ್ಟಿಯಿಂದ ತುಂಬ ಉಪಯುಕ್ತವಾದುದು ಎಂದು ಹೇಳಬಹುದು. ಭಾರತೀಯರು ಬರೆದ ಮತ್ತು ಭಾರತದ ಬಗೆಯಾಗಿ ಬರೆದ ಪ್ರಪಂಚದೊಳಗಿನ ಎಲ್ಲ ಪುಸ್ತಕಗಳು ದೊರೆಯುವ ಸ್ಥಳವು ಸ್ವಾಭಾವಿಕವಾಗಿಯೆ ಈ ಕೇಂದ್ರ ಭಂಡಾರವಾಗ ಬೇಕು. ರಾಷ್ಟ್ರೀಯ ಚರಿತ್ರೆ, ರಾಷ್ಟ್ರಾಭಿಮಾನ ಮತ್ತು ಪ್ರಪಂಚದ ಇತಿಹಾಸ ದಲ್ಲಿ ಭಾರತೀಯರು ಪಡೆದ ಸ್ಥಾನ ಇವುಗಳ ಬಗೆಯಲ್ಲಿ ಈ ಸಂಗ್ರಹದೊಳ ಗಿನ ಪುಸ್ತಕಗಳ ಸಹಾಯದಿಂದ ಎಲ್ಲ ಸಮಾಚಾರವನ್ನು ಸಹಜವಾಗಿ ಪಡೆಯಬಹುದು. ಈ ರೀತಿಯಾಗಿ ಪುಸ್ತಕಗಳಿಗಷ್ಟೆ ಇದೊಂದು ಆಶ್ರಯ ಸ್ಥಾನವಾಗಿರಬೇಕು ಎಂದಲ್ಲ; ಪುಸ್ತಕ ಎಂದರೆ ಅದರಲ್ಲಿ ಪತ್ರಿಕೆ, ಲೇಖನ ಗಳೆ ಮೊದಲಾದ ಪ್ರತಿಯೊಂದು ಜ್ಞಾನಾರ್ಜನೆಯ ಸಾಧನದ ಸಮಾವೇಶ ವಾಗುತ್ತದೆ.

ಅದರಂತೆಯೆ ರಾಷ್ಟ್ರೀಯ ಗ್ರಂಥಭಂಡಾರವು ಪುಸ್ತಕಗಳ ಸಂಗ್ರಹದ ಮಟ್ಟಿಗೆ ಒಂದು ಕೇಂದ್ರವಾದಂತೆಯೆ ಗ್ರಂಥಾಲಯದ ತಾಂತ್ರಿಕ ಸೇವೆಯ ವಿಷಯವಾಗಿಯೂ ಅದು ಮುಖ್ಯ ಕಾರ್ಯಾಲಯವಾಗುವದು ಅವಶ್ಯಕ ಇರುತ್ತದೆ. ಅದರಲ್ಲಿಯೂ ವಿಶೇಷವಾಗಿ ಪುಸ್ತಕಗಳ ವರ್ಗೀಕರಣವನ್ನು ನಿಶ್ಚಯಿಸಿ, ಸ್ಥಿರಗೊಳಿಸುವದು; ಸೂಚಿಕಾಪಟ್ಟಿಗಳನ್ನು ಗೊತ್ತುಪಡಿಸಿ ಸಿದ್ಧಗೊಳಿಸುವದು; ಪತ್ರಿಕಾಲೇಖನಗಳನ್ನು ಸಂಗ್ರಹಿಸಿ ಅವುಗಳ ವರ್ಗೀಕೃತ ಪಟ್ಟಿಗಳನ್ನು ಮಾಡುವದು; ಲೇಖನಸಾರಗಳನ್ನು ಸಿದ್ಧಮಾಡಿ, ಅವುಗಳ ಪುಸ್ತಕಗಳನ್ನು ರಚಿಸುವದು—ಇಂತಹವೇ ಆದ ಶಾಸ್ತ್ರೀಯ ಕಾರ್ಯವನ್ನು ಕೇಂದ್ರ ಗ್ರಂಥಭಂಡಾರದಲ್ಲಿ ಮಾಡಬೇಕಷ್ಟೆ. ಅಲ್ಲದೆ ಬೇಡಿದವರಿಗೆ ಅವುಗಳ ಯಂತ್ರಮುದ್ರಿತ ಇಲ್ಲವೆ ಶಿಲಾಮುದ್ರಿತ ಪ್ರತಿಗಳನ್ನು ಒದಗಿಸಿಕೊಡುವದು ಅನುಕೂಲವೂ, ಉಪಯುಕ್ತವೂ ಆಗುವದೆಂಬಲ್ಲಿ ಸಂಶಯವಿಲ್ಲ. ಈ ವಿಷಯ ದಲ್ಲಿ ಹಿಂದೆ ಬಿದ್ದಿರುವ ನಮ್ಮ ದೇಶವು ಈ ರೀತಿಯ ಆಧುನಿಕ ಯೋಜನೆ ಗಳನ್ನು ಕಾರ್ಯಾಚರಣೆಗೆ ತಂದರೆ ಪ್ರಗತಿಯು ಶೀಘ್ರ ಮತ್ತು ಸಾರ್ವತ್ರಿಕ ಆಗಬಹುದು.

ನಮ್ಮ ರಾಷ್ಟ್ರದಲ್ಲಿ ಅಚ್ಚಾದ ಹೊತ್ತಿಗೆಗಳಷ್ಟೆ ಈ ಕೇಂದ್ರ ಭಂಡಾರ ದಲ್ಲಿ ಇರಬೇಕು ಎಂದಲ್ಲಿ, ಪ್ರತಿಯೊಂದು ವಿಷಯದ ಮೇಲೆ ಪ್ರಪಂಚದಲ್ಲಿ

ಎಷ್ಟು ಗ್ರಂಥಗಳನ್ನು ಪಡೆಯಲಿಕ್ಕೆ ಸಾಧ್ಯ ಮತ್ತು ಯುಕ್ತವಾಗಿರುವದೊ ಅವುಗಳನ್ನೆಲ್ಲ ಈ ಭಂಡಾರವು ಪಡೆದಿರಬೇಕು. ಆದರೆ ನಮ್ಮ ರಾಷ್ಟ್ರಕ್ಕೆ ಸಂಬಂಧಿಸಿದ ಪುಸ್ತಕನಿರ್ಮಾಣ ಎಷ್ಟಿರುವದೋ ಅಷ್ಟನ್ನು ಇಡಿಯಾಗಿ ನಾವು ಇಟ್ಟಿರಬೇಕು. ಇದಷ್ಟೆ ಅಲ್ಲದೆ ಮೇಲೆ ವಿವರಿಸಿದ ಶಾಸ್ತ್ರೀಯ ಸೇವೆಯಂತೆಯೆ ಕೇಂದ್ರ ಭಂಡಾರವು— ಈಗಿನ ಕಲ್ಕತ್ತೆಯಲ್ಲಿರುವ ರಾಷ್ಟ್ರೀಯ ಗ್ರಂಥಾಲಯವು ಮಾಡುತ್ತಿರುವಂತೆ—ವಿವಿಧ ವಿಷಯಗಳ ಮೇಲೆ ವಿಸ್ತೃತವಾದ ಗ್ರಂಥಸೂಚಿ (Bibliography) ಗಳನ್ನು ಸಿದ್ಧಗೊಳಿಸಬೇಕು. ಈ ಬಗೆಯ ಗ್ರಂಥ ಸೂಚಿಗಳನ್ನು ನಾಡಿನೊಳಗಿನ ಎಲ್ಲ ಹೊತ್ತಗೆಮನೆಗಳಿಗೂ ಮತ್ತು ಅವು ಗಳಿಗಾಗಿ ಬೇಡಿಕೆಯನ್ನು ಕಳಿಸಿದ ಪ್ರತಿಯೊಬ್ಬ ಯೋಗ್ಯ ವ್ಯಕ್ತಿಗೂ ಪೂರೈಸುವಂತೆ ವ್ಯವಸ್ಥೆಯನ್ನು ಈ ಭಂಡಾರವು ಮಾಡಬೇಕು. ಪ್ರಪಂಚ ದೊಳಗಿನ ಜ್ಞಾನದ ಬಹುಭಾಗವು ನಮ್ಮ ನಾಡಿನಲ್ಲಿ ಇದೊಂದೇ ಭಂಡಾರ ದಲ್ಲಿ ದೊರೆಯುವದರಿಂದ ಈ ಕೇಂದ್ರದಿಂದಲೇ ಆ ಪ್ರಕಾಶದ ವಿವಿಧಕಿರಣ ಗಳು ಹರಡುವದು ಸಮಂಜಸವೆನಿಸುವದು.

ಮೊದಲನೆಯದಾಗಿ ಸಂಗ್ರಾಹಕ ಕಾರ್ಯ; ಎರಡನೆಯದಾಗಿ ತಾಂತ್ರಿಕ ಸಹಾಯ. ಇದಾದ ಮೇಲೆ ಮೂರನೆಯದಾಗಿ ಯೋಜಕ ಕಾರ್ಯ ವನ್ನು ಈ ಗ್ರಂಥಭಂಡಾರವು ಯಾವ ಬಗೆಯಾಗಿ ಕೈಕೊಳ್ಳಬಹುದು ? ಈ ವಿಭಾಗದಲ್ಲಿ ಇಡಿಯ ರಾಷ್ಟ್ರಕ್ಕೆ ಕೇಂದ್ರ ಮತ್ತು ಎಲ್ಲ ರಾಜ್ಯಗಳಿಗೆ ಮುಖ್ಯ ಗ್ರಂಥಭಂಡಾರವು ಇದಾಗುವದರಿಂದ ರಾಷ್ಟ್ರದ ಎಲ್ಲ ಪ್ರಾಂತೀಯ ಮತ್ತು ಪ್ರಾದೇಶಿಕ ಗ್ರಂಥಾಲಯಗಳಿಗೆ ಇದೊಂದು ವಿನಿಮಯ ಸಂಸ್ಥೆ ಯಾಗಿ ಪರಿಣಮಿಸಬೇಕು. ರಾಜ್ಯದೊಳಗಿನ ಒಂದು ಗ್ರಂಥಭಂಡಾರದ ಓದುಗನಿಗೆ ಇನ್ನೊಂದು ರಾಜ್ಯದೊಳಗಿನ ಗ್ರಂಥಾಲಯದೊಳಗಿರುವ ಒಂದು ಪುಸ್ತಕ ಇಲ್ಲವೆ ಸಮಾಚಾರವು ಬೇಕಾದರೆ ಅದನ್ನು ಮೊದಲಿನ ಭಂಡಾರವು ಕೇಂದ್ರ ಭಂಡಾರದ ಮುಖಾಂತರವಾಗಿ ಪಡೆಯುವಂತೆ ಕೇಂದ್ರ ಭಂಡಾರವು ಸಂಪರ್ಕವನ್ನು ಬೆಳೆಯಿಸಿರಬೇಕು; ಸೌಕರ್ಯಗಳನ್ನು ಒದಗಿಸಿ ಕೊಡಬೇಕು. ಇಂತಹ ಕಾರ್ಯವು ವಿನಿಮಯದ ಕೇಂದ್ರ ಎಂದು ಮಾತ್ರ ಈ ಕೇಂದ್ರ ಭಂಡಾರದಿಂದ ಆಗಬೇಕಲ್ಲದೆ ಜಗತ್ತಿನ ಗ್ರಂಥಭಂಡಾರ ವ್ಯವಸ್ಥೆ ಯಲ್ಲಿ ಮಾಡಿಕೊಳ್ಳಬಹುದಾದ ವಿಶ್ವಗ್ರಂಥ ವಿನಿಮಯದ ವ್ಯವಸ್ಥೆಯಲ್ಲಿ

ನಮ್ಮ ಕೇಂದ್ರ ಗ್ರಂಥಭಂಡಾರವೂ ಒಂದು ಘಟಕವಾಗಿ ಸಹಕಾರ-ಸಹಾಯ-ವಿನಿಮಯಗಳನ್ನು ಮಾಡಬೇಕು. ಇದರಿಂದ ಭಾರತೀಯ ನಾಗರಿಕನು ತನ್ನ ದೇಶದೊಳಗಿನ ಗ್ರಂಥಗಳನ್ನಷ್ಟೆ ಬೇಕಾದಷ್ಟು ಸುಲಭವಾಗಿಯೂ ತೀವ್ರವಾಗಿಯೂ ಪಡೆಯುವನಲ್ಲದೆ, ಅನ್ಯದೇಶಗಳ ಭಂಡಾರಗಳಿಂದಲೂ ಇಂತಹ ಅನುಕೂಲತೆಯನ್ನು ಪಡೆಯುವನು; ಅನ್ಯದೇಶಗಳ ಪ್ರಜೆಗಳಿಗೂ ನಮ್ಮ ಕೇಂದ್ರ ಭಂಡಾರ್ರದಿಂದ ಈ ಸೇವೆಯು ಸಲ್ಲುವದು.

ಕೇಂದ್ರ ಭಂಡಾರದ ಆಶ್ರಯದಲ್ಲಿ ಜರುಗಬೇಕಾದ ಇನ್ನೊಂದು ಮಹತ್ವದ ಕಾರ್ಯವೇನೆಂದರೆ ಗ್ರಂಥಾಲಯ ಶಿಕ್ಷಣದ ಪ್ರಚಾರ. ಇದನ್ನು ಪ್ರತ್ಯಕ್ಷವಾಗಿ ಪುಸ್ತಕಗಳನ್ನು ಪ್ರಕಟಿಸಿಯಾಗಲಿ ಮಾಡಬಹುದು, ಇಲ್ಲವೆ ಅಪ್ರತ್ಯಕ್ಷವಾಗಿ ಶಿಕ್ಷಣವರ್ಗಗಳನ್ನು ನಡೆಯಿಸಿಯಾಗಲಿ ಕೈಕೊಳ್ಳಬಹುದು. ಗ್ರಂಥಾಲಯ ವಿಜ್ಞಾನದ ವರ್ಗಗಳೆಂದರೆ, ಇಲ್ಲಿ ಕೇವಲ ಸಾಮಾನ್ಯ ತರಗತಿಯ ಶಿಕ್ಷಣವನ್ನು ಮಾತ್ರ ಕೊಡದೆ, ಉಚ್ಚಶಿಕ್ಷಣಕ್ಕಾಗಿ ವಿಶೇಷ ವ್ಯವಸ್ಥೆಯುಳ್ಳವಾಗಿರಬೇಕು. ಒಮ್ಮೆ ಹೆಚ್ಚಿನ ಪರೀಕ್ಷೆಗಳನ್ನು ಕೊಟ್ಟು ಆ ಮೇಲೆ ವಿಷಯದ ವೈಶಿಷ್ಟ್ಯವನ್ನೆ ಮರೆತ ಜನರಿಗೆ ತಮ್ಮ ಜ್ಞಾನವನ್ನು ಪುನರ್ನವ ಮಾಡಿಕೊಳ್ಳುವದಕ್ಕೂ, ರಾಷ್ಟ್ರದ ಬೇರೆ ಬೇರೆ ಭಾಗಗಳಿಂದ ಬರುವ ಜ್ಞಾನಾರ್ಥಿಗಳಿಗೆ ಉಚ್ಚಶಿಕ್ಷಣ ಕೊಡುವದಕ್ಕೂ ಇಲ್ಲಿ ತಕ್ಕ ಏರ್ಪಾಡುಗಳನ್ನು ಮಾಡಬೇಕು.

ಇತ್ತ ಪ್ರಾಂತೀಯ ಗ್ರಂಥಭಂಡಾರ ವಿಧಾನಗಳ ಯೋಜನೆ ಮತ್ತು ರಚನೆಗಳು ತೀರ ಭಿನ್ನವಾಗಿರುತ್ತವೆ. ಈ ವಿಧಾನಗಳಲ್ಲಿ ಕೇವಲ ರಾಜ್ಯಕ್ಕೊಂದಾಗಲಿ, ಪ್ರದೇಶಗಳಿಗೆ ಒಂದೊಂದರಂತಾಗಲಿ ಮುಖ್ಯ ಗ್ರಂಥಭಂಡಾರಗಳನ್ನು ನಡೆಯಿಸುವದಲ್ಲದೆ, ರಾಜ್ಯದೊಳಗಿನ ಇಡಿಯ ಗ್ರಂಥಾಲಯ ಹಂದರವನ್ನೆ ನಿಯಂತ್ರಿಸುವ ಹೊಣೆಯು ಈ ವಿಧಾನದ ಮೇಲಿರುತ್ತದೆ. ಅಲ್ಲಲ್ಲಿಯ ಪರಿಸ್ಥಿತಿಗೆ ತಕ್ಕಂತೆ ಆ ಆ ರಾಜ್ಯದ ಗ್ರಂಥಭಂಡಾರ ವಿಧಾನದಲ್ಲಿ ನಾಲ್ಕು ಇಲ್ಲವೆ ಅಯ್ದು ಭಾಗಗಳಿರುತ್ತವೆ. ಭಾಷಾನುಗುಣ ಪ್ರಾಂತಗಳ ನಿರ್ಮಾಣವಾಗುವ ವರೆಗೆ ಬಹುಭಾಷಾ ರಾಜ್ಯಗಳಲ್ಲಿ ಐದು ಮತ್ತು ಪರಭಾಷಾ ರಾಜ್ಯಗಳಲ್ಲಿ ನಾಲ್ಕು ಹೀಗೆ ಈ ಆಡಳಿತದಲ್ಲಿ ಭಾಗಗಳಾಗುತ್ತವೆ. ಮೊದಲನೆಯದಾಗಿ ರಾಜ್ಯದ ಮುಖ್ಯ ಗ್ರಂಥಾಲಯ, ಅದಕ್ಕೆ ಬೇಕಾಗುವ ಆಡಳಿತದ

 

ಏರ್ಪಾಡು ಮತ್ತು ಅದರ ವ್ಯಾಪ್ತಿ ಹಾಗೂ ಸೇವೆ ಇವುಗಳನ್ನೊಳಗೊಂಡ ಭಾಗ; ಆ ಮೇಲೆ ಪ್ರಾದೇಶಿಕ ಗ್ರಂಥಾಲಯಗಳು; ಈ ನಮೂನೆಯ ಭಂಡಾರಗಳು ಕೇವಲ ಬಹುಭಾಷಾರಾಜ್ಯಗಳಲ್ಲಿ ಮಾತ್ರ ಕಂಡುಬರುತ್ತಿದ್ದು, ರಾಜ್ಯದೊಳಗೆ ಪ್ರಚಲಿತ ಇರುವ ಭಾಷೆಯು ಒಂದೊಂದು ಪ್ರದೇಶಕ್ಕೆ ಒಂದೊಂದರಂತೆ ಇಂತಹ ಪ್ರಾದೇಶಿಕ ಗ್ರಂಥಭಂಡಾರಗಳು ಬೇಕಾಗುತ್ತವೆ. ಮೂರನೆಯದಾಗಿ ಜಿಲ್ಲಾ ಗ್ರಂಥಭಂಡಾರ; ನಾಲ್ಕನೆಯದಾಗಿ ತಾಲೂಕು ಗ್ರಂಥಾಲಯಗಳು ಮತ್ತು ಕೊನೆಯದಾಗಿ ಗ್ರಾಮ ಅಥವಾ ಜನಪದ ಗ್ರಂಥ ಭಂಡಾರಗಳು. ಈ ಒಂದೊಂದು ತರಗತಿಯ ಗ್ರಂಥಾಲಯಕ್ಕೆ ಮೂರು ವಿಧದ ಕಾರ್ಯಕ್ಷೇತ್ರವಿರುತ್ತದೆ. ಮೊದಲನೆಯದಾಗಿ ಅವು ತಮ್ಮ ಅಂತ ರ್ವ್ಯವಸ್ಥೆಯನ್ನು ನೋಡಿಕೊಳ್ಳಬೇಕು; ಎರಡನೆಯದಾಗಿ ತಮ್ಮ ಪ್ರದೇಶದ ಆಡಳಿತದಲ್ಲಿರುವ ಬೇರೆ ಗ್ರಂಥಸಂಗ್ರಹಗಳನ್ನಾಗಲಿ, ಶಾಖೆಗಳನ್ನಾಗಲಿ ವಿಚಾರಿಸಿಕೊಳ್ಳಬೇಕು: ಮತ್ತು ಕೊನೆಯದಾಗಿ ಒಂದು ಭಾಗವಾಗಿರುವ ರಾಷ್ಟ್ರೀಯ ಗ್ರಂಥಭಂಡಾರ ವಿಧಾನದಲ್ಲಿ ತಾನು ಮಾಡಬೇಕಾದ ಕಾರ್ಯ ವನ್ನು ಅದು ನಿರ್ವಹಿಸಿಕೊಳ್ಳಬೇಕು. ಈ ತ್ರಿವಿಧಕಾರ್ಯಕ್ಕೆ ತಕ್ಕ ಸೌಕರ್ಯಗಳನ್ನು, ಸಂಪತ್ತನ್ನು ದೊರಕಿಸಿಕೊಡುವದು ಆ ಆ ರಾಜ್ಯದ ಹೊಣೆಯಾಗಿರುವದೇ ಎಲ್ಲಕ್ಕೂ ಹೆಚ್ಚು ಅನುಕೂಲವಾದ ಮಾತು.

ಇಂತಹ ಪ್ರಾಂತೀಯ ಆಡಳಿತಗಳು Authority) ಈಗ ಭಾರತದ ಕೇವಲ ಮೂರು ನಾಲ್ಕು ರಾಜ್ಯಗಳಲ್ಲಿ ಒಂದಿಲ್ಲೊಂದು ಬಗೆಯ ಅಧಿಕಾರ ವನ್ನು ಪ್ರಾಂತೀಯ ಸರಕಾರದಿಂದ ಪಡೆದು ಅಸ್ತಿತ್ವದಲ್ಲಿ ಇವೆ. ಮದ್ರಾಸಿನಲ್ಲಿ ಈ ವಿಷಯವಾಗಿ ಒಂದು ಕಾಯದೆಯು ಸ್ವೀಕೃತವಾಗಿದ್ದರೆ, ಮುಂಬಯಿ ಮತ್ತು ಮಧ್ಯಭಾರತಗಳಲ್ಲಿ ಕೇವಲ ಒಂದು ಆಡಳಿತವನ್ನು ನಿರ್ಮಿಸುವದ ಕ್ಕಾಗಿ ಸರಕಾರವು ನಿರ್ಣಯವನ್ನು ಮಾಡಿ ಘೋಷಣೆಗಳ ಮೂಲಕ ಸಾರಿರು ತ್ತದೆ. ಇಂತಹ ಆಡಳಿತಗಳ ಮೂಲಮಂತ್ರವೆಂದರೆ, ಸುಸಜ್ಜಿತ, ಅದ್ಯತನ ವಾದ ಮತ್ತು ಸಕಲಸೌಕರ್ಯಗಳುಳ್ಳ ಒಂದು ಗ್ರಂಥಾಲಯಶ್ರೇಣಿಯನ್ನು ಸ್ಥಾಪಿಸಿ ಅದರ ಮೂಲಕ ಜನರಿಗೆ ಪುಕ್ಕಟೆಯಾಗಿಯೂ ಅಲ್ಪಸಮಯ ದಲ್ಲಿಯೂ ಜ್ಞಾನಸದಾನವಾಗುವಂತೆ ಕ್ರಮಗಳನ್ನು ಕೈಕೊಳ್ಳುವದಾಗಿದೆ. ಆದರೆ ಈ ಬಗೆಯಾಗಿ ವ್ಯವಸ್ಥೆಯನ್ನು ಮಾಡುವದಕ್ಕೆ ಬಹಳ ಹಣವು

ಬೇಕಾಗುತ್ತದಷ್ಟೆ. ಮೂಲ ಮತ್ತು ಪ್ರಮುಖ ವಿಚಾರವಾದ, ಪುಕ್ಕಟೆಯಾಗಿ ಸೌಕರ್ಯಗಳನ್ನು ಒದಗಿಸುವ ವಿಷಯದಲ್ಲಿ ಮತ್ತು ಸರಕಾರದಿಂದ ಪಡೆಯು ಬೇಕಾದ ಸಹಾಯಧನದ ಬಗೆಯಾಗಿ ಅಲ್ಲಲ್ಲಿ ರೂಢಿಯಲ್ಲಿದ್ದ ಪ್ರಕಾರಗಳು ಬೇರೆಬೇರೆಯಾಗಿವೆ. ನಿಜವಾಗಿ ನೋಡಿದರೆ ಪುಕ್ಕಟೆಯಾಗಿ ದೊರೆಯು ಬೇಕಾದ ಈ ಗ್ರಂಥಾಲಯದ ಸೌಲಭ್ಯಗಳು ಅನಿರುದ್ಧವಾಗಿಯೂ ಅನಂತ ವಾಗಿಯೂ ನಡೆಯಬೇಕಾದರೆ ರಾಜ್ಯಸರಕಾರಗಳು ಆ ಕಾರ್ಯದ ಸಲುವಾಗಿ ಯೆಂದೇ ಒಂದು ಶುಲ್ಕವನ್ನು ಗೊತ್ತುಮಾಡಿ ಜನರಿಂದ ಹಣವನ್ನು ಸಂಗ್ರ ಹಿಸುವದು ಉತ್ತಮವಾದ ಮಾರ್ಗ. ಈ ಬಗೆಯ ಏರ್ಪಾಡು ಇಂಗ್ಲಂಡ್ ಮೊದಲಾದ ರಾಷ್ಟ್ರಗಳಲ್ಲಿ ಈಗ ನೂರಾರು ವರ್ಷಗಳಿಂದ ಜಾರಿಯಲ್ಲಿರುತ್ತದೆ. ಅದು ಒಂದು ವೇಳೆ ಹಳೆಯ ಪದ್ಧತಿ ಇಲ್ಲವೆ ಅಷ್ಟು ಸಮಂಜಸವಲ್ಲದ ರೀತಿ ಯೆನಿಸಿದರೆ, ಪ್ರತಿಯೊಂದು ರಾಜ್ಯದ ಸರಕಾರವು ತನ್ನ ಸಾಧಾರಣ ನಿಧಿ ಯೊಳಗಿಂದ (General Funds) ವಿದ್ಯಾವಿಭಾಗದ ಮೂಲಕ ಆಗಲಿ, ಸ್ಥಾನಿಕ ಸಂಸ್ಥೆಗಳ ವಿಭಾಗದ ಮೂಲಕ ಆಗಲಿ ಬೇರೆ ತೆಗೆದಿಟ್ಟು ಖರ್ಚು ಮಾಡುವದು ಇನ್ನೊಂದು ದಾರಿ. ಈ ದಾರಿಯ ಮೂಲಕ ಈಗ ಮುಂಬಯಿ ಯಲ್ಲಿ ಕಾರ್ಯವು ನಡೆದಿದೆಯೆಂದೆನ್ನಬಹುದು. ಆದರೆ ಮದರಾಸಿನಲ್ಲಿ ಗ್ರಂಥಭಂಡಾರಗಳನ್ನು ಸ್ಥಾಪಿಸುವ ಮತ್ತು ನಡೆಸುವ ಕೆಲಸಕ್ಕಾಗಿ ಬೇಕಾ ಗುವ ಹಣವನ್ನೆಲ್ಲ ಸಾಧ್ಯವಾದರೆ ವಂತಿಗೆ(Subscription)ಗಳ ಮೂಲಕ ಸಂಗ್ರಹಿಸಬೇಕು ಎಂಬ ಒಂದು ನಿಯಮವನ್ನು ಸೇರಿಸಿ, ಗ್ರಂಥಾಲಯ ಸೇವೆಯ ಮೂಲವಿಚಾರವನ್ನೂ, ಹೆಚ್ಚು ಅನುಕೂಲವಾದ ಮಾರ್ಗವನ್ನೂ ಕೂಡಿಸಿಯೆ ತ್ಯಜಿಸಿದ್ದಾರೆ. ಈ ಹಣದ ಪ್ರಯತ್ನವನ್ನು ಹೀಗೆ ಬಿಡಿಸುವ ದಾಗಲಿ, ಸ್ಥಳಿಕ ಸಂಸ್ಥೆಗಳಿಗೆ ಅವರ ಹೊಣೆಯನ್ನು ಬಿಟ್ಟುಬಿಡುವದಾಗಲಿ, ಪ್ರತಿಯೊಂದು ಗ್ರಂಥಾಲಯಕ್ಕೆ ತನ್ನ ವೆಚ್ಚದ ಹಣವನ್ನು ತಾನೇ ದೊರಕಿಸಿ ಕೊಳ್ಳಬೇಕು ಎಂದು ಹೇಳಿಬಿಡುವದಾಗಲಿ ಜ್ಞಾನಪ್ರಸಾರ ಕಾರ್ಯದಲ್ಲಿ ಉಪಯುಕ್ತವಾದ ಪದ್ಧತಿಯಲ್ಲ.

ಹಣದ ವಿಚಾರದ ನಂತರ ಮಾಡತಕ್ಕ ಇನ್ನೊಂದು ವಿಚಾರವೆಂದರೆ ಆಡಳಿತದ್ದು. ಪ್ರಾಂತೀಯ, ಪ್ರಾದೇಶಿಕ ಮತ್ತು ಜಿಲ್ಲೆಗಳಲ್ಲಿ ಸರಕಾರೀ ಆಡಳಿತವು ಮತ್ತು ಸ್ಥಾನಿಕ ಮಂಡಲಗಳ ಆಡಳಿತವು ಇರುವದೇನೊ ನಿಜ.

ಈ ಸಂಸ್ಥೆಗಳು ಜನರಿಂದಲೇ ನಿರ್ವಾಚಿತ ಆಗಿದ್ದು ಸಾರ್ವಜನಿಕ ಕಾರ್ಯವೆ ಅವುಗಳ ಉದ್ದೇಶವಾಗಿರುವದೇನೊ ಸರಿ. ಆದರೆ ಇವುಗಳಲ್ಲಿ ಈಗಾಗಲೆ ಬೆಳೆದು ನಿಂತಿರುವ ಕೃಷಿ, ಮಾರ್ಗನಿರ್ಮಾಣ, ವೈದ್ಯಕ ಸಹಾಯವೆ ಮೊದಲಾದ ಕಾರ್ಯವಿಭಾಗಗಳಲ್ಲಿ ಮತ್ತೆ ಈ ಗ್ರಂಥಾಲಯ ಸ್ಥಾಪನೆಯ ಕೆಲಸವನ್ನು ಅವರ ಮೇಲೆ ಹೇರುವದೆಂದರೆ ಅದು ಅಷ್ಟು ಯೋಗ್ಯವೂ ಎನಿಸಲಿಕ್ಕಿಲ್ಲ, ಫಲಪ್ರದವೂ ಆಗಲಿಕ್ಕಿಲ್ಲ; ಅಂತೆಯೆ ಆ ಆ ಭೌಗೋಲಿಕ ವಿಭಾಗಗಳಿಗೊಂದರಂತೆ ಸ್ವತಂತ್ರ ಅಸ್ತಿತ್ವದ ಒಂದು ಗ್ರಂಥಾಲಯ ಸಮಿತಿಯನ್ನು ನಿಯೋಜಿಸುವದು ಸರಿಯೆನಿಸಬಹುದು. ಈ ವಿಧಾನದ ಅಥವಾ ಆಡಳಿತದ ಕಾರ್ಯಸಮಿತಿಯು ಲೋಕನಿಯುಕ್ತವಾಗಿದ್ದು ಇದಕ್ಕೆ ಅಧಿಕಾರ ಮತ್ತು ಕಾರ್ಯಾಚರಣೆಯ ಮೂಲಸ್ಥಾನವು ಜನತೆಯೆ ಆಗಿರಬೇಕು. ಇಂತಹ ಸಮಿತಿಗಳಲ್ಲಿ ಶಾಸನಸಭೆಯ ಸದಸ್ಯರು, ಶಿಕ್ಷಣತಜ್ಞರು, ಲೇಖಕರು ಇವರೇ ಮೊದಲಾದವರ ಪ್ರತಿನಿಧಿಗಳಿದ್ದು ಗ್ರಂಥಭಂಡಾರಿಗನು ಆ ಸಮಿತಿಯ ನಿಮಂತ್ರಕನಾಗತಕ್ಕದ್ದು. ಸರಕಾರದಿಂದ ಪಡೆದ ಧನಸಹಾಯ ಮತ್ತು ಜನಸಾಮಾನ್ಯರಿಂದ ಪಡೆದ ಅಧಿಕಾರ ಇವುಗಳ ಮೂಲಕ ಇಂತಹ ಸಮಿತಿಗಳು ತಮ್ಮ ವಿಭಾಗದಲ್ಲೆಲ್ಲ ಉಚಿತವಾದ ಗ್ರಂಥಾಲಯಗಳನ್ನು ಸ್ಥಾಪಿಸಿ ನಡೆಯಿಸುವ ವ್ಯವಸ್ಥೆಯನ್ನು ಮಾಡಬೇಕು

ಆದರೆ ಪ್ರಾಂತೀಯ, ಪ್ರಾದೇಶಿಕ ಹಾಗೂ ಜಿಲ್ಲಾ ವಿಭಾಗಗಳಿಗೆ ಇಂತಹ ಸ್ವತಂತ್ರ ಸಮಿತಿಗಳ ಆವಶ್ಯಕತೆಯು ಇರುತ್ತದೆಂದು ಚಿಕ್ಕ ಮತ್ತು ಮೂಲ ಘಟಕಗಳಾದ ಗ್ರಾಮ ಗ್ರಂಥಾಲಯಗಳ ಅಥವಾ ಜನಪದ ಗ್ರಂಥಾಲಯಗಳ ವಿಭಾಗಕ್ಕೂ ಇಂತಹವೇ ಆದ ಸಮಿತಿಗಳು ರಚಿಸಲ್ಪಡಬೇಕು ಎಂಬ ಮಾತು ಸದ್ಯದ ನಮ್ಮ ರಾಜಕೀಯ ಮತ್ತು ಶೈಕ್ಷಣಿಕ ದೃಷ್ಟಿಯಿಂದ ಅಷ್ಟೊಂದು ಸಯುಕ್ತಿಕ ಎನಿಸಲಾರದು. ಸದ್ಯದಲ್ಲಿ ಅಲ್ಲಿ ಕಾರ್ಯ ಮಾಡುತ್ತಿದ್ದ ಜನಪದಸಭೆಗಳಾದ ಗ್ರಾಮ ಪಂಚಾಯತಿಗಳಿಗೆ ತಮ್ಮ ತಮ್ಮ ಭಾಗದ ಗ್ರಂಥಾಲಯಗಳನ್ನು ನೋಡಿಕೊಳ್ಳುವ ಹೊಣೆಯನ್ನು ವಹಿಸಿಕೊಡಬೇಕು. ಮೊದಲಾಗಿ ಹಳ್ಳಿಯ ಕಡೆಗಳಲ್ಲಿ ಗ್ರಂಥಾಲಯ, ಗ್ರಂಥಾಲಯ ವಿಜ್ಞಾನ ಮತ್ತು ಗ್ರಂಥಾಲಯ ಚಳುವಳಿ ಈ ವಿಷಯವಾಗಿ ಸಾಕಷ್ಟು ಸಮಾಚಾರವಿರುವದಿಲ್ಲ; ಆಮೇಲೆ ಇದ್ದ ನಾಲ್ಕು ಜನರು ಗ್ರಾಮ ಪಂಚಾಯತಿ,

ಸಹಕಾರೀ ಸಂಘ ಮೊದಲಾದ ಸಂಸ್ಥೆಗಳ ಕಾರ್ಯಕ್ಕೆ ಅಗತ್ಯವಾಗಿರುತ್ತಾರೆ. ಹೀಗೆ ಶಿಕ್ಷಿತ ಮತ್ತು ಅನುಭವಿಕ ಜನರು ಕಡಿಮೆ ಇರುವಾಗ ಕೇವಲ ಅಧಿಕಾರವನ್ನು ಸವಿಯುವದಕ್ಕೆಂದು ಬೇರೆ ಸದಸ್ಯರ ಇಂತಹದೊಂದು ಸ್ವತಂತ್ರವಾದ ಸಂಘಟನೆಯನ್ನು ನಿರ್ಮಿಸುವದು ಸದ್ಯದ ಪರಿಸ್ಥಿತಿಯಲ್ಲಿ ಜಾಣತನವೆನಿಸುವದಿಲ್ಲ ಎಂಬ ಮಾತನ್ನು ನಾವು ಗಮನಿಸಬೇಕು.

ಗ್ರಾಮ ಗ್ರಂಥಭಂಡಾರಗಳು, ಜಿಲ್ಲಾ ಗ್ರಂಥಾಲಯ ವ್ಯವಸ್ಥೆ, ಪ್ರಾದೇಶಿಕ ಗ್ರಂಥಾಲಯ ಸಮಿತಿ, ಪ್ರಾಂತೀಯ ಗ್ರಂಥಭಂಡಾರ ಆಡಳಿತಗಳಿಗೆ ಗ್ರಂಥಸಂಗ್ರಹ, ಗ್ರಂಥಸೂಚಿಕೆಯ ಕಾರ್ಯ, ತಾಂತ್ರಿಕ ಸೇವೆ, ಮತ್ತು ಅಂತರ ಗ್ರಂಥಾಲಯ ಸೌಲಭ್ಯಗಳ ವಿಷಯವಾಗಿ ಒಂದೇ ಬಗೆಯ ಕಾರ್ಯಕ್ರಮಗಳಿದ್ದರೂ ಪ್ರಾದೇಶಿಕ ಮತ್ತು ಪ್ರಾಂತೀಯ ಗ್ರಂಥಾಲಯಗಳಿಗೆ ಒಂದೆರಡು ವಿಶಿಷ್ಟ ತರಗತಿಯ ಕೆಲಸಗಳೂ ಇರುತ್ತವೆ. ಅದರಲ್ಲಿ ಅಂಗಹೀನರ ಸಲುವಾಗಿ ಮತ್ತು ನೌಕಾದಳದವರ ಸಲುವಾಗಿ ವಿಶಿಷ್ಟ ಗ್ರಂಥ ಮತ್ತು ಇತರ ಜ್ಞಾನಾರ್ಜನೆಯ ಸಾಧನಗಳ ಸಂಗ್ರಹವನ್ನು ಇಡುವದು ಪ್ರಮುಖವಾಗಿದೆ. ನಮ್ಮ ನೌಕಾದಳವೆ ಆಗಲಿ, ಬೇರೆ ರಾಷ್ಟ್ರದ ನೌಕಾದಳವೆ ಆಗಲಿ ಒಮ್ಮೆ ಒಂದು ದೇಶದ ತೀರವನ್ನು ದಾಟಿದವೆಂದರೆ ಮುಂದೆ ಮತ್ತೊಂದು ದೇಶದ ದಂಡೆಯನ್ನು ತಲುಪುವ ವರೆಗೆ ಅವುಗಳಿಗೆ ಪುಸ್ತಕಗಳ ಸೌಕರ್ಯವು ದೊರೆಯುವದೇ ಇಲ್ಲ; ಅವರಂತೆಯೆ ಹಡಗುಗಳಲ್ಲಿ ಪ್ರಯಾಣ ಮಾಡುವ ಪ್ರವಾಸಿಗರಿಗೂ ಅದೇ ಬಗೆಯ ಅನಾನುಕೂಲತೆಯನ್ನು ಎದುರಿಸಬೇಕಾಗುತ್ತದೆ. ಅಂತರ್ರಾಷ್ಟ್ರೀಯ ಪ್ರದೇಶವೆನ್ನಿಸುವ ಸಾಗರಗಳ ಮೇಲೆ ಅವರಿದ್ದಾಗ್ಗೆ ಅವರಿಗೆ ವಾಚನಸೌಕರ್ಯಗಳನ್ನು ಒದಗಿಸಲಿಕ್ಕೆಂದೇ ಒಂದು ಗ್ರಂಥಾಲಯವನ್ನು ಏರ್ಪಡಿಸಬೇಕಾಗುವದು; ಇದಕ್ಕೆ ನೌಕಾದಳದ ಅಥವಾ ಸಮುದ್ರ ಪ್ರಯಾಣಿಕರ ಗ್ರಂಥಭಂಡಾರ ಎಂದೆನ್ನಬಹುದು. ಈ ಪಂಗಡದಲ್ಲಿ ದೇಶದ ವಿವಿಧ ಭಾಷೆಗಳ ಜನರು ಇರುತ್ತಿದ್ದರೂ, ವೆಚ್ಚ ಮತ್ತು ಸಮಾನ ಅನುಕೂಲತೆಯ ದೃಷ್ಟಿಯಿಂದ ರಾಷ್ಟ್ರಭಾಷೆಯಲ್ಲಿ ಮತ್ತು ಅಂತರ್ರಾಷ್ಟ್ರೀಯ ಭಾಷೆಯಲ್ಲಿ ತಕ್ಕಮಟ್ಟಿಗೆ, ಪುಸ್ತಕಗಳನ್ನು ಸಂಗ್ರಹಿಸುವದು ಸಾಧ್ಯವಾಗಬಹುದು. ಆದರೆ ಇವುಗಳ ವಿತರಣೆಗಾಗಿ ರಾಷ್ಟ್ರೀಯ ಗ್ರಂಥಭಂಡಾರವು ಹೊಣೆಗಾರ ಆಗಿರದೆ ಕಡಲಂಚಿನ ಪ್ರಾಂತಗಳಿಗೆ ಈ ಕಾರ್ಯವನ್ನು ಒಪ್ಪಿಸು

ವದು ಸಮಂಜಸ ಎನಿಸುವದು. ಅಂತೆಯೆ ನಮ್ಮ ದೇಶದಲ್ಲಿ ಗುಜರಾತ, ಮಹಾರಾಷ್ಟ್ರ, ಕರ್ನಾಟಕ, ಕೇರಳ, ತಮಿಳನಾಡು, ಆಂಧ್ರದೇಶ, ಓಡಿಸಾ ಮತ್ತು ಬಂಗಾಲಗಳ ಪ್ರಾಂತೀಯ ಗ್ರಂಥಭಂಡಾರಗಳು ಈ ಕರ್ತವ್ಯವನ್ನು ವಹಿಸಿಕೊಳ್ಳಬೇಕಾಗುವದು.

ಇನ್ನೊಂದು ಕರ್ತವ್ಯವಾದ ಅಂಗಹೀನರ ಸೌಕರ್ಯಗಳ ನಿರ್ಮಾಣ; ಹಣದ ದೃಷ್ಟಿಯಿಂದ ಇದನ್ನು ಕೇಂದ್ರ ಗ್ರಂಥಭಂಡಾರದ ಹೊಣೆಯನ್ನಾಗಿ ಮಾಡಿದರೂ ಪ್ರತ್ಯಕ್ಷ ಕಾರ್ಯಾಚರಣೆಯ ಸಲುವಾಗಿ ಈ ಕೆಲಸವನ್ನು ಪ್ರಾಂತೀಯ ಗ್ರಂಥಭಂಡಾರಗಳಿಗೇ ಒಪ್ಪಿಸಬೇಕಾಗುವದು. ಅಂಗಹೀನರಿಗೆ ವಿದ್ಯಾದಾನ ಮಾಡುವದಕ್ಕಾಗಿ ವಿಶಿಷ್ಟ ಸಂಕೇತಗಳ ಭಾಷೆ ಮತ್ತು ಸಾಧನ ಗಳು ಇಂದು ದೊರೆಯುತ್ತಿದ್ದರೂ ಅವುಗಳ ಆವಿಷ್ಕರಣವಾಗುವದು ಪ್ರಾಂತೀಯ ಭಾಷೆಗಳ ಮೂಲಕವೆ ಆಗಿರುವದರಿಂದ ಈ ಕೆಲಸಕ್ಕೆ ಪ್ರಾಂತೀಯ ಗ್ರಂಥಾಲಯಗಳೆ ಹೆಚ್ಚು ಯೋಗ್ಯ ಎಂಬ ಮಾತು ಒಪ್ಪ ಬೇಕಾದುದು.

ಗ್ರಂಥಸಂಗ್ರಹ ಮತ್ತು ಗ್ರಂಥವಿತರಣೆಯ ದೃಷ್ಟಿಯಿಂದ ಮೇಲ್ಕಾಣಿ ಸಿದ ಎರಡು ಕಾರ್ಯಗಳಂತೆಯೆ ಶಿಕ್ಷಣಪ್ರಸಾರ ಮತ್ತು ಸಹಾಯಕರ ಪೂರೈಕೆಯ ದೃಷ್ಟಿಯಿಂದ ಗ್ರಂಥಾಲಯ ವಿಜ್ಞಾನದ ವರ್ಗಗಳನ್ನು ನಡೆ ಯಿಸುವದೂ ಪ್ರಾಂತೀಯ ಇಲ್ಲವೆ ಪ್ರಾದೇಶಿಕ ಗ್ರಂಥಾಲಯದ ಸೊತ್ತೇ ಆಗಿರುತ್ತದೆ. ಗ್ರಂಥಭಂಡಾರಗಳು ನೂರಾರುಗಟ್ಟಲೆಯಾಗಿ ಪ್ರಾಂತದಲ್ಲಿ ಹುಟ್ಟಿತೊಡಗಿದ ಕೂಡಲೆ ಮೊದಲು ನಾವು ಎದುರಿಸುವ ಸಮಸ್ಯೆಯೆಂದರೆ ಭಂಡಾರಿಗರದು. ವ್ಯವಸ್ಥೆಗಾಗಿ ಸಾರ್ವಜನಿಕ ಕಾರ್ಯಕರ್ತ್ಯರುಗಳು ಒಂದು ವೇಳೆ ದೊರೆಯುಬಹುದು; ಆರ್ಥಿಕ ಸಹಾಯವನ್ನಂತೂ ರಾಜ್ಯದ ಸರಕಾರ ದಿಂದಲೇ ಪಡೆಯಲಾಗುತ್ತದೆ; ಪುಸ್ತಕಗಳ ಕೊರತೆಯೆಂಬ ಈಗಿನ ತೊಂದ ರೆಯು ಕೂಡ ಅಲ್ಪಕಾಲದಲ್ಲಿಯೆ ದೂರ ಆಗಬಹುದು; ಉಪದೇಶಕ್ಕಂತೂ ಬೇಕಾದಷ್ಟು ಜನರು ಮುಂದಾಗುವರು. ಆದರೆ ನಿರೂಪಿಸಿದ ಕೆಲಸವನ್ನು ದಕ್ಷತೆಯಿಂದಲೂ ಪ್ರೀತಿಯಿಂದಲೂ ಮಾಡುವ ಜನರು ದೊರೆಯುವದು ಕಠಿಣ ವಾಗುತ್ತದೆ. ಆದರಲ್ಲಿಯೂ ಗ್ರಂಥವಿಜ್ಞಾನದಂತಹ ವಿಶಿಷ್ಟವಾದ ವಿಷಯ ವನ್ನು ಕಲಿತವರಾಗಿರಬೇಕು; ಸಾರ್ವಜನಿಕ ಸಂಸ್ಥೆಗಳಲ್ಲಿ ಸೇವೆಯನ್ನು

ಸಲ್ಲಿಸುವ ಸೌಜನ್ಯ ಮತ್ತು ಉತ್ಸಾಹಗಳುಳ್ಳವರಾಗಿರಬೇಕು; ಹತ್ತಾರು ಜನ ಕಾರ್ಯಸಮಿತಿಯ ಸದಸ್ಯರನ್ನು ಅನುಸರಿಸಿಕೊಂಡು, ಸಹಕರಿಸಿ ಕೊಂಡು ಹೋಗುವ ವಿಶಾಲದೃಷ್ಟಿ ಮತ್ತು ಅನುಭವವುಳ್ಳವರಾಗಿರಬೇಕು. ಅಂತೆಯೆ ಇಂತಹ ಭಂಡಾರಿಗರ ಒಂದು ಪಡೆಯನ್ನೆ ನಿರ್ಮಿಸುವದಕ್ಕಾಗಿ ಪ್ರಾಂತೀಯ ಗ್ರಂಥಭಂಡಾರವಾಗಲಿ, ಪ್ರಾಂತೀಯ ಗ್ರಂಥಾಲಯ ಸಂಘ ವಾಗಲಿ ಯೋಗ್ಯವಾದ ಸಂಸ್ಥೆ. ಆ ಸಂಸ್ಥೆಯಲ್ಲಿ ಆ ಸ್ಥಳದಲ್ಲಿ ಗ್ರಂಥಾಲಯದ ವಿವಿಧ ಪ್ರತ್ಯಕ್ಷ ಮತ್ತು ವ್ಯಾಪಕ ಕಾರ್ಯವು ಜರುಗುತ್ತಿರುವದರಿಂದ ಅಲ್ಲಿ ಕೇವಲ ಗ್ರಾಂಥಿಕ ಶಿಕ್ಷಣವನ್ನಷ್ಟೆ ಅಲ್ಲದೆ ಪ್ರತ್ಯಕ್ಷ ಅನುಭವವನ್ನು ಪಡೆಯ ಲಿಕ್ಕೂ ಸಾಧ್ಯವಾಗುವದು.

ಭೌಗೋಲಿಕ ಕ್ಷೇತ್ರ ಮತ್ತು ಆಡಳಿತದ ನಿಯಂತ್ರಣ ಈ ದೃಷ್ಟಿಯಿಂದ ನಾವು ಇಲ್ಲಿಯವರೆಗೆ ಕೆಲವು ಗ್ರಂಥಭಂಡಾರಗಳ ರಚನೆಯನ್ನು ನೋಡಿದರೆ ಇನ್ನು ಮುಂದೆ ಸಮಸ್ಯೆಗಳ ಸಮಾನತೆ ಮತ್ತು ಆಡಳಿತದ ದೃಷ್ಟಿಯಿಂದ ಗ್ರಂಥಾಲಯವು ಬೇರೆ ಒಂದು ಸಂಸ್ಥೆಯ ಭಾಗವಾಗಿರಬೇಕಾದ ಪ್ರಸಂಗ, ಇವುಗಳ ವೈಶಿಷ್ಟ್ಯದ ಪ್ರಕಾರ ಬೇರೆ ಕೆಲವು ಗ್ರಂಥಭಂಡಾರಗಳನ್ನು ಪರೀಕ್ಷಿಸ ಬಹುದು. ಈಬಗೆಯ ಸಂಸ್ಥೆಗಳಲ್ಲಿ ಶಾಲೆ, ಮಹಾವಿದ್ಯಾಲಯ ಮತ್ತು ವಿಶ್ವ ವಿದ್ಯಾಲಯಗಳು ಒಂದು ಗುಂಪಿನಲ್ಲಿ ಬಿದ್ದರೆ, ವಿವಿಧ ವ್ಯವಸಾಯಗಳ ಗ್ರಂಥಭಂಡಾರಗಳು ಇನ್ನೊಂದು ಪಂಗಡದಲ್ಲಿ ಬರುತ್ತವೆ. ಅವುಗಳಂತೆಯೆ ಸಂಗೀತದ ಇಲ್ಲವೆ ಬೇರೆ ಧ್ವನಿಮುದ್ರಿಕೆಗಳ ಸಂಗ್ರಹಗಳು ಆ ಆ ಸಂಸ್ಥೆಗಳ ಅಂಗವಾಗಿರುತ್ತವೆ, ಮತ್ತು ಹಸ್ತಪ್ರತಿಗಳಾಗಲಿ, ಭೂಪಟಮಾಲೆಗಳು ಮೊದಲಾದ ವಸ್ತುಗಳಾಗಲಿ ವಸ್ತುಸಂಗ್ರಹಾಲಯದ ಅಥವಾ ಅನ್ಯಸಂಸ್ಥೆಗಳ ಉಪಾಂಗಗಳಾಗಿರುತ್ತವೆ. ಅಂತೆಯೆ ಈ ಬಗೆಯ ಗ್ರಂಥಾಲಯಗಳ ವ್ಯವಸ್ಥೆಯು ಅವುಗಳ ಮೂಲಸಂಸ್ಥೆಗಳನ್ನು ಅವಲಂಬಿಸಿರುವದರಿಂದ, ಆ ಚೌಕಟ್ಟಿನಲ್ಲಿರುವ ಗ್ರಂಥಭಂಡಾರಗಳ ಘಟನೆ ಮತ್ತು ಆಡಳಿತಗಳು ಹೇಗಿರಬೇಕು ಎಂಬುದನ್ನು ಇದೀಗ ನಾವು ಬೇರೆಯಾಗಿಯೆ ನೋಡ ಬೇಕಾಗಿದೆ.

ಶಾಲಾಗ್ರಂಥಭಂಡಾರಗಳು ಎರಡೊಂದು ಬಗೆಯಲ್ಲಿ ರೂಪಗೊಂಡಿರ ಬಹುದು. ಸದ್ಯ ಪ್ರತಿಯೊಂದು ಶಾಲೆಯ ವರ್ಗವಲ್ಲಿಯೂ ಆ ಆ ವರ್ಗದಲ್ಲಿ

ಕಲಿಸುವ ವಿಷಯುಗಳ ಮೇಲೆ ಪಾಠಕ್ರಮುವನ್ನೆ ಅನುಸರಿಸಿದೆ ಆದರೂ ಪಾಠ ಕ್ರಮದ ಸೀಮೆಯಿಂದ ಹೊರಗೆ ಬರಬಹುದಾದ ಗ್ರಂಥಗಳು ಆ ವರ್ಗದ ಗ್ರಂಥಾಲಯುವೂ, ಇಡಿಯ ಶಾಲೆಯ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರಿಗೆಲ್ಲ ಉಪಯೋಗವಾಗುವಂತಹ ಎಲ್ಲ ಪಠ್ಯವಿಷಯುಗಳಷ್ಟೆ ಅಲ್ಲದೆ ಅನ್ಯ ಮನರಂಜಕ ಮತ್ತು ಬುದ್ಧಿಚಾಲಕ ಪುಸ್ತಕಗಳ ಸಂಗ್ರಹವೂ ಒಂದು ಸ್ವತಂತ್ರವಾಗಿಯೆ ಕಾಣುವ ಸ್ಥಿತಿಯಲ್ಲಿ ಇರಬಹುದು. ಈ ಬಗೆಯು ಗ್ರಂಥ ಸಂಗ್ರಹಗಳು ಏರ್ಪಟ್ಟಿದ್ದರೂ ಕೂಡ ಅವುಗಳಿಗೆ ಸ್ವತಂತ್ರವಾದ ಆಡಳಿತ ವಾಗಲಿ ಅಸ್ತಿತ್ವವಾಗಲಿ ಇರುವದಿಲ್ಲ. ಅವುಗಳು ಶಾಲೆಯು ಕಲಾಶಾಲೆ, ಪ್ರಯೋಗಶಾಲೆ, ವ್ಯಾಯಾಮುಶಾಲೆಗಳಂತಹ ವಿವಿಧ ವಿಭಾಗಗಳ ಹಾಗೆಯೆ ಬೇರೆ ಒಂದು ವಿಭಾಗವಾಗಿರುವವು. ಇಷ್ಟಿದ್ದರೂ ಕೂಡ ಮತ್ತು ಗ್ರಂಥ ಭಂಡಾರಗಳು ಶಾಲೇತರ ಶಿಕ್ಷಣಕ್ಕೆ—ಅಂದರೆ ವಿದ್ಯಾರ್ಥಿಗಳ ಸಾಮಾನ್ಯ ಜ್ಞಾನದ ವಿಕಾಸಕ್ಕೆ—ಅತ್ಯವಶ್ಯ ಎಂಬ ಮಾತನ್ನು ಎಲ್ಲರೂ ಮನಗಂಡಿದ್ದರೂ ಗ್ರಂಥಭಂಡಾರವು ಶಾಲೆಯ ಒಂದು ವಿಶಿಷ್ಟ ವಿಭಾಗವಾಗಿದ್ದಲ್ಲಿಯೆ ಆಗಲಿ ವರ್ಗಕ್ಕೊಂದರಂತೆ ಉಪಗ್ರಂಥಾಲಯುಗಳನ್ನು ನಿರ್ಮಿಸಿಕೊಂಡಿರುವಾಗ ಆಗಲಿ ಗ್ರಂಥಭಂಡಾರದ ವಿಷಯುವಾಗಿ ಕೆಲವು ಮೂಲವಿಚಾರಗಳನ್ನು ಆಚರಣೆಯಲ್ಲಿ ತರದೆ ಇದ್ದುದೊಂದು ಇಂದು ನಮ್ಮ ದೇಶದೊಳಗಿನ ಪ್ರತಿಯೊಂದು ಶಾಲೆಯಲ್ಲಿಯೂ ಸಾಮಾನ್ಯವಾಗಿ ಕಂಡುಬರುವ ನ್ಯೂನತೆಯಾಗಿದೆ ಗ್ರಂಥಗಳನ್ನು ಕೊಳ್ಳುವಾಗ್ಗೆ, ಅವುಗಳನ್ನು ಪಡೆದ ಮೇಲೆ ಅವುಗಳನ್ನು ಸರಿಯಾಗಿ ಹಂಚುವ ಉದ್ದೇಶದಿಂದ ತಜ್ಞ ಜನರ ಕೈಯಿಂದ ಆ ಕಾರ್ಯವನ್ನು ಮಾಡಿಸದೆ ಇದ್ದುದೆ ಅಂತಹ ಒಂದು ಕೊರತೆ. ತಮ್ಮ ಉಪಾಧ್ಯಾಯ ವರ್ಗದಲ್ಲಿ ಒಬ್ಬರಾದರೂ ಗ್ರಂಥಾಲಯು ವಿಜ್ಞಾನವನ್ನು ತಿಳಿದವರಾಗಿರುವಂತೆ ಪ್ರತಿಯೊಂದು ಶಾಲೆಯು ಪ್ರಯತ್ನ ಮಾಡುವದು ತಡವಾಗಿದ್ದರೂ ಈಗ ತೀವ್ರವಾಗಿ ಮಾಡಬೇಕಾದುದಾಗಿದೆ. ಅದರಂತೆಯೆ ನಿಜವಾಗಿಯೂ ಗ್ರಂಥಭಂಡಾರದ ವ್ಯವಸ್ಥೆ ಮತ್ತು ಹೊಣೆಯಲ್ಲಿ ಇರಬೇಕಾದ ಮಾಯಾದೀಪವನ್ನು, ಅದು ವಿಜ್ಞಾನದ ವಿಷಯುಗಳಿಗೆ ಸಂಬಂಧಪಟ್ಟಿರುವದೆಂಬ ಕಾರಣದಿಂದ ಪ್ರಯೋಗಶಾಲೆಯಲ್ಲಿಯೂ ಭೂಪಟಗಳೆ ಮೊದಲಾದ ವಸ್ತುಗಳು ಯಾರಿಗೂ ಹೆಚ್ಚು ಸಂಬಂಧವಿರದ್ದರಿಂದ ಅವುಗಳನ್ನು ಶಿಕ್ಷಕರ

ಕೋಣೆಯಲ್ಲಾಗಲಿ, ಮುಖ್ಯಾಧ್ಯಾಪಕರ ಕಚೇರಿಯಲ್ಲಾಗಲಿ ಇಡುವದು ವಾಡಿಕೆಯಾಗಿದೆ. ಆದರೆ ಶಿಕ್ಷಣದ ಸಾಧನಗಳಾಗಿದ್ದು ಗ್ರಂಥಭಂಡಾರದಲ್ಲಿ ಇರುವದರಿಂದ ಎಲ್ಲರಿಗೂ ಹೆಚ್ಚು ಪ್ರಯೋಜಕವಾಗಬಹುದು ಎಂಬ ಅಂಶ ವನ್ನು ನಾವಿನ್ನೂ ಮನಗಾಣಬೇಕಾಗಿದೆಯೊ ಏನೊ! ಇತ್ತ ಪ್ರತಿಯೊಂದು ಶಾಲೆಯು ಜ್ಞಾನಕೋಶಗಳು, ಶಬ್ದಕೋಶಗಳು, ಚಿತ್ರಸಂಪುಟಗಳೆ ಮೊದಲಾದ ಸಾಧನಗಳುಳ್ಳ ಒಂದು ಸುವ್ಯಸ್ಥಿತವಾದ ಗ್ರಂಥಾಲಯವನ್ನು ಮಾಡಿಕೊಳ್ಳಬೇಕು, ಅದನ್ನು ತಜ್ಞ ಜನರಿಂದ ನಡೆಯಿಸಬೇಕು, ಅದಕ್ಕೆ ಪ್ರತಿವರ್ಷ ಕೆಲವೊಂದು ಪ್ರಮಾಣದಲ್ಲಿ ಆದರೂ ಹಣವನ್ನು ವೆಚ್ಚಮಾಡಿ ಹೆಚ್ಚು ಪುಸ್ತಕಗಳನ್ನು ಸೇರಿಸಬೇಕು ಎಂಬ ಸಾಮಾನ್ಯ ವಿಷಯಗಳನ್ನು ಇಲ್ಲಿ ಈಗ ಸವಿಸ್ತಾರವಾಗಿ ಹೇಳುವದು ಆವಶ್ಯಕವಾಗಿಲ್ಲ ಎಂದು ತೋರು ತ್ತದೆ.

ಮಹಾವಿದ್ಯಾಲಯಗಳ ಗ್ರಂಥಭಂಡಾರಗಳ ಸ್ಥಿತಿಯೂ ಸಾಮಾನ್ಯ ವಾಗಿ ಇದೇ ಮಟ್ಟದ್ದಾಗಿರುತ್ತದೆ ಎಂಬುದು ತುಸು ಶೋಚನೀಯ ಸಂಗತಿ. ನಮ್ಮ ದೇಶದಲ್ಲಿಯ ಮಹಾವಿದ್ಯಾಲಯಗಳು ಗ್ರಂಥಭಂಡಾರಗಳನ್ನು ಪಡೆ ದಿರಬೇಕು ಎಂಬ ವಿಷಯವನ್ನು ನಾವು ತಿಳಿದುಕೊಂಡು ಬಹಳ ಕಾಲ ವಾಯಿತು. ಹೀಗೆ ಸಾಧಾರಣವಾಗಿ ಪ್ರತಿಯೊಂದು ಮಹಾವಿದ್ಯಾಲಯದಲ್ಲಿ ಗ್ರಂಥಾಲಯಕ್ಕಾಗಿ ಸ್ವತಂತ್ರವಾದ ಸ್ಥಳ ಮತ್ತು ಅಸ್ತಿತ್ವವನ್ನು ಮೊದಲಿ ನಿಂದಲೆ ಮಾಡಿರುವದುಂಟು. ಆದರೂ ಕೂಡ ಆ ಗ್ರಂಥಭಂಡಾರಗಳಲ್ಲಿ ಕಾರ್ಯವು ಸರಿಯಾಗಿ ಆಗದಿರುವದಕ್ಕೆ ಅಲ್ಲಿಯ ಅಧಿಕಾರಿಗಳ ಮನೋಭಾವ, ಆಡಳಿತದ ತೊಂದರೆ ಇವೆ ಹೆಚ್ಚಾಗಿ ಕಾರಣವಾಗಿವೆ. ಗ್ರಂಥಭಂಡಾರವೆಂದರೆ ಬಿಡುವಿನ ಸಮಯದಲ್ಲಿ ಒರಗಿ ಇಲ್ಲವೆ ಆರಾಮದಿಂದ ಕುಳಿತು, ಮನಸ್ಸು ಬಂದರೆ ಕೈಯಲ್ಲಿ ಒಂದು ಪುಸ್ತಕ ಇಲ್ಲವೆ ಪತ್ರಿಕೆಯನ್ನು ಹಿಡಿದು ಹೊತ್ತುಗಳೆ ಯುವ ಒಂದು ತಂಗುಮನೆಯೆಂಬುದೆ ಕೆಲವರ ಅಭಿಪ್ರಾಯವಾಗಿರುತ್ತದೆ. ಜ್ಞಾನಪ್ರಸಾರಮಾಡುತ್ತಿರುವ ಆ ಮಹಾವಿದ್ಯಾಲಯದಲ್ಲಿ ಗ್ರಂಥಭಂಡಾರವೂ ಒಂದು ಮಹತ್ವದ ಘಟಕ ಎಂಬ ಮಾತನ್ನು ಇನ್ನೂ ಅನೇಕ ಕಡೆಗಳಲ್ಲಿ ಕೃತಿಗೆ ತರಬೇಕಾಗಿದೆ. ಗ್ರಂಥಭಂಡಾರವನ್ನು ನೋಡಿಕೊಳ್ಳಲಿಕ್ಕೆ ತರಬೇತಿಯನ್ನು ಪಡೆದ ಮತ್ತು ತಕ್ಕ ಸಂಖ್ಯೆಯ ಭಂಡಾರಿಗರು ಇರಬೇಕು, ಪ್ರತಿಯೊಂದು

ಪಠ್ಯವಿಷಯದ ಪುಸ್ತಕಗಳನ್ನು ತರಿಸಲಿಕ್ಕೆ ಆ ಆ ಪ್ರಾಧ್ಯಾಪಕರು ಸಹಾಯ ಸಲಹೆಗಳನ್ನು ನೀಡಬೇಕು, ಗ್ರಂಥಭಂಡಾರದಲ್ಲಿ ಸಾಕಷ್ಟು ಪುಸ್ತಕಸಂಗ್ರಹ ಮತ್ತು ಸೇವಾಕಾರ್ಯವು ಜರುಗುವಂತೆ ಅವಕ್ಕೆ ಹಣವನ್ನು ಪೂರೈಸಬೇಕು, ಈ ಬಗೆಯ ವಿಷಯಗಳನ್ನು ಗಮನಿಸಬೇಕಾಗಿದೆ.

ಇತ್ತ ಭಾರತದೊಳಗಿನ ವಿಶ್ವವಿದ್ಯಾಲಯಗಳ ಗ್ರಂಥಭಂಡಾರಗಳ ಸ್ಥಿತಿಯು ಸಾಕಷ್ಟು ಸಮರ್ಪಕ ಮತ್ತು ಫಲಪ್ರದವಾಗಿದೆ ಎಂದು ಧಾರಾಳ ವಾಗಿ ಹೇಳಬಹುದು. ಈಗ ನಮ್ಮ ದೇಶದೊಳಗಿರುವ ಮೂವತ್ತರಷ್ಟು ವಿಶ್ವ ವಿದ್ಯಾಲಯಗಳಿಗೆಲ್ಲ ಗ್ರಂಥಭಂಡಾರಗಳು ಇರದಿದ್ದರೂ, ಕಳೆದ ಶತಮಾನದ ಎರಡನೆಯ ಅರ್ಧದಿಂದಲೇ ನಮ್ಮಲ್ಲಿ ಆರಂಭವಾದ ಈ ಗ್ರಂಥಭಂಡಾರಗಳಲ್ಲಿ ಕೆಲವಂತೂ ಪ್ರಶಂಸನೀಯವಾದ ಕಾರ್ಯವನ್ನು ಮಾಡಿವೆ. ಪುಸ್ತಕಗಳ ಸಂಗ್ರಹ, ಗ್ರಂಥಸೂಚಿಕೆಗಳ ರಚನೆ ಅನುಲಯ ಸೇವೆಯ ಲಾಭ, ಶಾಸ್ತ್ರ ಬದ್ಧವಾದ ವರ್ಗೀಕರಣ ಮತ್ತು ಸೂಚೀಕರಣ ಪದ್ಧತಿಗಳು, ಗ್ರಂಥಾಲಯ ವಿಜ್ಞಾನದ ಶಿಕ್ಷಣವರ್ಗಗಳು ಈ ಮುಂತಾದ ವಿವಿಧವಾದ ಕಾರ್ಯವನ್ನು ಈ ಗ್ರಂಥಭಂಡಾರಗಳು ದಕ್ಷತೆಯಿಂದಲೂ ಉತ್ಸಾಹದಿಂದಲೂ ಕೈಕೊಂಡಿರು ತ್ತವೆ. ಭಾರತದ ಹತ್ತೆಂಟು ಮಹಾನಗರಗಳಲ್ಲಿ ಕಾರಣಾಂತರದಿಂದ ಹುಟ್ಟಿ, ಈಗ ಸರಿಯಾಗಿ ವಿಸ್ತೃತಕಾರ್ಯ ಮಾಡುತ್ತಿದ್ದ ಕೆಲವು ಸಾರ್ವಜನಿಕ ಪುಸ್ತಕಭಂಡಾರಗಳನ್ನು ಬಿಟ್ಟರೆ ಈ ವಿಶ್ವವಿದ್ಯಾಲಯಗಳ ಗ್ರಂಥಭಂಡಾರ ಗಳೆ ಸಾರ್ವತ್ರಿಕವಾದ ಕಾರ್ಯವನ್ನು ಅವುಗಳ ಉದ್ದೇಶಕ್ಕೆ ಸರಿಯೆನಿಸು ವಂತೆ ಮಾಡಿವೆಯೆಂದು ಹೇಳಬಹುದು. ಪ್ರತಿಯೊಂದು ವಿಶ್ವವಿದ್ಯಾಲಯ ದಲ್ಲಿ ಈ ಸಂಸ್ಥೆಯು ಒಂದು ಸ್ವತಂತ್ರ ಮತ್ತು ವಿಶಿಷ್ಟವಾದ ವಿಭಾಗವೆ ಎಂದು ಪರಿಗಣಿಸಲ್ಪಟ್ಟು ಅದಕ್ಕೆ ತಕ್ಕ ಮನ್ನಣೆ ಮತ್ತು ಧನಗಳು ದೊರೆ ಯುತ್ತವೆ. ಆದರೆ ಇಂತಹ ಗ್ರಂಥಭಂಡಾರಗಳು ಸಾಮಾನ್ಯವಾಗಿ ಆ ಆ ಊರೊಳಗಿನ ಮಿಕ್ಕ ವಿದ್ಯಾರ್ಥಿಗಳಲ್ಲದ ನಾಗರಿಕರಿಗೆ ತಮ್ಮ ಸೌಲಭ್ಯ ಗಳನ್ನು ನೀಡದಿರುವದೊಂದು ಇವುಗಳ ಕೊರತೆಯಾಗಿದೆ.

ಅದೇ ಸಂಗಡದಲ್ಲಿ ಇನ್ನೊಂದು ಬಗೆಯ ಗ್ರಂಥಭಂಡಾರಗಳ ವೈಶಿಷ್ಟ್ಯ ಗಳನ್ನು ಇನ್ನು ತಿಳಿದುಕೊಳ್ಳಬಹುದು. ತಮ್ಮ ತಮ್ಮ ವ್ಯವಸಾಯಕ್ಕೆ ಸಂಬಂಧಿಸಿದ ವಿಷಯದ ಮೇಲೆ ಒಂದೊಂದು ಗ್ರಂಥಭಂಡಾರವನ್ನು ಸ್ಥಾಪಿಸಿ

ಕೊಳ್ಳುವದು ಈಗ ನಮ್ಮ ದೇಶದಲ್ಲಿ ಅಷ್ಟೊಂದು ಪ್ರಚಾರದಲ್ಲಿರದಿದ್ದರೂ ಇದು ಇಂಗ್ಲಂಡ್, ಫ್ರಾನ್ಸ್, ಅಮೇರಿಕಾ ಮೊದಲಾದ ರಾಷ್ಟ್ರಗಳಲ್ಲಿ ಸಾರ್ವತ್ರಿಕವಾಗಿದೆ. ಈಗಿನ ಮಿತಿಯಲ್ಲಿ ಕೇವಲ ಅಸ್ತಿತ್ವದಲ್ಲಿ ಅಷ್ಟೆ ಅಲ್ಲದೆ ಉಪಯುಕ್ತ ಕಾರ್ಯವನ್ನು ಮಾಡುತ್ತಿದ್ದು, ತಮ್ಮ ಸ್ವಾಧೀನ್ಯವನ್ನು ಕಾಯ್ದುಕೊಂಡಿರುವ ಇಂತಹ ಗ್ರಂಥಭಂಡಾರಗಳೆಂದರೆ ನಮ್ಮ ದೇಶದಲ್ಲಿ ಮೊದಲನೆಯದು ವಕೀಲರ ಗ್ರಂಥಭಂಡಾರ; ಅದರ ನಂತರ ಬರುವದು ವ್ಯಾಪಾರಿಗಳ ಗ್ರಂಥಸಂಗ್ರಹ. ಜಿಲ್ಲಾ ನ್ಯಾಯಾಲಯಗಳು ಮತ್ತು ಪ್ರಾಂತೀಯ ನ್ಯಾಯಾಲಯಗಳು ತಮ್ಮ ಕಾರ್ಯವನ್ನು ನಡೆಯಿಸಿದಂತೆಯೆ ನಮ್ಮ ಅನೇಕ ನಗರ ಮತ್ತು ಪಟ್ಟಣಗಳಲ್ಲಿ ವಕೀಲರು ತಮ್ಮ ಕ್ಲಬ್ಬಿನಲ್ಲಿ ಆಗಲಿ, ನ್ಯಾಯಾಲಯದ ಒಂದು ಕೋಣೆಯಲ್ಲಿಯೆ ಆಗಲಿ ಗ್ರಂಥಭಂಡಾರವನ್ನು ಕಟ್ಟಿಕೊಂಡಿರುವದೊಂದು ಆ ವ್ಯವಸಾಯದ ಅಭಿನಂದನೀಯ ಮತ್ತು ಅನುಕರಣೀಯ ಕಾರ್ಯವಾಗಿದೆ. ಅಂತಹ ಗ್ರಂಥಸಂಗ್ರಹಗಳ ಇನ್ನೊಂದು ವೈಶಿಷ್ಟ್ಯವೆಂದರೆ ಅಲ್ಲಿ ನಡೆಯುತ್ತಿರುವ ಒಂದು ಸರಳವಾದ ಮತ್ತು ಸುಲಭವಾದ ಅಂತರ್ವ್ಯವಸ್ಥೆ. ಆ ಗ್ರಂಥಾಲಯಗಳಲ್ಲಿ ಉಚ್ಚವಾದ ಮತ್ತು ಜಟಿಲವಾದ ವರ್ಗೀಕರಣ ಪದ್ಧತಿಯಾಗಲಿ ಸೂಚೀಕರಣ ಶಾಸ್ತ್ರವಾಗಲಿ ಹೆಚ್ಚಾಗಿ ಪ್ರಚಾರದಲ್ಲಿ ಇರುವದಿಲ್ಲ. ಅಲ್ಲಿ ಸಾಮಾನ್ಯವಾಗಿ ಪ್ರತಿಯೊಂದು ಗ್ರಂಥವಾಗಲಿ, ವರದಿಯಾಗಲಿ ಅದರ ಲೇಖಕನ ಹೆಸರಿನಿಂದ ಪ್ರಸಿದ್ಧವಾಗಿರುವದರಿಂದ ನಾಮನಿರ್ದೇಶವೆ ಆ ಗ್ರಂಥಾಲಯದ ಗುಟ್ಟಾಗಿರುವದು.

ಇತ್ತ ವ್ಯಾಪಾರಿಗಳ ಗ್ರಂಥಭಂಡಾರಗಳು ತೀರ ಇತ್ತೀಚೆಗೆ ನಮ್ಮ ನಾಡಿನಲ್ಲಿ ಹುಟ್ಟಿವೆ ಎಂದೆನ್ನಬಹುದು. ಮೊದಮೊದಲು ವೈಯಕ್ತಿಕವಾಗಿ ಇಂತಹ ಸಂಗ್ರಹಗಳನ್ನು ಅನೇಕರು ಮಾಡಿಕೊಂಡಿದ್ದರೂ, ಸಾಂಘಿಕ ಪ್ರಯತ್ನವು ಸಫಲ ಮತ್ತು ಆವಶ್ಯಕ ಎನಿಸಿದಂತೆ ಮತ್ತು ತತ್ಪರಿಣಾಮವಾಗಿ ವ್ಯಾಪಾರಿಗಳ ಸಂಘಗಳು, ವಣಿಕ್ ಮಂಡಲಗಳು, ಉತ್ಪಾದಕರ ಸಂಸ್ಥೆಗಳು ಜನ್ಮವನ್ನು ತಳೆದಂತೆ ಅವುಗಳಿಗೊಂದು ಪುಸ್ತಕಸಂಗ್ರಹವೂ ಇರಬೇಕು ಎಂಬ ವಿಚಾರವು ಅಲ್ಲಿ ತಲೆದೋರಿದುದು ಸ್ವಾಭಾವಿಕ. ಈಗ ನಮ್ಮ ದೇಶದಲ್ಲಿ ಅಯ್ವತ್ತಕ್ಕಿಂತ ಹೆಚ್ಚು ಇಂತಹ ಪ್ರಾಂತೀಯ ಮತ್ತು ಪ್ರಾದೇಶಿಕ

ಸಂಘಗಳೂ, ಹತ್ತೆಂಟು ಅಖಿಲಭಾರತ ಸಂಸ್ಥೆಗಳೂ, ನೂರಾರು ಚಿಕ್ಕಪುಟ್ಟ ಪ್ರಯೋಜನಗಳು ಮತ್ತು ವ್ಯವಸಾಯಗಳು ತಮ್ಮ ಕ್ಷೇತ್ರವಾಗಿದ್ದ ಸಂಸ್ಥೆಗಳೂ, ಗ್ರಂಥಭಂಡಾರಗಳನ್ನು ಮಾಡಿಕೊಂಡಿರುತ್ತವೆ. ಆದರೆ ಇವೆಲ್ಲ ಒಳ್ಳೆಯ ವ್ಯವಸ್ಥೆಯಲ್ಲಿ ಬಾಳುತ್ತಿರುವವು ಎಂದು ಮಾತ್ರ ಹೇಳಲಾಗುವದಿಲ್ಲ. ಸಮಸ್ತ ಭಾರತೀಯ ಸಂಸ್ಥೆಯ ಗ್ರಂಥಭಂಡಾರಗಳು ಉತ್ತಮ ದರ್ಜೆಯ ಸಂಗ್ರಹಗಳನ್ನು, ಸೇವಾಸೌಕರ್ಯಗಳನ್ನು ಪಡೆದಿರುತ್ತವೆ ಎಂಬ ಮಾತನ್ನು ನಾವು ಮರೆಯುವಂತಿಲ್ಲ. ಅವುಗಳ ಪುಸ್ತಕಗಳು, ಪತ್ರಿಕೆಗಳು, ಸರಕಾರೀ ಖಾತೆಗಳ ಮತ್ತು ಬೇರೆ ಸಮಿತಿಗಳ ವರದಿಗಳೇ ಮೊದಲಾದ ಸಾಮಗ್ರಿಗಳ ಸಂಗ್ರಹಗಳು ಅಪ್ರತಿಮವಾಗಿದ್ದು, ಎಷ್ಟೋ ಸಾರೆ ಸರಕಾರದ ಪರವಾಗಿ ನಡೆಯಿಸುತ್ತಿದ್ದ ಇಲ್ಲವೆ ಸರಕಾರದ ಸಹಾಯಧನದಿಂದ ಅಸ್ತಿತ್ವದಲ್ಲಿದ್ದ ಇಂತಹ ಭಂಡಾರಗಳಿಗಿಂತ ಇವು ಹೆಚ್ಚಿನ ಮಟ್ಟವನ್ನು ತೋರಿಸುತ್ತಿರುವದು ಕಂಡುಬರುತ್ತದೆ. ಇವಕ್ಕೆ ಕಾರಣ ಕೇವಲ ಶ್ರೀಮಂತರಾದ ವ್ಯಾಪಾರಿಗಳು ಮತ್ತು ಉದ್ಯಮಕಾರರು ಕೈಬಿಚ್ಚಿ ದುಡ್ಡು ಸುರುವುತ್ತಾರೆ ಮತ್ತು ಅವುಗಳ ಸ್ಥಿತಿಯನ್ನು ಸುಧಾರಿಸುತ್ತಾರೆ ಎಂಬುದು ಮಾತ್ರ ಇರದೆ, ತಮಗೆ ಸಂಬಂಧಿಸಿದ ಜೀವಾಳದ ವಿಷಯಗಳನ್ನು ಆಸ್ಥೆಯಿಂದಲೂ, ಸಾಮೂಹಿಕವಾಗಿಯೂ ತಿಳಿದುಕೊಳ್ಳಬೇಕೆಂಬ ಜಾಣ್ಮೆ-ಕುತೂಹಲಗಳು ಅವರಲ್ಲಿರುತ್ತವೆ ಎಂಬುದೇ ಹೆಚ್ಚು ಸಮಂಜಸವಾದುದು ಎಂದು ತೋರುತ್ತದೆ.

ಹಾಗೆಯೆ ಈ ವರ್ಗದಲ್ಲಿ ಬರುವ ಬೇರೆ ವ್ಯವಸಾಯಗಳ ಗ್ರಂಥಭಂಡಾರಗಳು ಇನ್ನು ಅನೇಕ ಆಗಿದ್ದರೂ ಅವುಗಳಲ್ಲಿ ಸಾಕಷ್ಟು ಸತ್ವ ಮತ್ತು ಸೇವೆ ಇಲ್ಲದಿದ್ದುದೊಂದು ಬೇರೆ ವಿಷಯ. ವೈದ್ಯರು, ಸ್ಥಾಪತ್ಯವಿಶಾರದರು, ಲೇಖಕರು, ರಾಜಕಾರಣಿಗಳು, ಕಲಾವಿದರು, ಸಂಗೀತಗಾರರು, ಸಮಾಜಶಾಸ್ತ್ರಜ್ಞರು, ಪ್ರಕಾಶಕರು, ಯಂತ್ರಜ್ಞರು, ಅಧ್ಯಾಪಕರು, ಧರ್ಮಸೇವಕರು ತಮ್ಮ ತಮ್ಮ ಗ್ರಂಥಾಲಯಗಳನ್ನು ಮಾಡಿಕೊಳ್ಳಬಹುದು. ಈ ದಾರಿಯಲ್ಲಿ ನಮ್ಮ ದೇಶದ ಕೆಲವು ಭಾಗಗಳಲ್ಲಿ ಒಂದೊಂದು ಪ್ರಯತ್ನ ನಡೆದಿರುವದು ಕಂಡುಬರುತ್ತಿದ್ದರೂ ಅವುಗಳಲ್ಲಿ ಸಾಕಷ್ಟು ಪ್ರಗತಿಯಾಗಿಲ್ಲ; ವೈಶಿಷ್ಟ್ಯ ಕಂಡುಬರುವದಿಲ್ಲ. ಆದರೂ ಪರಂಪರೆಯ ಪ್ರಕಾರ ನಮ್ಮ ಕೆಲವು ಮಠಗಳಲ್ಲಿ ಮತ್ತು ದೇವಾಲಯಗಳಲ್ಲಿ ಗ್ರಂಥ ಇಲ್ಲವೆ ಅನ್ಯ ಸಾಧನಗಳ

ಸಂಗ್ರಹಗಳು ಇರುತ್ತವೆ. ಆದರೆ ಅವುಗಳಲ್ಲಿ ಆಧುನಿಕ ಗ್ರಂಥಾಲಯ ವಿಜ್ಞಾನದ ಸಂಪರ್ಕ ಮತ್ತು ಪ್ರವೇಶ ಕಂಡುಬರುವದಿಲ್ಲ; ಇಷ್ಟೆ ಅಲ್ಲದೆ ಅವು ಹೆಚ್ಚಾಗಿ ಹಸ್ತಪ್ರತಿಗಳ ಸಂಗ್ರಹದಂತೆ ಇರುವದರಿಂದ ಆ ವಿಷಯ ವನ್ನು ಬೇರೆಯಾಗಿಯೆ ಪರೀಕ್ಷಿಸಬಹುದು.

ಆದರೆ ಇದೇ ಸಂಗಡದಲ್ಲಿ ಬರುವ ಇನ್ನೊಂದು ರೀತಿಯ ಗ್ರಂಥ ಭಂಡಾರಗಳ ಮಾಲೆಯು ಸರಕಾರದ ವಿವಿಧ ವಿಭಾಗಗಳ ಪುಸ್ತಕಸಂಗ್ರಹ ವಾಗಿದೆ. ಆಡಳಿತವು ಒಂದೊಂದು ವಿಷಯ ಮತ್ತು ಪ್ರದೇಶಗಳ ಆಧಾರದ ಮೇಲೆ ಬೆಳೆಯುತ್ತ ಹೋದಂತೆ ಅವುಗಳ ಬಗೆಯಲ್ಲಿ ಹೆಚ್ಚಿನ ಸಮಾಚಾರ ವನ್ನು ಮೊದಲಾಗಿ ಪಡೆಯುವದು ಸರಕಾರಕ್ಕೆ ಅನಿವಾರ್ಯವಷ್ಟೆ. ಅಂತೆಯೆ ಆ ಆ ವಿಷಯದ ಎಲ್ಲ ಸಮಸ್ಯೆಗಳನ್ನು ತಿಳಿದುಕೊಳ್ಳುವ ಆ ಆ ಪ್ರದೇಶದ ಸಕಲ ಸಂಗತಿಗಳನ್ನು ಕಲೆಹಾಕುವ ಕಾರ್ಯವನ್ನು ಸರಕಾರವು ಮುಂಚೆಯೆ ಮಾಡಬೇಕಾಯಿತು. ಆ ಬಗೆಯ ಪರಿಣಾಮಕಾರಕ ಕಾರ್ಯವೆಂದೇ ಜನ ಗಣನೆಯನ್ನು ಮಾಡುವದು, ಗ್ಯಾಜಿಟಿಯರನ್ನು ಬರೆಯಿಸುವದು, ಸಮಿತಿ ಗಳನ್ನು ನಿಯಮಿಸಿ ವರದಿಗಳನ್ನು ಪಡೆಯುವದು, ಭೂಸಂಪತ್ತಿನ ವಿಷಯ ವಾಗಿ ಸಮಾಚಾರವನ್ನು ಸಂಗ್ರಹಿಸುವದು ಇದೇ ಮೊದಲಾದ ಕಾರ್ಯವನ್ನು ಸರಕಾರವು ಮುಂದಾಗಿ ಮಾಡಬೇಕಾಯಿತು; ಮಾಡಬೇಕಾಗುತ್ತದೆ. ಇಂತಹ ಕಾರ್ಯದ ಒಂದು ಫಲಸ್ವರೂಪವೆಂದು ಆ ಆ ವಿಭಾಗಗಳಲ್ಲಿ ಕೆಲವು ಸರಕಾರೀ ಮತ್ತು ಸರಕಾರದವಲ್ಲದ ಗ್ರಂಥಗಳು ಒಟ್ಟುಸೇರುತ್ತವೆ. ಕಾಲ ಕ್ರಮದಲ್ಲಿ ಇವೇ ಗ್ರಂಥಗಳು ಒಂದು ಗ್ರಂಥಭಂಡಾರದಲ್ಲಿ ಪರಿಣಮಿಸಿದ ದೃಷ್ಟಾಂತಗಳು ಇಂದಿನ ನಮ್ಮ ಎಷ್ಟೊ ಕೇಂದ್ರ ಮತ್ತು ಪ್ರಾಂತೀಯ ಆಡಳಿತ ಗಳ ಖಾತೆಗಳಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಕೆಲವು ಗ್ರಂಥಭಂಡಾರ ಗಳಂತೂ ಕೇವಲ ತಾವು ಪ್ರಕಟಿಸಿದ ಗ್ರಂಥಗಳನ್ನು ಮತ್ತು ವರದಿಗಳನ್ನಲ್ಲದೆ ಆ ವಿಷಯದಲ್ಲಿಯೆ ಉತ್ಕೃಷ್ಟವಾದ ಎಲ್ಲ ಗ್ರಂಥಗಳ ಸಂಗ್ರಹವನ್ನಿಟ್ಟು ಗ್ರಂಥ ಭಂಡಾರ ಪ್ರಪಂಚದಲ್ಲಿಯೆ ಹೊಸದೊಂದು ಮಾದರಿಯನ್ನು ಹಾಕಿಕೊಟ್ಟಿರು ತ್ತವೆ. ಸರಕಾರದ ಕೆಲಸವು ಅದ್ಯತನವಾಗಿರಬೇಕು, ಪರಿಪೂರ್ಣವಾಗಿರ ಬೇಕು ಎಂಬ ಆಶಯವುಳ್ಳ ಆಡಳಿತಗಾರರು ಈ ಬಗೆಯ ಗ್ರಂಥಭಂಡಾರಗಳ ಗ್ರಂಥಗಳು ಮತ್ತು ಅಲ್ಲಿ ದೊರೆಯುವ ಸೌಕರ್ಯಗಳ ಲಾಭವನ್ನು ಧಾರಾಳ

ವಾಗಿ ಪಡೆಯುತ್ತಾರೆ; ಪಡೆಯಬಹುದು. ಇತ್ತೀಚೆಗೆ ಅಲ್ಲಿ ಗ್ರಂಥಸೂಚಿಕೆಯ ಕಾರ್ಯವನ್ನು, ಮಾರ್ಗದರ್ಶನದ ಹೊಣೆಯನ್ನು ವಹಿಸಿಕೊಳ್ಳುತ್ತಿರುವ ದರಿಂದ ಸರಕಾರದ ವಿಭಾಗಗಳಲ್ಲಿ ಅವರ ಗ್ರಂಥಭಂಡಾರಗಳು ಬಹಳ ಉಪಯುಕ್ತವಾದ ಅಂಗಸಂಸ್ಥೆಗಳಾಗಿ ಪರಿಣಮಿಸಿವೆ. ಆದರೆ ಈ ಗ್ರಂಥಭಂಡಾರಗಳು ತಮ್ಮ ಉಚ್ಚವರ್ಗದ ಪುಸ್ತಕಸಂಗ್ರಹದ ಲಾಭವು ಸರ್ವರಿಗೂ ದೊರೆಯುವಂತೆ, ಅವುಗಳಲ್ಲಿ ಸಾರ್ವಜನಿಕರಿಗಾಗಿ ಪ್ರವೇಶವು ಇರುವಂತೆ ಮಾಡಬೇಕಷ್ಟೆ ಅಲ್ಲದೆ ಇತರ ಎಲ್ಲ ಗ್ರಂಥಭಂಡಾರಗಳಿಗೂ ತಮ್ಮ ಸಂಗ್ರಹ ಮತ್ತು ಸೇವೆಯ ಪ್ರಯೋಜನ ಪಡೆಯಲಿಕ್ಕೆ ಸಾಧ್ಯ ಮತ್ತು ಅನುಕೂಲ ಆಗುವಂತೆ ತಮ್ಮ ಪುಸ್ತಕಪಟ್ಟಿಗಳ ಮತ್ತು ಗ್ರಂಥಸೂಚಿಕೆಗಳ ಪ್ರತಿಗಳನ್ನು ಅತ್ತ ಕಳಿಸಿಕೊಡಬೇಕು. ಅದರಂತೆಯೆ ಒಂದು ಊರೊಳಗೆ ಅಥವಾ ಒಂದು ಪ್ರಾಂತದೊಳಗೆ ಅಂತರಗ್ರಂಥಾಲಯ ವಿನಿಮಯದ ವ್ಯವಸ್ಥೆಯನ್ನು ಮಾಡಿಕೊಂಡರೆ ಅದರಲ್ಲಿ ಈ ಗ್ರಂಥಭಂಡಾರಗಳು ಸೇರಬೇಕು.

ಮೇಲೆ ವಿವರಿಸಿದಂತೆ ಹಸ್ತಪ್ರತಿಗಳ ಸಂಗ್ರಹಗಳು ಇಲ್ಲವೆ ಗ್ರಂಥಭಂಡಾರಗಳು ಒಂದು ವಿಶಿಷ್ಟವಾದ ಏರ್ಪಾಡು ನಿಜವಷ್ಟೆ. ಈ ಹಸ್ತಪ್ರತಿಗಳನ್ನು ಸಾಂಪ್ರದಾಯಿಕ ರೀತಿಯಲ್ಲಿ ಕಾಯ್ದಿರಿಸಿದ ಕೆಲವು ಸ್ಥಾನಗಳೆಂದರೆ ಮಠಗಳು, ಆಶ್ರಮಗಳು ಮತ್ತು ದೇವಾಲಯಗಳು ಎಂಬುದನ್ನು ನಾವು ತಿಳಿದಿದ್ದೇವೆ. ಆದರೆ ಇಂತಹ ಹಸ್ತಪ್ರತಿಗಳ ವಿಷಯವಾಗಿ ಸಂಪೂರ್ಣ ಮಾಹಿತಿಯು ಎಷ್ಟು ಜನರಿಗೆ ಇರುತ್ತದೆ? ಅದರ ಲಾಭವನ್ನು ಪಡೆದು ಜನಸಾಮಾನ್ಯರಿಗೆ ಎಷ್ಟು ಜನರು ತಿಳಿಸಿಕೊಡುತ್ತಾರೆ? ಗ್ರಂಥಭಂಡಾರವೆ ಆಗಲಿ, ಹಸ್ತಪ್ರತಿಯ ಸಂಗ್ರಹವೆ ಆಗಲಿ ಪ್ರಜಾಕೋಟಿಯ ಅನುಕೂಲಕ್ಕಾಗದಿದ್ದರೆ ಅದರ ಪ್ರಯೋಜನವೇನು? ಹಳೆಯ ಗ್ರಂಥ ಎಂದ ಮಾತ್ರಕ್ಕೆ ಅದರಲ್ಲಿ ಭಕ್ತಿ–ವಿಶ್ವಾಸ–ಗೌರವ ಹುಟ್ಟಿ, ಅವುಗಳನ್ನು ಬಿಚ್ಚಿ ಸಹ ನೋಡದಂತೆ ಬಚ್ಚಿಡುವ ಮತ್ತು ಕಾಯುವ ಮನೋಭಾವವು ಇನ್ನು ಬದಲಾಗಬೇಕು. ಅವುಗಳನ್ನು ಸಾರ್ವಜನಿಕ ಗ್ರಂಥಾಲಯವಾಗಲಿ, ಪುರಾಣವಸ್ತು ಸಂಗ್ರಹಾಲಯವಾಗಲಿ ಪಡೆಯಬೇಕು, ಬಯಲಿನಲ್ಲಿ ಅವುಗಳನ್ನು ಮೆರೆಯಿಸಬೇಕು ಎಂದು ಯಾರೂ ಇಚ್ಛಿಸುವದಿಲ್ಲ. ಆದರೆ ಅವುಗಳ ಉಪಯೋಗ ಆಗಬೇಕು; ಅವುಗಳಲ್ಲಿ ಅಡಕವಾಗಿರುವ ಜ್ಞಾನದ ಲಾಭವನ್ನು ಈಗಿನವರು

ಪಡೆದು, ಅದರ ಮೇಲೆ ಸುಧಾರಣೆಯನ್ನಾಗಲಿ, ಈಗಿನ ವಿಚಾರಗಳ ಆಧಾರದ ಮೇಲೆ ಅವುಗಳ ಅರ್ಥವಿವರಣೆಯನ್ನಾಗಲಿ ಮಾಡಬೇಕು. ಆ ದೃಷ್ಟಿಯಿಂದ ನಮ್ಮ ಹಳೆಯ ಹಸ್ತಪ್ರತಿಗಳನ್ನು ವಿಂಗಡಿಸಿ, ವರ್ಗೀಕರಿಸಿ, ಓದಿಸಿ, ಸುವ್ಯವಸ್ಥಿತವಾದ ರೀತಿಯಲ್ಲಿ ಬೇಡುವವರಿಗೆ ದೊರೆಯುವಂತೆ ಏರ್ಪಾಡಾಗಬೇಕು.

ಇಂದು ಇನ್ನೊಂದು ಬಗೆಯ ಹಸ್ತಪ್ರತಿಗಳಿಗೆ ತುಸು ಮಹತ್ವ ಬರುತ್ತಲಿದೆ. ಮಹಾಪುರುಷರು ಬರೆದ ಪತ್ರಗಳು, ಮುಂದಾಳುಗಳ ದಿನ ಚರಿಗಳೆ ಮೊದಲಾದ ಕಾಗದಗಳು, ಲೇಖಕರು ಪ್ರಕಟಿಸಿದ ಪುಸ್ತಕಗಳ ಹಸ್ತಪ್ರತಿಗಳು, ಸಮಾಜದೊಳಗಿನ ಪ್ರಮುಖರ ಸ್ವಾಕ್ಷರಗಳು ಮತ್ತು ಅಂಕಿತ ಗಳು. ಉದಾಹರಣೆಗಾಗಿ ಮಹಾತ್ಮಾ ಗಾಂಧಿಯವರ ಲೇಖನ, ಗ್ರಂಥ, ಪತ್ರ, ಸಹಿಗಳು ಮುಂತಾದ ಹಸ್ತಪ್ರತಿಗಳಿಗೆ ಇಂದು ಅತ್ಯಂತ ಮಹತ್ವದ- ಐತಿ ಹಾಸಿಕವಾಗದಿದ್ದರೂ—ಸಂಗ್ರಾಹಕ ಸ್ಥಾನವು ಪ್ರಾಪ್ತವಾಗಿದೆ. ಈ ಬಗೆಯ ಸಂಗ್ರಹವು ಕೇವಲ ಒಂದು ಪ್ರೇಕ್ಷಣೀಯ ವಸ್ತು ಅಥವಾ ಅಭಿಮಾನದ ವಿಷಯ ಎಂದಿದ್ದರೆ, ಅವುಗಳನ್ನು ಒಂದು ವಸ್ತುಸಂಗ್ರಹದಲ್ಲಿ ಇಟ್ಟುಬಿಟ್ಟರೆ ಕೆಲಸವಾಗಬಹುದು. ಆದರೆ ಕೇವಲ ಅಷ್ಟೆ ನಮ್ಮ ಉದ್ದೇಶವಾಗಿರದೆ, ಆ ವ್ಯಕ್ತಿಯ ಚರಿತ್ರೆಯನ್ನು ತಿಳಿಯಲಿಕ್ಕೆ, ಆ ಕಾಲದ ಸ್ಥಿತಿಗತಿಗಳನ್ನು ಅರಿಯ ಲಿಕ್ಕೆ ಅವು ಸಹಾಯಕ ಆಗುವದರಿಂದ ಅವುಗಳಿಗೆ ಗ್ರಂಥಗಳ ಮಹತ್ವವು ಪ್ರಾಪ್ತವಾಗಿದೆ. ಅಂತೆಯೆ ಅವುಗಳನ್ನು ಒಂದು ಭಂಡಾರದೊಳಗಿನ ಗ್ರಂಥ ಗಳಂತೆಯೆ ಸಾಕಷ್ಟು ವ್ಯವಸ್ಥಿತವಾಗಿ ಇಡಬೇಕಾಗಿದೆ. ಆವಶ್ಯಕ ಎನಿಸಿ ದವರಿಗೆ ಅವುಗಳ ಉಪಯೋಗವಾಗಿರಬೇಕು, ಆದರೆ ಅವುಗಳು ಅಚ್ಚಳಿಯ ದಂತೆ ಅನಂತಕಾಲ ಪರ್ಯಂತ ಉಳಿಯಬೇಕು ಎಂಬುದು ಯೋಗ್ಯವಾದ ವಿಚಾರ. ಈ ಕಾರ್ಯವನ್ನು ಸಾಧಿಸಲಿಕ್ಕೆಂದೇ ಇಂದು ಧ್ವನಿಗ್ರಹಣ, ಪ್ರತಿ ಗಳ ಫೋಟೊ ತೆಗೆಯುವದು, ಅಥವಾ ಮೈಕ್ರೊ ಫಿಲ್ಮ (ಚಿಕ್ಕ ಚಿತ್ರಗಳು) ಇವುಗಳ ಸಹಾಯವನ್ನು ಕೋರಲಾಗಿದೆ. ಅಪ್ರತಿಮವಾದ ಮತ್ತು ತಿರುಗಿ ದೊರೆಯಲಾರದ ಇಂತಹ ವಸ್ತುಗಳ ಫಿಲ್ಮಗಳನ್ನು ತೆಗೆದು ಅವುಗಳ ಪ್ರತಿ ಗಳನ್ನು ಪ್ರತಿಯೊಂದು ಗ್ರಂಥಭಂಡಾರದಲ್ಲಿ ಇಡುವದು ಇಂದಿನ ಮುಂದು ವರಿದ ರಾಷ್ಟ್ರಗಳ ಗ್ರಂಥಭಂಡಾರಗಳಲ್ಲಿ ವಾಡಿಕೆಯಾಗಿದೆ. ಇದೇ ವರ್ಗದಲ್ಲಿ

ಧ್ವನಿಮುದ್ರಿಕೆಗಳ ಸಂಗ್ರಹವೂ ಬರುತ್ತದೆ. ಇವುಗಳನ್ನು ಸಂಗ್ರಹಿಸಿಡುವ ಮತ್ತು ಅಣಿಮಾಡಿಕೊಡುವ ಕೆಲಸವು ಚಿತ್ರ ಮತ್ತು ಧ್ವನಿಗ್ರಹಣದ ವೈಜ್ಞಾನಿಕ ವಿಷಯಕ್ಕೆ ಸಂಬಂಧಿಸಿರುವದರಿಂದ ಅದಕ್ಕೆ ಬೇರೆ ಬಗೆಯ ಶಿಕ್ಷಣ ಮತ್ತು ಸಾಧನಗಳ ಬೇಕಾಗುತ್ತವೆ. ಪುಸ್ತಕಗಳನ್ನು ಹುಳ, ಬೆಂಕಿ, ನೀರು ಮತ್ತು ಬೇರೆ ಬಗೆಯ ಕಾರಣಗಳಿಂದ ನಷ್ಟವಾಗದಂತೆ ರಕ್ಷಿಸುವದು, ಹೊಸ ಬಗೆಯ ಹಸ್ತಪ್ರತಿಗಳನ್ನು, ಅಲೌಕಿಕ ಗ್ರಂಥಗಳನ್ನು ಕಾಪಾಡುವದು, ಇದೆಲ್ಲ ಒಂದು ಶಾಸ್ತ್ರವಾಗಿ ಇಂದು ಗ್ರಂಥನ್ಯಾಸಶಾಸ್ತ್ರ (Archives) ವಾಗಿ ಪರಿಣಮಿಸಿದೆ.

ಕೊನೆಯದಾಗಿ ಚಿಕ್ಕವರ ಮತ್ತು ಪ್ರೌಢರ ಗ್ರಂಥಭಂಡಾರಗಳ ಬಗ್ಗೆ ಕೆಲವು ಆಡಳಿತದ ಮತ್ತು ಸೌಕರ್ಯಗಳ ಅಂಶಗಳನ್ನು ತಿಳಿಯಬಹುದು. ಚಿಕ್ಕವರ ಸಲುವಾಗಿಯೆ ಏರ್ಪಟ್ಟ ಸ್ವತಂತ್ರ ಮತ್ತು ಸ್ವಾಧಿಕೃತ ಗ್ರಂಥ ಭಂಡಾರಗಳು ನಮ್ಮಲ್ಲಿ ಹೆಚ್ಚಾಗಿ ಹುಟ್ಟಿಲ್ಲ. ಅವು ವೈಯಕ್ತಿಕ ಮತ್ತು ವಿಭಕ್ತ ಕುಟುಂಬಗಳ ಸಮಾಜರಚನೆಯಿದ್ದ ಪಡುವಣದ ರಾಷ್ಟ್ರಗಳಲ್ಲಿ ಸಾಕಷ್ಟು ಪ್ರಚಲಿತವಾದ ಪದ್ಧತಿ. ಈಗ ನಾವು ಪಶ್ಚಿಮದ ಅನೇಕ ರೀತಿ-ನೀತಿಗಳನ್ನೆ ನಮ್ಮ ಜೀವನಕ್ಕೂ ಅನ್ವಯಿಸುತ್ತಿದ್ದು ನಮ್ಮ ದೇಶದಲ್ಲಿ ಇಂತಹ ವಿಶಿಷ್ಟ ಗ್ರಂಥಭಂಡಾರಗಳು ಈಗ ಅಸ್ತಿತ್ವದಲ್ಲಿ ಬರುತ್ತಲಿವೆ. ಆದರೆ ಸದ್ಯಕ್ಕೆ ಅವು ಸಾರ್ವಜನಿಕ ಗ್ರಂಥಾಲಯಗಳ ಇಲ್ಲವೆ ಸಾರ್ವಜನಿಕ ಉಪವನಗಳ ಅಂಗಗಳಾಗಿವೆ. ಪ್ರತಿಯೊಂದು ಬಾಲಕ ಬಾಲಕಿಯರ ಶಾಲೆಯಲ್ಲಿ ಅವರಿ ಗಾಗಿಯೆ ಏರ್ಪಟ್ಟ ಗ್ರಂಥಭಂಡಾರವಿರುವದೊಂದು ಬೇರೆ ವಿಷಯ. ಆದರೂ ಎಲ್ಲಿಯೆ ಇರಲಿ, ಇಂತಹ ಗ್ರಂಥಭಂಡಾರಗಳಲ್ಲಿ ಚಿಕ್ಕವರ ಮನಸ್ಸು ಅರಳು ವಂತಹ, ಬುದ್ಧಿಯು ಹದನವಾಗುವಂತಹ ಮತ್ತು ಸಾಮಾಜಿಕ ಗುಣಗಳು ವಿಕಾಸವಾಗುವಂತಹ ಗ್ರಂಥಗಳನ್ನು ಮತ್ತು ವ್ಯವಸ್ಥೆಯನ್ನು ಇಡುವದು ಯೋಗ್ಯ. ಅದರಲ್ಲಿಯೂ ವಿಶೇಷವಾಗಿ ನಾಯಕಜನರ ಜೀವನ ಚರಿತ್ರೆಗಳು, ನೀತಿಪರ ಕತೆಗಳು, ಇತಿಹಾಸದೊಳಗಿನ ವೀರ ಮತ್ತು ಸಾಹಸದ ವೃತ್ತಾಂತ ಗಳು, ಇವಲ್ಲದೆ ಚಿಕ್ಕವರ ಅಭಿರುಚಿಗೆ ಅನುರೂಪವೆನ್ನಿಸುವಂತಹ ಜ್ಞಾನ ಕೋಶಗಳು, ಚಿತ್ರಸಂಪುಟಗಳ ಮೊದಲಾದವುಗಳ ಸಂಗ್ರಹ ಸಮಾವೇಶ ವಾಗಬಹುದು. ಕೇವಲ ಪುಸ್ತಕಗಳು ಅವರಿಗೆ ಸಹಜವಾಗಿ ಸಿಗುವಂತೆ

ವ್ಯವಸ್ಥೆಯಿರಬೇಕು ಇಷ್ಟೆ ಅಲ್ಲದೆ, ಸಮಯಕ್ಕೆ ಸರಿಯಾಗಿ ಅವುಗಳನ್ನು ತಿರುಗಿ ತಂದಿಡುವದು, ಪದ್ಧತಿಯನ್ನು ಅನುಸರಿಸಿ ಅವುಗಳನ್ನು ಮತ್ತೆ ಜೋಡಿಸಿ ಇಡುವದು, ತಡವಾದಾಗ್ಗೆ ಇಲ್ಲವೆ ಪುಸ್ತಕಗಳನ್ನು ಕೆಡಿಸಿಕೊಂಡು ಬಂದಾಗ್ಗೆ ತಾನಾಗಿಯೆ ಅದರ ದಂಡ ಮತ್ತು ಬೆಲೆಗಳನ್ನು ಕೊಡುವದು ಇವೇ ಮೊದಲಾದ ಪದ್ಧತಿಗಳನ್ನು. ಅಂದರೆ ಸಮಾಜದಲ್ಲಿ ಪಾಲಿಸಬೇಕಾದ ಕೆಲವು ಮೂಲ ವಿಚಾರಗಳನ್ನು ಅವರು ಇಲ್ಲಿಯೆ ಕಲಿತುಕೊಳ್ಳುವಂತಹ ವಾತಾವರಣವನ್ನು ಕಲ್ಪಿಸಿರಬೇಕು.

ಚಿಕ್ಕಮಕ್ಕಳ ಗ್ರಂಥಭಂಡಾರದಲ್ಲಿ ಪುಸ್ತಕಗಳೆ ಮೊದಲಾದ ನಿರ್ಜೀವ ಸಾಧನಗಳ ಮೂಲಕ ಅಷ್ಟೆ ಜ್ಞಾನದಾನವಾಗುತ್ತಿರದೆ ಆಗಾಗ್ಗೆ ವಾಕ್ಪಟ ಗಳನ್ನು ತೋರಿಸಿ, ಶಾಸನಸಭೆಗಳನ್ನು ಏರ್ಪಡಿಸಿ, ನಾಟಕಗಳನ್ನು ಆಡಿಸಿ, ಕತೆಗಳನ್ನು ಹೇಳಿಸಿ ಆ ಕಾರ್ಯವನ್ನು ಮಾಡಬಹುದು. ಯಾವ ಕಾರ್ಯ ಕ್ರಮದ ಮೂಲಕವಾಗಿಯೆ ಆ ಉದ್ದೇಶದ ಸಾಧನವಾಗುತ್ತಿರಲಿ, ಅದರಲ್ಲಿ ಚಿಕ್ಕವರ ಮನೋಭಾವವನ್ನು—ಚಿಕ್ಕಮಕ್ಕಳ ಕುತೂಹಲಬುದ್ಧಿ ಮತ್ತು ಅವರ ಗ್ರಹಣಶಕ್ತಿಗಳನ್ನು ಕಣ್ಣ ಮುಂದಿಟ್ಟುಕೊಂಡು ಅವುಗಳನ್ನು ಯೋಜಿಸಬೇಕು.

ಇದೇ ಎಚ್ಚರಿಕೆಯನ್ನು ಇನ್ನೊಂದು ಬಗೆಯಾಗಿ ಹಿರಿಯರ ಗ್ರಂಥಾ ಲಯಗಳನ್ನು ಸ್ಥಾಪಿಸಿ ನಡೆಯಿಸುವ ವಿಷಯದಲ್ಲಿ ಹೇಳಬಹುದು. ಪ್ರೌಢರಿ ಗಾಗಿ ಶಿಕ್ಷಣಪ್ರಸಾರದ ಕಾರ್ಯವು ಆರಂಭವಾಗಿ ಇಂದಿಗೆ ನಮ್ಮ ದೇಶದಲ್ಲಿ ಅದೆಷ್ಟೊ ಕಾಲವಾಗಿರಬಹುದು. ಆದರೂ ಕೂಡ ಅವರ ಸಮಸ್ಯೆಗಳು ಇನ್ನು ಹಾಗೆಯೆ ಇರುವವಷ್ಟೆ ಅಲ್ಲದೆ ದಿನದಿನಕ್ಕೆ ಇನ್ನು ಬೆಳೆಯುತ್ತಿರುವದೊಂದು ವಿಚಿತ್ರವಿಷಯವೆ ಆಗಿದೆ. ಪ್ರೌಢರ ಸಲುವಾಗಿ ಮಾಡುವ ಜ್ಞಾನಾರ್ಜನೆಯು ಎಂತಹ ವ್ಯವಸ್ಥೆಯೆ ಆಗಲಿ, ಅದರಲ್ಲಿ ಅವರ ಆಸಕ್ತಿಯು ಹುಟ್ಟುವದಷ್ಟೆ ಅಲ್ಲದೆ, ಅದು ಉಳಿದು, ಬೆಳೆದು, ಸಾಕ್ಷರತೆಯು ಅವರಲ್ಲಿ ಭದ್ರವಾಗಿ ನೆಲೆ ಯೂರುವಂತೆ ಮಾಡುವದು ಅನಿವಾರ್ಯವಾಗಿದೆ. ಒಂದು ಪೀಳಿಗೆಯ ಅಥವಾ ಒಂದು ವರ್ಗದ ನಿರಕ್ಷರಿಗಳು ಸಾಕ್ಷರರಾಗಿ, ಸುವಿದ್ಯರಾಗಬೇಕಲ್ಲದೆ ಮುಂದಿನ ಪಂಗಡದ ನಿರಕ್ಷರತೆಯನ್ನು ದೂರಮಾಡುವ ಪ್ರಯತ್ನದಲ್ಲಿ ಅವರೇ ನೆರವಾಗುವಂತೆ ನಾವು ವ್ಯವಸ್ಥೆಯನ್ನು ಮಾಡಬೇಕು. ಇಲ್ಲಿಯೆ

ಗ್ರಂಥಭಂಡಾರದ ಪಾತ್ರವು ಇನ್ನಷ್ಟು ಆವಶ್ಯಕವಾದುದು ಎನಿಸುತ್ತದೆ. ಕೇವಲ ಸಾಕ್ಷರತಾ ಪ್ರಸಾರವಷ್ಟೆ ಇಂದಿನ ಗ್ರಂಥಾಲಯುವು ನೆರವಾಗತಕ್ಕ ಆಂದೋಲನದ ಭಾಗವಾಗಿರದೆ, ಸಮಾಜಶಿಕ್ಷಣದಲ್ಲಿ ಸಹಾಯಕ ಆಗಬೇಕಾಗಿದೆ ಇಂದಿನ ಗ್ರಂಥಭಂಡಾರ. ಅಂತೆಯೆ ಗ್ರಂಥಭಂಡಾರದ ಆಶ್ರಯದಲ್ಲಿ ಪುಸ್ತಕಗಳನ್ನು ರಚಿಸುವದು, ಗ್ರಂಥವಿಮರ್ಶಾಕೂಟಗಳನ್ನು ಏರ್ಪಡಿಸುವದು, ಸಂಗೀತ ಮೇಳಗಳನ್ನು ಆಮಂತ್ರಿಸುವದು, ನಾಟಕಮಂಡಲಿಯಿಂದ ಆಟಗಳನ್ನು ಆಡಿಸುವದು, ನಿವೃತ್ತ ಅಧಿಕಾರಿಗಳ ಸಂತೋಷಕೂಟಗಳನ್ನು ಜರುಗಿಸುವದು, ಇವೇ ಮೊದಲಾದ ಆಕರ್ಷಕ ಮತ್ತು ನಿತ್ಯನೂತನ ಕಾರ್ಯಕ್ರಮಗಳಿಂದ ನವಶಿಕ್ಷಿತ ಜನರನ್ನು ಗ್ರಂಥಭಂಡಾರದತ್ತ ಎಳೆದು, ಅವರು ಆ ಉತ್ಸವಗಳ ಮೂಲಕ ಅವುಗಳಿಗೆ ಸಂಬಂಧಿಸಿದ ವಿಷಯವನ್ನು, ವ್ಯವಸ್ಥೆಯನ್ನು ತಿಳಿದುಕೊಳ್ಳುವಂತೆ ಮಾಡಬೇಕು. ಪ್ರೌಢರ ಗ್ರಂಥಭಂಡಾರವು ಒಂದು ಸರಕಾರದ ಅಥವಾ ಸ್ಥಾನಿಕ ಸಂಸ್ಥೆಯ ವಿಭಾಗವಾಗಿ ಅಸ್ತಿತ್ವದಲ್ಲಿದ್ದರೂ ಸಮಾಜಶಿಕ್ಷಣದ ಕಾರ್ಯದಲ್ಲಿ ಅದು ಮಧ್ಯಬಿಂದುವಾಗಿ ಎಲ್ಲ ಹೊಣೆಯನ್ನು ವಹಿಸಿಕೊಳ್ಳಬೇಕಾಗುತ್ತದೆ.

ಇಂತು ಗ್ರಂಥಭಂಡಾರವು ಎಷ್ಟೆ ಚಿಕ್ಕ ಸಂಸ್ಥೆಯಾಗಿರಲಿ, ಅತ್ಯಲ್ಪ ಪುಸ್ತಕಗಳ ಒಂದು ಮರ್ಯಾದಿತ ಕ್ಷೇತ್ರದಲ್ಲಿಯೆ ಕೆಲಸ ಮಾಡುತ್ತಿರಲಿ, ಜ್ಞಾನಪ್ರಸಾರದ ಆ ಆ ಸಂದರ್ಭದಲ್ಲಿ ಅದು ಎಲ್ಲ ಚಟುವಟಿಕೆಯ ಮೂಲಸ್ಥಾನವಾಗಿರುತ್ತದೆ; ಉಗಮನೆನಿಸಿದೆ. ಅಂತೆಯೆ ಸ್ವತಂತ್ರವಾದ ಅಸ್ತಿತ್ವ ಅದಕ್ಕಿರಲಿ, ಇಲ್ಲದಿರಲಿ, ವೈಶಿಷ್ಟ್ಯಪೂರ್ಣವಾದ ಸೇವೆಯನ್ನಂತೂ ಅದು ಸಲ್ಲಿಸುತ್ತಿರುವದರಿಂದ ಅದರ ಆಡಳಿತದ ವಿಷಯವಾಗಿ, ಅಂದರೆ ಅದರ ಅಂತರ್ವ್ಯವಸ್ಥೆ ಮತ್ತು ಧನಸಹಾಯ ಇವುಗಳ ಬಗೆಯಲ್ಲಿ ಇಂದು ನಾವು ಹೆಚ್ಚು ದುಡಿದಷ್ಟು ಮತ್ತು ಯೋಚಿಸಿದಷ್ಟು ನಾವು ಹೆಚ್ಚು ಸೇವೆಯನ್ನು, ಸೌಕರ್ಯಗಳನ್ನು ಪಡೆಯುತ್ತೇವೆ.



# ೬. ಭಂಡಾರಿಗ



ಗ್ರಂಥಭಂಡಾರದ ತ್ರಿವೇಣಿಯಲ್ಲಿ ಭಂಡಾರಿಗನೆಂದರೆ ಸರಸ್ವತಿ. ಪುಸ್ತಕ ಮತ್ತು ವಾಚಕ ಎಂಬ ಗಂಗಾ–ಯಮುನೆಗಳಂತೆ ಹೊರಗೆ ಕಾಣ ದಿದ್ದರೂ ಗುಪ್ತನಾಗಿ ಗ್ರಂಥಭಂಡಾರದ ತುಂಬೆಲ್ಲ ಹರಿದಾಡುತ್ತ ತನ್ನ ಪ್ರಭಾವವನ್ನು ಬೀರುವವ ಭಂಡಾರಿಗ. ಪುಸ್ತಕ ಮತ್ತು ವಾಚಕರನ್ನು ಒಂದೆಡೆ ಸೇರಿಸುವದು ಎಂಬ ಸಾಮಾನ್ಯವಾದ ಕರ್ತವ್ಯದ ಹೊಣೆಯು ಅವನ ದಾಗಿದ್ದರೂ ಅದಕ್ಕೆ ಬೇಕಾಗುವ ಯೋಗ್ಯತೆಯು ಹಿರಿದಾದುದಾಗಿದೆ. ಕೇವಲ ಗ್ರಂಥಗಳನ್ನು ಕೊಳ್ಳುವದು, ಸಂಗ್ರಹಿಸುವದು; ಓದುಗರನ್ನು ಬರಮಾಡಿ ಕೊಳ್ಳುವದು; ಅವರಿಗೆ ಬೇಕಾದ ಪುಸ್ತಕಗಳು ದೊರೆಯುವಂತೆ ಮಾಡುವದು —ಎಂಬುದಿಷ್ಟೆ ಅವನ ಕೆಲಸ ಎಂದು ಮೊದಲು ತೋರಿದರೂ, ಆ ಪ್ರತಿಯೊಂದು ಕಾರ್ಯವಿಭಾಗದಲ್ಲಿ ಎಷ್ಟು ಬಗೆಯ ಜ್ಞಾನ ಮತ್ತು ಎಂತಹ ಧೋರಣೆಗಳು ಬೇಕು ಎಂಬುದನ್ನು ತಿಳಿದುಕೊಂಡರೆ ಭಂಡಾರಿಗನ ಸ್ಥಾನವು ಎಷ್ಟು ಮಹತ್ತರವಾದುದು ಎಂಬುದರ ಅರಿವಾಗುವದು. ಒಂದು ಗ್ರಂಥಭಂಡಾರ ವನ್ನು ಆರಂಭಿಸಬೇಕು ಎಂದು ಒಬ್ಬ ವ್ಯಕ್ತಿಯಾಗಲಿ, ಒಂದು ಸಂಸ್ಥೆ ಯಾಗಲಿ, ಒಂದು ಕಡೆಯ ಸಮಾಜವಾಗಲಿ, ಪ್ರದೇಶದ ಆಡಳಿತವಾಗಲಿ ನಿರ್ಣಯಿಸಿದ ಕೂಡಲೆ ಭಂಡಾರಿಗನ ಹೊಣೆಯು ಬೆಳೆಯುತ್ತ ಹೋಗುತ್ತದೆ. ಎಷ್ಟೋ ಸಾರೆ, ಅಸ್ತಿತ್ವದಲ್ಲಿದ್ದ ಗ್ರಂಥಾಲಯ ವ್ಯವಸ್ಥೆಯಲ್ಲಿ ಬೇರೆ ಕೆಲವು ಘಟಕಗಳನ್ನು ಸ್ಥಾಪಿಸಬೇಕು ಎಂಬ ಸೂಚನೆ ಇಲ್ಲವೆ ಬೇಡಿಕೆಯಿದ್ದಾಗ್ಗೆ, ಅಂತಹ ಸ್ಥಳಗಳಲ್ಲಿ ಭಂಡಾರಗಳು ನೆಲೆಗೊಳ್ಳುವಂತೆ ವಾತಾವರಣವನ್ನು ಹದ ಮಾಡುವ ವಿಷಯದಲ್ಲಿಯೂ ಭಂಡಾರಿಗನ ಪಾತ್ರವು ಮಹತ್ವದ್ದಾಗಿರುತ್ತದೆ. ಗ್ರಂಥಾಲಯಕ್ಕಾಗಿ ಕಟ್ಟಡವನ್ನಾಗಲಿ, ಕಟ್ಟಡದ ಭಾಗವನ್ನಾಗಲಿ ಗೊತ್ತು ಮಾಡಿ ದೊರಕಿಸುವಾಗ್ಗೆ ಆತನು ತಕ್ಕಮಟ್ಟಿಗೆ ಸ್ಥಾಪತ್ಯವನ್ನು ಅರಿತವನಾಗ ಬೇಕಾಗುತ್ತದೆ; ಗ್ರಂಥಗಳನ್ನು ಇಡಲಿಕ್ಕೆ ಮತ್ತು ಅವುಗಳನ್ನು ಓದುಗರಿಗೆ

ಸರಿಯಾಗಿ ದೊರಕಿಸುವಂತೆ ಮಾಡುವ ಕೆಲಸದಲ್ಲಿ ಅವಶ್ಯಕ ಎನಿಸುವ ಫಲಕಗಳು, ಮೇಜುಗಳು, ಕುರ್ಚಿಗಳು ಮೊದಲಾದ ಆಸನಸಾಮುಗ್ರಿಗಳನ್ನು ಮತ್ತು ಗ್ರಂಥಧಾರಕಗಳನ್ನು ಸಿದ್ಧಮಾಡಿಸುವದರಲ್ಲಿ ಆತನು ಅಮೇರಿಗೆ ಬಡಗತನವನ್ನು ತಿಳಿದಿರಬೇಕಾಗುತ್ತದೆ. ಗ್ರಂಥಾಲಯದ ಆಡಳಿತ ಸಮಿತಿಯನ್ನು ಏರ್ಪಡಿಸುವದು, ಅದರ ಕಾರ್ಯವು ಸರಿಯಾಗಿ ನಡೆಯುವದು ಇವು ಗ್ರಂಥಾಲಯದ ಸಂಬಂಧದಲ್ಲಿ ಜೀವಾಳದ ವಿಷಯಗಳಾಗಿದ್ದ ಕಾರಣ ಅಷ್ಟುಮಟ್ಟಿಗೆ ಭಂಡಾರಿಗನು ಪಳಗಿದ ರಾಜಕಾರಣಿಯಾಗಿರಬೇಕಾಗುತ್ತದೆ. ಗ್ರಂಥಾಲಯದ ಅಂತರ್ವ್ಯವಸ್ಥೆಯ ಪ್ರತಿಯೊಂದು ಅಂಗವು ಶಾಂತವಾಗಿಯೂ ಸಮಾಧಾನಕಾರಕವಾಗಿಯೂ ನಡೆಯಬೇಕಾದರೆ ಅದು ಭಂಡಾರಿಗನ ಆಡಳಿತಶಕ್ತಿಯ ಮೇಲೆಯೆ ಅವಲಂಬಿಸಿರುತ್ತದೆ. ಗ್ರಂಥಾಲಯ ವಿಜ್ಞಾನವನ್ನು ಕೇವಲ ಓದಿಕೊಂಡು ಅದರಲ್ಲಿ ಪ್ರಶಸ್ತಿಯನ್ನು ಪಡೆದು ಈ ಕಾರ್ಯವು ಸಫಲವಾಗಲಾರದು. ಅದಕ್ಕೆ ತಕ್ಕ ಉತ್ಸಾಹವೂ, ಸಹಕಾರಿಗಳನ್ನು ನೋಡಿಕೊಂಡು ಹೋಗುವಂತಹ ಜಾಣ್ಮೆಯೂ, ಪ್ರಸಂಗ ಬಂದರೆ ಮಿಕ್ಕ ಸಹಾಯಕರ ಹೆಚ್ಚಿನ ಕೆಲಸವನ್ನು ಮಾಡುವಂತಹ ಮನೋಭಾವವೂ ಉಳ್ಳವನು ಆತನು ಆಗಿರಬೇಕಾಗುತ್ತದೆ. ಅದರಂತೆಯೆ ಓದುಗರ ಸಂಬಂಧದಲ್ಲಿ ಆತನು ತುಂಬ ಆತ್ಮೀಯತೆಯಿಂದ ನಡೆದುಕೊಳ್ಳುವ ಹಿರಿಯಣ್ಣನಂತೆಯೂ, ಅಪರಿಚಿತರಿಗೆ ಗ್ರಂಥಭಂಡಾರದಲ್ಲಿ ಆಸಕ್ತಿಯುಂಟಾಗಿ ಅಲ್ಲಿ ಮುಕ್ತಮನಸ್ಸಿನಿಂದ ತಮ್ಮ ವಾಚನವನ್ನು ಅಥವಾ ಸಮಾಚಾರಸಂಗ್ರಹವನ್ನು ಮುಂದುವರಿಸುವಂತೆ ಮಾಡುವ ಆತಿಥ್ಯಭಾವವುಳ್ಳವನೂ ಆಗಿರಬೇಕಾಗುತ್ತದೆ. ಹೀಗೆ ವಿವಿಧ ರೂಪಗಳ, ವಿವಿಧ ಕರ್ತವ್ಯಗಳ ವ್ಯಕ್ತಿಯು ಭಂಡಾರಿಗನಾಗಬೇಕಾಗಿದ್ದರೆ ಅವನೊಬ್ಬ ಅಮಾನುಷ ವ್ಯಕ್ತಿಯೆ ಆಗಿದ್ದರೆ ಅದು ಸಾಧ್ಯವಾಗುವದು, ಇಲ್ಲವೆ ಆತನು ಅಲೌಕಿಕ ಪುರುಷನಾಗಿದ್ದರೆ ಶಕ್ಯವಾಗಬಹುದು ಎಂದು ಹೇಳಬೇಕಷ್ಟೆ.

ಒಂದು ಸಾಮಾನ್ಯವಾದ ಗ್ರಂಥಭಂಡಾರದಲ್ಲಿಯೂ ಭಂಡಾರಿಗನು ಈ ಪರಿಯ ವೈವಿಧ್ಯವುಳ್ಳ ಕೆಲಸವನ್ನು ಮಾಡಬೇಕಾಗಿರುವದು ಎಂಬುದನ್ನು ತಿಳಿದು ಯಾರಿಗೂ ಆಶ್ಚರ್ಯವೆನಿಸಬಹುದು. ಆದರೆ ಆ ಸ್ಥಾನದ ಮಾಹಾತ್ಮ್ಯವೆ ಅಂತಹದಿರುವದು. ಅದೊಂದು ಸಾಮಾಜಿಕ ಸೇವೆಯ ಸಂಸ್ಥೆಯಾಗಿರುವ ಮೂಲಕ, ಅದರ ಅಧಿಷ್ಠಾನದಲ್ಲಿ ಭಂಡಾರಿಗನು ಇರುವದರಿಂದ,

ಆ ಸಂಸ್ಥೆಯ ಕಾರ್ಯವೆಲ್ಲ ಅವನ ಮೂರ್ತಿಸ್ವರೂಪದ ಫಲ ಇಲ್ಲವೆ ಪ್ರತೀಕ ವಾಗಿರುವಲ್ಲಿ ಸಂದೇಹವಿಲ್ಲ. ಅಂತೆಯೆ ಇಂದು ಪ್ರಗತಿಯನ್ನು ಹೊಂದಿದ ರಾಷ್ಟ್ರಗಳಲ್ಲಿ ಶಿಕ್ಷಣದಂತಹ ಸಮಾಜಸೇವೆಯ ಕಾರ್ಯದಲ್ಲಿ ಭಂಡಾರಿಗನು ಅತ್ಯಾವಶ್ಯಕ ಘಟಕನಾಗಿರುತ್ತಾನೆ. ಆತನು ಕೇವಲ ಕೆಲವು ಕಾರ್ಯಕ್ರಮ ಗಳಲ್ಲಿ ಪ್ರೇಕ್ಷಕನಾಗಿ ಆಗಲಿ, ಪ್ರೋತ್ಸಾಹಕನಾಗಿ ಆಗಲಿ ಭಾಗವಹಿಸುತ್ತಿರದೆ, ಎಷ್ಟೋ ಕಾರ್ಯಕ್ರಮಗಳು, ಉತ್ಸವಗಳು, ಸಮ್ಮೇಳನಗಳು, ಸಮಾರಂಭ ಗಳು, ಸಭೆಗಳು ಅವನ ಪ್ರೇರಣೆಯಿಂದ ಆರಂಭವಾಗಿ ಅವನ ಮಾರ್ಗದರ್ಶನ ದಲ್ಲಿ ನಡೆಯುತ್ತಿರುವದು ಸಾಮಾನ್ಯವಾದ ಸಂಗತಿಯಾಗಿದೆ. ಹೀಗಿದ್ದ ಪಕ್ಷ ದಲ್ಲಿ ನಮ್ಮಲ್ಲಿ ಭಂಡಾರಿಗನಿಗೆ ಇನ್ನೂ ತಕ್ಕ ಸ್ಥಾನವು ಏಕೆ ಪ್ರಾಪ್ತವಾಗಿಲ್ಲ? ಆತನಿಗೆ ಸಂಘಟನಾತ್ಮಕ ಕಾರ್ಯದಲ್ಲಿ ಗೌರವ ದೊರೆಯುವ ಮಾತಂತೂ ದೂರವಾಗಿದೆ. ಸಮಾಜವಿಕಾಸದ ಕಾರ್ಯವು ಅನೇಕಮುಖವಾಗಿಯೂ ಭರದಿಂದಲೂ ಸಾಗಬೇಕಾದ ಈ ಪ್ರಸಂಗದಲ್ಲಿ ಆತನ ಸೇವೆಯ ಸಾಮರ್ಥ್ಯವು ಎಷ್ಟಾಗಿರುವದು, ಆತನ ಕಾರ್ಯಕ್ಷೇತ್ರದಲ್ಲಿ ಎಂತೆಂತಹ ಸೌಕರ್ಯಗಳು ದೊರೆಯಬಹುದು ಎಂಬ ವಿಷಯವನ್ನು ನಾವು ಅರಿತುಕೊಳ್ಳಬೇಕಾಗಿದೆ.

ಅದನ್ನು ಸರಿಯಾಗಿಯೂ ಸಂಪೂರ್ಣವಾಗಿಯೂ ತಿಳಿದುಕೊಳ್ಳಬೇಕಾ ದರೆ ಅದಕ್ಕಿಂತ ಮುಂಚಿತವಾಗಿ ನಮ್ಮ ದೇಶದಲ್ಲಿ ಈಗ ಇರುವ ಪರಿಸ್ಥಿತಿ ಯನ್ನು ತಿಳಿದುಕೊಳ್ಳುವದು ಸಹಾಯಕವಾಗಬಹುದು. ಸದ್ಯದ ನಮ್ಮ ಗ್ರಂಥಭಂಡಾರಗಳಲ್ಲಿ ಭಂಡಾರಿಗರು ಇರುವರೆ? ಆ ರೀತಿ ಯೋಗ್ಯರಾಗಿದ್ದ ಭಂಡಾರಿಗರಲ್ಲಿ ಎಷ್ಟು ಜನರು ತಮ್ಮ ಕಾರ್ಯವನ್ನು ನಿರಾತಂಕವಾಗಿ ಸಾಗಿಸಿಕೊಂಡು ಹೋಗಲಿಕ್ಕೆ ಮತ್ತು ವಿಕಾಸಯೋಜನೆಗಳಲ್ಲಿ ಸಹಕಾರ ವನ್ನು ನೀಡಲಿಕ್ಕೆ ಸೌಕರ್ಯವುಳ್ಳವರಾಗಿರುವರು? ಗ್ರಂಥಾಲಯಗಳನ್ನು ನಡೆಯಿಸಿಕೊಂಡು ಹೋಗಬೇಕಾದರೆ ಅವರಲ್ಲಿ ಎಷ್ಟು ಜನರಿಗೆ ಸಾಕಷ್ಟು ಉತ್ಸಾಹ ಮತ್ತು ಆಸ್ಪದವಿದ್ದು, ಹಾಗೆ ಮಾಡಲಿಕ್ಕೆ ಬೇಕಾಗುವ ಪ್ರೋತ್ಸಾ ಹನೆ ಅವರಿಗೆ ದೊರೆಯುವದೆಷ್ಟು? ನಮ್ಮ ಸಮಾಜದಲ್ಲಿ ಈಗ ಸಾಗುತ್ತಿ ರುವ ವಿವಿಧ ಉತ್ಸವ ಮತ್ತು ಸಂಘಟನೆಯ ಕಾರ್ಯದಲ್ಲಿ ನೆರವಾಗುವಂತೆ ಎಷ್ಟು ಜನರು ಭಂಡಾರಿಗರು ಮುಂದೆ ಬರುತ್ತಿರುವರು?—ಇವೆ ಮೊದಲಾದ ಕೆಲವು ವಿವರಗಳನ್ನು ನಾವು ಈಗ ನೋಡಿಕೊಳ್ಳಬಹುದು.

ಭಾರತದಲ್ಲಿ ಹರಡಿಕೊಂಡಿರುವ ಗ್ರಂಥಭಂಡಾರಗಳಲ್ಲಿ ಸಾಕಷ್ಟು ಪರಿಣಾಮಕಾರಕ ಆದವುಗಳೆಂದರೆ ವಿಶ್ವವಿದ್ಯಾಲಯ ಗ್ರಂಥಭಂಡಾರಗಳು, ಸಾರ್ವಜನಿಕ ಗ್ರಂಥಾಲಯಗಳು, ವ್ಯವಸಾಯ ಗ್ರಂಥಭಂಡಾರಗಳಲ್ಲಿ ಕೆಲವು ಮತ್ತು ಒಂದೊಂದು ವಿಶಿಷ್ಟ ಸಂಗಡದ ಇಲ್ಲವೆ ಧರ್ಮಸಂಸ್ಥೆಗಳ ಗ್ರಂಥಭಂಡಾರಗಳು ಎಂಬ ಮಾತು ಸ್ಪಷ್ಟವಾಗಿರುವದು. ಇವೆಲ್ಲವುಗಳಲ್ಲಿ ಮೊದಲನೆಯ ವರ್ಗದ ಸಂಸ್ಥೆಗಳಲ್ಲಿ ಬಹುತರವಾಗಿ ಎಲ್ಲ ಕಡೆಯಲ್ಲಿಯೂ ಶಿಕ್ಷಣವನ್ನು ಪಡೆದ, ಉಚ್ಚಮಟ್ಟದ ಯೋಗ್ಯತೆಯುಳ್ಳ ಭಂಡಾರಿಗರು ಇರುವದು ನಮಗೆ ತಿಳಿದ ಮಾತಾಗಿದೆ. ಅಂತೆಯೆ ಆ ವಿಶಿಷ್ಟ ಗ್ರಂಥಾಲಯಗಳ ಕಾರ್ಯ ಸುಗಮವಾಗಿಯೂ ಫಲಪ್ರದವಾಗಿಯೂ ಸಾಗಿರುವದು. ಆದರೆ ಅವು ಒಂದು ಮರ್ಯಾದಿತ ಕ್ಷೇತ್ರದಲ್ಲಿ ಸಹಾಯಕ ಆಗಿರುವದರಿಂದ, ಮತ್ತು ಸಾಮಾಜಿಕ ಆಂದೋಲನದಿಂದ ಕಾರಣಾಂತರಕ್ಕಾಗಿ ದೂರ ಇರುವದರಿಂದ, ಸಮಾಜ ಕಾರ್ಯದಲ್ಲಿ ವಿಶೇಷವಾಗಿ ಅವುಗಳ ಪ್ರಯೋಜನವಾಗಿಲ್ಲ. ಇತ್ತ ಇಂದು ಸಮಾಜಸೇವೆಯ ಆಕಾಂಕ್ಷೆ ಮತ್ತು ತತ್ಪರತೆಯ ಭಾವನೆಯು ಪ್ರಚಲಿತವಾಗಿರುವದಕ್ಕೆ ಈ ಗ್ರಂಥಾಲಯಗಳ ರಚನೆ ಹಾಗೂ ವ್ಯವಸ್ಥೆಗಳು ಪ್ರೇರಕ ಆಗಿರುವವು ಎಂಬಲ್ಲಿ ಸಂಶಯವಿಲ್ಲ. ಆದರೆ ದೊಡ್ಡ ಉದ್ದೇಶಗಳಿಂದ ಆರಂಭವಾದ ಸಾರ್ವಜನಿಕ ಗ್ರಂಥಭಂಡಾರಗಳು ಅಲ್ಪಸಂಖ್ಯೆಯಲ್ಲಿಯೆ ಇದ್ದರೂ, ನಮ್ಮ ದೇಶದಲ್ಲಿ ಕೇವಲ ಗ್ರಂಥಸಂಗ್ರಹ ಮತ್ತು ವಿತರಣೆ ಇದರ ಹೊರತಾಗಿ ಬೇರೆ ವ್ಯಾಪಕ ಹಾಗೂ ಪುನರ್ನಿರ್ಮಾಣ ಕಾರ್ಯದಲ್ಲಿ ಅವು ಮುಂದಾಗಲಿಲ್ಲ. ತಕ್ಕಮಟ್ಟಿಗೆ ತರಬೇತಿಯನ್ನು ಹೊಂದಿದ ಜನರು ಇಂತಹ ಸಾರ್ವಜನಿಕ ಗ್ರಂಥಭಂಡಾರಗಳಲ್ಲಿ ಭಂಡಾರಿಗರಾಗಿದ್ದರೂ ಅವರ ಸೌಜನ್ಯ, ಅವರ ಉತ್ಸಾಹ, ಅವರ ಜ್ಞಾನಸ್ಪರ್ಧೆ ಇವುಗಳ ಮೂಲಕವಾಗಿಯೆ ಹೆಚ್ಚಾಗಿ ಆ ಸಂಸ್ಥೆಗಳು ತಮ್ಮ ಸಂಕುಚಿತ ಎನಿಸುವ ಕ್ಷೇತ್ರದಲ್ಲಿಯೆ ಅದ್ಭುತವಾದ ಕಾರ್ಯವನ್ನು ಮಾಡಿದವು; ಅನುಕರಣೀಯವಾದ ಕೆಲವು ಪದ್ಧತಿಗಳನ್ನು ಆಚರಣೆಯಲ್ಲಿ ತಂದುವು. ಆದರೆ ಆ ಗ್ರಂಥಭಂಡಾರಗಳು ಸ್ಥಾಪಿತವಾದ ಕಾಲ, ಆಗಿನ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿ ಇವುಗಳನ್ನು ನಾವು ಲಕ್ಷ್ಯಕ್ಕೆ ತೆಗೆದುಕೊಂಡರೆ ತಮ್ಮ ಮಿಕ್ಕ ಉದ್ದೇಶಗಳಲ್ಲಿ ಅವು ಸಾಕಷ್ಟು ಯಶಸ್ಸನ್ನು ಸಂಪಾದಿಸದಿದ್ದುದರ ಅರ್ಥವಾಗುವದು.

ಇತ್ತ ವಿಶಿಷ್ಟ ಧಾರ್ಮಿಕ ಇಲ್ಲವೆ ಸಾಮಾಜಿಕ ವರ್ಗಗಳ ಆಶ್ರಯದಲ್ಲಿ ನಡೆಯುತ್ತಿದ್ದ ಗ್ರಂಥಭಂಡಾರಗಳು ತಮ್ಮ ಭಂಡಾರಿಗರ ಮುಖಾಂತರ ವಾಗಿ ಪ್ರಶಂಸನೀಯವಾದ ಕಾರ್ಯವನ್ನು, ತಮ್ಮ ಸಂಗಡಕ್ಕಷ್ಟೆ ಆದರೂ ಆಶ್ಚರ್ಯ ಎನ್ನಿಸುವ ರೀತಿಯಲ್ಲಿ ನಿರ್ವಹಿಸಿರುತ್ತವೆ. ಇಲ್ಲಿ ಭಂಡಾರಿಗರು ಸಾಕಷ್ಟು ಶಿಕ್ಷಣವನ್ನು ಪಡೆದವರು ಇದ್ದಿರಲಿಲ್ಲ; ಅವರಿಗೆ ಹೆಚ್ಚಾಗಿ ಯಾವ ಸೌಕರ್ಯಗಳೂ ದೊರೆಯುತ್ತಿರಲಿಲ್ಲ. ಆದರೂ ಕೂಡ ಕೇವಲ ಆ ಸಮಾಜದ ಬಹುಜನರ ಬೆಂಬಲ, ಆ ಸಮಾಜದಿಂದ ಪಡೆದ ಧನಸಹಾಯ ಮತ್ತು ಗ್ರಂಥಭಂಡಾರದ ಕಾರ್ಯವನ್ನು ಪ್ರೀತಿಯಿಂದ ವಹಿಸಿಕೊಂಡ ವ್ಯಕ್ತಿಯ ಹೃದಯದಲ್ಲಿರುವ, ತನ್ನ ಸಮಾಜದ ಸೇವೆಯನ್ನು ಮಾಡಬೇಕೆಂಬ ದುರ್ದಮ್ಯ ವಾದ ಉತ್ಸಾಹ, ಇವುಗಳ ಮೂಲಕ ಆ ಭಂಡಾರಿಗರ ಕಾರ್ಯವು ಸಮಾಜ ವಿಕಾಸದ ಕ್ಷೇತ್ರದಲ್ಲಿ ತುಂಬ ಯಶಸ್ವಿಯಾಗಿದೆ. ಆದರೆ ಇಂತಹ ಎಲ್ಲ ಗ್ರಂಥ ಭಂಡಾರಗಳ ವ್ಯಾಪ್ತಿಯನ್ನು ನೋಡಿದರೆ ನಮ್ಮ ಜನಸಂಖ್ಯೆಯಲ್ಲಿ ಅದು ತೀರ ಚಿಕ್ಕದಾದ ಪ್ರಮಾಣವಾಗಿರುವದರಿಂದ ಎಷ್ಟೆ ಉತ್ತಮವಾದ ಸಮಾಜ ಸೇವೆಯು ಆ ಭಂಡಾರಿಗರಿಂದ ಜರುಗುತ್ತಿದ್ದರೂ, ಅದು ಕೇವಲ ಚಿಕ್ಕ ದಾದುದು. ಅಂತೆಯೆ ಅಂತಹ ಸಂಸ್ಥೆಗಳ ಮುಖಾಂತರ ಸಾಗಿದ ಕಾರ್ಯದ ಪರಿಣಾಮವು ಸಾಕಷ್ಟು ಬೆಳೆಯದೆ, ಸಾಕ್ಷರತೆಯನ್ನೆ ಮೊದಲು ಮಾಡಿಕೊಂಡು ನಮ್ಮ ಸಮಾಜದ ಸಮಸ್ಯೆಗಳು ಹಾಗೆಯೆ ಉಳಿದಿರುತ್ತವೆ. ಈ ರೀತಿಯ ಪರಿಸ್ಥಿತಿಯು ಮುಂದುವರಿಯಲಿಕ್ಕೆ ಇನ್ನೂ ಒಂದು ಕಾರಣವೆಂದರೆ ಸ್ವಲ್ಪ ಮಟ್ಟಿಗಾದರೂ ಕಾರ್ಯವೆಸಗುತ್ತಿದ್ದ ಇಂತಹ ಸಮಾಜ ಸಂಘಟನೆಯ ಪ್ರಯತ್ನಗಳು ಹೆಚ್ಚಾಗಿ ನಗರಗಳಲ್ಲಿ, ಆ ಆ ನಗರಗಳ ವಿಶಿಷ್ಟ ವಾತಾ ವರಣದ ಪರಿಣಾಮವಾಗಿ ಆಗಿದ್ದುವೆ ಹೊರತು ಅವು ಗ್ರಾಮನಿವಾಸಿಗಳಲ್ಲಿ ಹಬ್ಬಲಿಲ್ಲ. ಮೊದಲೆ ಶಿಕ್ಷಣಸೌಕರ್ಯಗಳು ಇಲ್ಲದ ಹಳ್ಳಿಯ ಭಾಗಗಳಲ್ಲಿ ಇಂತಹ ಸ್ವಯಂಸೇವಕರ ಯೋಜನೆಯ ಅಭಾವದ ಮೂಲಕ ಅಲ್ಲಿಯ ಸ್ಥಿತಿಯು ಇನ್ನೂ ಕಂಗೆಟ್ಟಿದ್ದರೆ ಅದರಲ್ಲಿ ಆಶ್ಚರ್ಯವೇನಿಲ್ಲ. ಯಾವುದೆ ಹೊಸ ವಿಚಾರವು ನಗರಗಳಿಂದ ಹಳ್ಳಿಗಳಿಗೆ ಬರಬೇಕಾದರೆ ದುಸ್ತರವಾಗಿರುವ ಮೂಲಕ ನಮ್ಮ ನಗರ ಮತ್ತು ಗ್ರಾಮಜೀವನದಲ್ಲಿ ಈಗ್ಗೆ ಕೂಡ ಇಂತಹ ಅಂತರವಿರುವದು ಕಂಡುಬರುತ್ತದೆ.

ಇಷ್ಟಾದರೂ ವ್ಯವಸ್ಥೆಯು ಕೆಲಕೆಲವು ಸಂಸ್ಥೆಗಳಲ್ಲಿ ಮತ್ತು ಗ್ರಂಥ ಭಂಡಾರಗಳಲ್ಲಿ ಕಾಣುತ್ತಿದ್ದರೆ, ದೇಶದ ಅಸಂಖ್ಯ ಇತರ ಭಂಡಾರಗಳಲ್ಲಿ ಭಂಡಾರಿಗನಿಗೆ ಯಾವ ಸ್ಥಾನವಾಗಲಿ ಸೌಕರ್ಯವಾಗಲಿ ಇಲ್ಲದಿರುವದು ಸಾರ್ವತ್ರಿಕವಾಗಿದೆ. ಉದಾಹರಣೆಗೆಂದು ಶಾಲೆಗಳೊಳಗಿನ ಗ್ರಂಥಭಂಡಾರ ಅಥವಾ ಒಂದು ಸಣ್ಣ ಊರಿನ ಗ್ರಂಥಭಂಡಾರವನ್ನು ತೆಗೆದುಕೊಳ್ಳಬಹುದು. ಯಾವ ಒಬ್ಬ ಅಧಿಕಾರಿಯ ಪ್ರೀತಿಗಾಗಿಯೊ, ಎಲ್ಲಿಯೊ ಒಬ್ಬ ನಾಗರಿಕನ ಪ್ರೇರಣೆಯ ಮೂಲಕವಾಗಿಯೊ ಸಣ್ಣ ಊರುಗಳಲ್ಲಿ ಗ್ರಂಥಸಂಗ್ರಹವೊಂದು ಹುಟ್ಟಿದಂತೆ ಶಾಲೆಗಳಲ್ಲಿ ಕೂಡ ಒಬ್ಬ ವಿದ್ಯಾಧಿಕಾರಿಯ ಹಟದ ಪರಿಣಾಮವಾಗಿಯೊ, ಮುಖ್ಯಾಧ್ಯಾಪಕರ ವಿಶಾಲಹೃದಯದ ದ್ಯೋತಕವೆಂದೊ ಒಂದು ಗ್ರಂಥಾಲಯವು ಅಸ್ತಿತ್ವದಲ್ಲಿ ಬಂದಿರುವದು. ಆದರೆ ಸಾಮಾನ್ಯವಾಗಿ ಅದನ್ನು ನೋಡಿಕೊಳ್ಳಲಿಕ್ಕೆ ಒಬ್ಬ ಅಲ್ಪಾಧಿಕಾರಿಯಾದ ಮತ್ತು ಚಿಕ್ಕ ಸ್ಥಾನದ ಶಿಕ್ಷಕನನ್ನು ಗೊತ್ತುಮಾಡಿರುವದು ಕಂಡುಬರುತ್ತದೆ. ಆತನ ವಾಡಿಕೆಯ ಸಂಬಳದ ಜೊತೆಯಲ್ಲಿ ಒಂದು ಪೂರಕ ಭತ್ತೆಯನ್ನು ಕೊಟ್ಟು, ಇಲ್ಲವೆ ಬೇರೆ ಯಾವುದಾದರೊಂದು ಯಃಕಶ್ಚಿತ್ ಅನುಕೂಲವನ್ನೊ, ಪ್ರೋತ್ಸಾಹವನ್ನೊ ತೋರಿಸಿ ಅವನಿಗೆ ಆ ಕೆಲಸವನ್ನು ಒಪ್ಪಿಸಿರುವರು. ಆತನಿಗೆ ಗ್ರಂಥಾಲಯದ ವಿಷಯದ ಪರಿಚಯವಿರುವದಿಲ್ಲ; ಬಹುತರವಾಗಿ ಆತನಿಗೆ ಆ ಕಾರ್ಯದಲ್ಲಿ ಅಭಿರುಚಿಯಾಗಲಿ ಉತ್ಸಾಹವಾಗಲಿ ಕಾಣುವದಿಲ್ಲ. ನೂರರಲ್ಲಿ ತೊಂಬತ್ತು ಪಾಲು ಇಂತಹ ಜನರು ಕೇವಲ ಒಂದು ಆರ್ಥಿಕ ದುರ್ದೆಸೆಯ ಮೂಲಕ ಈ ಭಾರವನ್ನು ವಹಿಸಿಕೊಂಡಿರುತ್ತಾರೆ. ಅಧಿಕಾರಿಗಳ ಮನೆಯಿಂದ ಅಥವಾ ವರ್ಗಸ್ಸಿನ ಸದಸ್ಯರಿಂದ ಪತ್ರಿಕೆಗಳನ್ನು ತರುವದು, ಪುಸ್ತಕಗಳನ್ನು ಪಡೆಯುವದು ಮತ್ತು ತಿರುಗಿ ಅವುಗಳನ್ನು ಅವರಿಗೆ ತಲುಪಿಸುವದು, ಇದು ಅವನ ಮಹತ್ತರವಾದ ಕರ್ತವ್ಯಗಳಲ್ಲಿ ಒಂದು

ಈ ರೀತಿಯ ಕಟ್ಟಿನಲ್ಲಿ ಕೆಲಸ ಮಾಡುತ್ತಿರುವ ಭಂಡಾರಿಗನಿಂದ ಸಮಾಜವು ಯಾವ ಸೇವೆಯನ್ನು ನಿರೀಕ್ಷಿಸಬಹುದು? ಅವನು ಗ್ರಂಥಭಂಡಾರದಲ್ಲಿ ಹೊಸ ಸಂಗ್ರಹವೇನಾದರೂ ಆಗುತ್ತಿರುವದೋ ಹೇಗೆ, ಇದ್ದ ಸಂಗ್ರಹವು ಸರಿಯಾಗಿ ಉಪಯೋಗವಾಗುತ್ತಿರುವದೊ ಇಲ್ಲವೊ, ಇವೆ

ಮೊದಲಾದ ಸಂಗತಿಗಳಲ್ಲಿ ಹೇಗೆ ಆಸಕ್ತಿಯನ್ನು ವಹಿಸಬಹುದು? ಅವನಿಗೆ ಸಿಗುತ್ತಿರುವ ಸಂಬಳ ಚಿಕ್ಕದು; ಅವನಿಗೆ ಇರುವ ಅವಕಾಶ ಮರ್ಯಾದಿತ ವಾದುದು; ಅವನಿಗೆ ದೊರೆಯುತ್ತಿರುವ ಗೌರವ ಶೂನ್ಯ. ಮೊದಲೆ ಆ ವಿಷಯವಾಗಿ ಉತ್ಸಾಹವಾಗಲಿ, ಶಿಕ್ಷಣವಾಗಲಿ ಇಲ್ಲದ ಆ ವ್ಯಕ್ತಿಯು ಇಂತಹ ನಿರ್ಬಂಧದ ಸನ್ನಿವೇಶದಲ್ಲಿ ಆದಾವ ಕ್ರಾಂತಿಕಾರಕ ಯೋಜನೆ ಯನ್ನು ಮಂಡಿಸಬಹುದು? ಸಮಾಜದ ಪುನರ್ರಚನೆಯ ಕಾರ್ಯದಲ್ಲಿ ಅವನು ಎಷ್ಟುಮಟ್ಟಿಗೆ ತನ್ನ ಸಹಕಾರವನ್ನು ನೀಡಬಹುದು?

ಈ ಬಗೆಯ ಚಿತ್ರವನ್ನು ನಾವು ಹೆಚ್ಚಾಗಿ ಎಲ್ಲ ಭಂಡಾರಗಳಲ್ಲಿಯೂ ಕಾಣಬಹುದು; ಎಲ್ಲಿ ನೋಡಿದರೂ ಭಂಡಾರಿಗರು ತಮಗಿರುವ ಅವಕಾಶ ಕಡಿಮೆ ಎಂದಾಗಲಿ, ತಮಗೆ ದೈನಂದಿನ ಕಾರ್ಯವನ್ನುಳಿದು ಬೇರೆ ಉತ್ಸವ ಗಳನ್ನು ಯೋಚಿಸಿ, ನಡೆಯಿಸುವಷ್ಟು ತರಬೇತಿ, ಅನುಭವ ಮತ್ತು ಪರಿ ಶ್ರಮಗಳು ಸಾಲವು ಎಂದಾಗಲಿ, ತಾವು ಮಾಡಬೇಕಾದ ಕೆಲಸ ಮಿಕ್ಕ ಸಾಮಾಜಿಕ ಸಂಸ್ಥೆಗಳಲ್ಲಿ ಆಗಂತುಕ ಎನಿಸಬಹುದೆಂದು ತಾವು ಅವುಗಳಿಂದ ದೂರ ಇರುವವರು ಎಂದಾಗಲಿ ಹೇಳುವದು ಸಾಮಾನ್ಯವಾಗಿದೆ. ಈ ಬಗೆಯ ಮನೋಭಾವವು ಮೊದಲು ನಮ್ಮ ಇಡಿಯ ಸಮಾಜದಲ್ಲಿ, ಆ ಮೇಲೆ ನಮ್ಮ ಗ್ರಂಥಭಂಡಾರಗಳ ಆಡಳಿತದಲ್ಲಿ ಮತ್ತು ಕೊನೆಯದಾಗಿ ಭಂಡಾರಿಗರ ಮನಸ್ಸಿನಲ್ಲಿ ಉದ್ಭವ ಹೊಂದಲಿಕ್ಕೆ ನಮ್ಮ ಪರಿಸ್ಥಿತಿಯೆ ಕಾರಣ ಎಂದೆನ್ನ ಬಹುದು.

ನಮ್ಮ ದೇಶದಲ್ಲಿ ಸಮಾಜಸೇವೆಯನ್ನು ತಮ್ಮ ಗುರಿಯನ್ನಾಗಿರಿಸಿ ಕೊಂಡ ಸಂಸ್ಥೆಗಳೆ ತೀರ ಕಡಿಮೆ; ಇದ್ದ ಕೆಲವು ಸಂಸ್ಥೆಗಳಲ್ಲಿ ವೈವಿಧ್ಯವೂ ಇಲ್ಲದಿರುವದೊಂದು ಅದೇ ಬಗೆಯ ವೈಶಿಷ್ಟ್ಯವಾಗಿದೆ. ಹೀಗೆ ವೈವಿಧ್ಯ ವಿಲ್ಲದೆ ಅಥವಾ ನಿಶ್ಚಿತವಾದ ಕಾರ್ಯಕ್ಷೇತ್ರವನ್ನು ಇಟ್ಟುಕೊಳ್ಳದೆ ಸಂಸ್ಥೆ ಗಳು ಹುಟ್ಟುವದರಿಂದ ಬೇರೆ ಯಾವ ರೀತಿಯಿಂದಾದರೂ ಬಾಧೆ ಬರು ವದೊತ್ತಟ್ಟಿಗಿರಲಿ, ಆರ್ಥಿಕ ಅಡಚಣಿಯು ಶೀಘ್ರವಾಗಿಯೆ ಆ ಸಂಸ್ಥೆಗಳಲ್ಲಿ ಅನೇಕ ಸಂಸ್ಥೆಗಳಿಗೆ ಅಂಟಿಕೊಳ್ಳುತ್ತದೆ. ಸಮಾಜದ ಸಹಾಯವನ್ನು ಪಡೆದು ಸಾಗುತ್ತಿರುವದರಿಂದ ತೋರಿಕೆಗಾದರೂ ಕೆಲಕೆಲವು ಸುಧಾರಣೆಗಳನ್ನು ಪ್ರತಿ ವರ್ಷದ ತಮ್ಮ ಆಡಳಿತದಲ್ಲಿ ಸಂಸ್ಥೆಯು ಕೈಕೊಳ್ಳಬೇಕಾಗುತ್ತದೆ.

ಆದರೆ ಅನೇಕ ಸಂದರ್ಭಗಳಲ್ಲಿ ಭಂಡಾರಿಗನ ಸ್ಥಾನಮಾನ, ಅವನ ಯೋಚನೆ-ಯೋಜನೆಗಳು, ಅವನ ಸೇವೆ-ಸಹಾಯ ಇವುಗಳ ಮೇಲೆ ಗದಾಪ್ರಹಾರವಾಗುತ್ತದೆ. ಅದಕ್ಕೆ ಮೂಲಕಾರಣ ನಾವು ಗ್ರಂಥಾಲಯಕ್ಕೆ ಮತ್ತು ಭಂಡಾರಿಗನ ಕಾರ್ಯಕ್ಕೆ ಕೊಟ್ಟ ಗೌಣ ಸ್ಥಾನವೆ ಎಂದೆನ್ನಬಹುದು. ಇನ್ನು ಒಂದು ರೀತಿಯಿಂದ ನಡೆದುಕೊಂಡು ಬಂದ ಇಂತಹ ಹಲಕೆಲವು ಸಂಸ್ಥೆಗಳಲ್ಲಿ ಪರಸ್ಪರ ಸಹಕಾರ ನೀಡಿ ಎಲ್ಲ ಸಂಘಟನೆಗಳು ಸಮಾಜದ ಸಲುವಾಗಿಯೆ ಏರ್ಪಟ್ಟ ಕಾರಣ ಆತ್ಮೀಯ ಭಾವನೆಯಿಂದ ಸ್ಪರ್ಧೆಯನ್ನು ನಡೆಯಿಸಿ ಬೆಳೆಯುವದನ್ನು ಬಿಟ್ಟು ಒಬ್ಬರಿಗೊಬ್ಬರು ಅಸಹಕಾರವನ್ನು ತೋರಿಸಿ, ಒಬ್ಬರನ್ನೊಬ್ಬರು ನಿರ್ಮೂಲ ಮಾಡುವ ದ್ವೇಷದಿಂದಲೆ ಮುಂದುವರಿಯುವದೂ ಒಂದು ಈಗಿನ ನಮ್ಮ ಸಾಮಾಜಿಕ ಸಂಸ್ಥೆಗಳ ಜೀವನದ ಗುಟ್ಟಾಗಿದೆ. ನಮ್ಮ ಸಮಾಜದಲ್ಲಿ ಮತ್ತು ಸಂಘಟನೆಯ ಪದ್ಧತಿಯಲ್ಲಿ ನಾವು ಸರ್ವರೂ ಸುಖದಿಂದ ಬಾಳಬೇಕು ಎಂಬ ಆಶಯದ ಪರಂಪರೆಗಳನ್ನು ಇನ್ನು ಬೆಳೆಯಿಸಿಕೊಳ್ಳಬೇಕಾಗಿದೆ.

ಅದರಂತೆಯೆ ಗ್ರಂಥಭಂಡಾರಗಳಂತಹ ಸಂಸ್ಥೆಗಳ ಆಡಳಿತದಲ್ಲಿಯೂ ವಿಚಿತ್ರವಾದ ವಿಚಾರಗಳು ಆಚರಣೆಯಲ್ಲಿರುತ್ತವೆ. ಮೊದಲನೆಯದಾಗಿ ಸಾರ್ವಜನಿಕ ಸಂಸ್ಥೆಯೆಂದರೆ ಯಾರ ಸಂಸ್ಥೆಯೂ ಅಲ್ಲ; ಅಂತೆಯೆ ಆ ಸಂಸ್ಥೆಯ ಕಾರ್ಯ ಮತ್ತು ಆಸ್ತಿಯಲ್ಲಿ ಯಾರು ಬೇಕಾದವರು ಒಡೆತನವನ್ನು ಸಾಧಿಸಬಹುದು ಎಂಬ ವಿಚಾರಧಾರೆ. ಈ ಬಗೆಯ ಮನೋಭಾವವು ಬೆಳೆದಂತೆ ಮೊದಲು ಆ ಸಂಸ್ಥೆಯನ್ನು ಕಟ್ಟಲಿಕ್ಕೆ ನಿಃಸ್ವಾರ್ಥ ಬುದ್ಧಿಯಿಂದ ಹಗಲಿರುಳು ದುಡಿದ ಮಹನೀಯರು ಎಲ್ಲಿಯೊ ಉಳಿಯುವರು; ಅತ್ತ ಆಸ್ತಿಯ ಲಾಭವನ್ನು ಪಡೆದು, ಕಾರ್ಯದ ಹೊಣೆಯನ್ನು ತಪ್ಪಿಸಿಕೊಳ್ಳಲಿಕ್ಕೆ ಅನೇಕರು ಮುಂದಾಗುವರು. ಸಂಸ್ಥೆಯ ಅಸ್ತಿತ್ವ, ಸಂಸ್ಥೆಯ ಸೇವಕರು, ಮತ್ತು ಸಂಸ್ಥೆಯ ಸೊತ್ತು, ಆಡಳಿತದ ಸಮಿತಿಯಲ್ಲಿ ಸದಸ್ಯರಾಗಿರುವದರಿಂದ ತಮ್ಮವೇ ಎಂಬ ಭಾವನೆಯು ಸಾಮಾನ್ಯವಾಗಿ ಇಂತಹ ಸಂಸ್ಥೆಗಳ ಆಡಳಿತಗಾರರಲ್ಲಿ ಕಂಡುಬರುವದು. ಅಂತೆಯೆ ಆ ಸದಸ್ಯರ ಮನಸ್ಸಿನ ಏರಿಳಿತಗಳಂತೆ ಆ ಸಂಸ್ಥೆಯ ಕಾರ್ಯದಲ್ಲಿಯೂ ಮೇಲು-ಕೀಳುಗಳು ಸಂಭವಿಸುತ್ತವೆ; ಸಂಸ್ಥೆಯ ಸೇವಕರ ವೇಳೆ ಮತ್ತು ಉತ್ಸಾಹಗಳು ಆಡಳಿತಗಾರರ ಇಚ್ಛಾನು

ವರ್ತಿಯಾಗಿರುತ್ತವೆ; ಸಂಸ್ಥೆಯ ಆಸ್ತಿಪಾಸ್ತಿಗಳು ಕಾರ್ಯಮಂಡಲದ ಸದಸ್ಯರ ಅನುಕೂಲತೆಗೆ ಮೊದಲು ಬಾಧ್ಯ ಆಗಿರುತ್ತವೆ. ಸಾಮಾಜಿಕ ಕಾರ್ಯಕ್ಕೆ ತಾವು ಮುಂದಾಗಲಿಕ್ಕೆ, ಕಾರಣಾಂತರದಿಂದ ಒಳ್ಳೆಯ ಸ್ಥಿತಿಯಲ್ಲಿದ್ದ ತಾವು ಸಮಾಜಕ್ಕೆ ಒಂದಿಲ್ಲೊಂದು ರೀತಿಯಿಂದ ತಮ್ಮ ಆ ಸ್ಥಾನದ ಹೊಣೆಗಾರಿಕೆಯೆಂದು ಅಲ್ಪ ಸೇವೆಯನ್ನು ಸಲ್ಲಿಸಲಿಕ್ಕೆಂಬುದು ಕಾರಣವಾಗಿದ್ದು, ಅದು ಅಧಿಕಾರ, ವರ್ಚಸ್ಸು, ಅಭಿಮಾನ, ಧನಪ್ರಾಪ್ತಿ ಮುಂತಾದ ಯಾವ ಬಗೆಯ ಲಾಭವನ್ನು ಪಡೆಯಲಿಕ್ಕಲ್ಲ ಎಂಬ ಸ್ಪಷ್ಟ ವಿಚಾರವು ನಮ್ಮ ಮುಂದಾಳುಗಳಲ್ಲಿ ಇನ್ನೂ ಮೂಡಬೇಕಾಗಿದೆ.

ಇತ್ತ ಸಂಸ್ಥೆಯ ಸೇವಕರು, ಗ್ರಂಥಭಂಡಾರದ ಚಾಲಕರು, ಸಮಾಜದ ಸೇವಾನಿರತರು ಎಂದು ಹೇಳಿಕೊಳ್ಳುವ ಭಂಡಾರಿಗರ ಪರಿಸ್ಥಿತಿಯೂ ಚಿಂತಾಜನಕವೆ ಆಗಿರುವದು. ಇಂತಹದೊಂದು ಯಾವ ಹೊಣೆಯನ್ನೆ ಹೊತ್ತುಕೊಳ್ಳಲಿ, ಆದರಲ್ಲಿ ಮೊದಲು ತಮ್ಮ ಸ್ಥಾನದ ವಿಷಯವಾಗಿ ಸ್ಪಷ್ಟವಾದ ಕಲ್ಪನೆಯನ್ನೂ, ಯೋಗ್ಯವಾದ ಸಿದ್ಧತೆಯನ್ನೂ ಎಷ್ಟೋ ಜನರು ಮಾಡಿಕೊಳ್ಳುವದಿಲ್ಲ. ಗೌರವಕ್ಕಾಗಿ ಕೈಕೊಂಡ ಭಂಡಾರಿಗತನವೆ ಆಗಿರಲಿ, ಸಂಬಳವನ್ನು ಸ್ವೀಕರಿಸಿದ ಭಂಡಾರಿಗರೆ ಆಗಿರಲಿ, ಅವರು ಒಂದು ಸಂಸ್ಥೆಯ ಸೇವಕರು, ವ್ಯಕ್ತಿಗಳ ಸ್ವೇಚ್ಛಾನುಚರರಲ್ಲ ಎಂಬ ಮಾತನ್ನು ತಿಳಿದಿರುವದಿಲ್ಲ; ತಿಳಿದಿದ್ದರೂ ಕೂಡ ಆರ್ಥಿಕ ಪರಾವಲಂಬನದಲ್ಲಿ ಮುಳುಗಿದ ಅವರು ಮತ್ತು ಪ್ರಚಲಿತ ಪರಿಸ್ಥಿತಿಯ ದಾಸರಾಗಿರುವ ಅವರು, ಅದರಂತೆ ನಡೆಯುವ ಧೈರ್ಯವನ್ನಾಗಲಿ, ಸಿದ್ಧತೆಯನ್ನಾಗಲಿ ಪಡೆದವರಾಗಿರುವದಿಲ್ಲ. ಈ ಬಗೆಯ ಸೂಕ್ಷ್ಮ ವಿಷಯಗಳನ್ನು ತಿಳಿದಂತಹ ಸಮಾಜದೊಳಗಿನ ಇತರ ವ್ಯಕ್ತಿಗಳು ನ್ಯಾಯ್ಯವಾದ ಮಟ್ಟಿಗೆ ಸಮಾಜಸೇವೆಯ ಮಹತ್ತರವಾದ ಇಂತಹ ಸ್ಥಳಗಳು ಆದಷ್ಟು ಸ್ವತಂತ್ರ ಮತ್ತು ನಿಃಸ್ಪೃಹ ಅಧಿಕಾರವನ್ನು ಪಡೆಯುವಂತೆ ಹೆಣಗುವದು ಉಚಿತವೆಂದೆನಿಸುವದು. ಮೊದಲಾಗಿ ಭಂಡಾರಿಗರಿಗೆ ಶೈಕ್ಷಣಿಕ ಅರ್ಹತೆಯು ಹೆಚ್ಚಿನದಾಗಿರುವದಿಲ್ಲ; ಎರಡನೆಯದಾಗಿ ಆರ್ಥಿಕ ಸ್ವಾತಂತ್ರ್ಯ ಅಥವಾ ನಿಶ್ಚಿಂತತೆಯು ಅವರಿಗೆ ಲಭ್ಯವಾಗಿರುವದಿಲ್ಲ. ಇದಕ್ಕೆ ಮೇಲಾಗಿ ಅಧಿಕಾರಿಗಳ ಇಲ್ಲವೆ ಆಡಳಿತಗಾರರ ಅನುಚರರಾಗುವಂತಹ ಸನ್ನಿವೇಶವು ಆ ಸಂಸ್ಥೆಯಲ್ಲಿ ಪ್ರಾಪ್ತವಾದರೆ ಆ ಸೇವಕರಿಂದ ಯಾವ ವಿಧಾಯಕ ಅಥವಾ

ಮೌಲಿಕ ಕಾರ್ಯವು ಜರುಗಬಹುದು?

ಇಂದು ನಮ್ಮ ದೇಶದೊಳಗೆ ಗ್ರಂಥಭಂಡಾರದಂತಹ ಸಾವಿರಾರು—ಲಕ್ಷಾಂತರ ಸಾಮಾಜಿಕ ಸಂಘ-ಸಂಸ್ಥೆಗಳು ಅಸ್ತಿತ್ವದಲ್ಲಿವೆ; ದಿನದಿಸಕ್ಕೆ ಹುಟ್ಟುತ್ತಲಿವೆ. ಸ್ವಾತಂತ್ರ್ಯೋತ್ತರ ಪರಿಸ್ಥಿತಿಯಲ್ಲಿ, ನಿರಕ್ಷರತೆಯನ್ನು ಹೋಗಲಾಡಿಸಿ, ಆರ್ಥಿಕ ಮತ್ತು ಸಾಮಾಜಿಕ ಮಟ್ಟವನ್ನು ಹೆಚ್ಚಿಸಿ, ನಮ್ಮ ಪ್ರಜೆಗಳನ್ನು ಸುವಿದ್ಯರೂ, ಸಂಪನ್ನರೂ, ಸುಸಂಸ್ಕೃತರೂ ಆಗಿಸುವಂತೆ ಹೆಣಗಬೇಕಾದ ಈಗಿನ ಕಾಲದಲ್ಲಿ ಇಂತಹ ಎಷ್ಟು ಸಂಸ್ಥೆಗಳಾದರೂ ಬೇಕು ಎನಿಸಬಹುದು. ಸಮಾಜದ ಕಲ್ಯಾಣಕ್ಕಾಗಿ ಈ ಬಗೆಯು ಸಂಘಟನೆಯು ಅವಶ್ಯ ಎಂಬ ಮಾತನ್ನು ಒಪ್ಪಿ, ಆ ಆ ವಿಷಯದಲ್ಲಿ ಕೇವಲ ಸ್ವಯಂಪ್ರೇರಣೆಯಿಂದ ಸಂಸ್ಥೆಗಳನ್ನು ಕಟ್ಟಿ ನಡೆಯಿಸಲಿಕ್ಕೆ ಹಿರಿಯರದಷ್ಟೆ ಅಲ್ಲದೆ ಅದರ ದೈನಂದಿನ ಕಾರ್ಯವನ್ನು ನೋಡಲಿಕ್ಕೆ, ವಿಶಿಷ್ಟ ಕಾರ್ಯಕ್ರಮವನ್ನು ಕೈಕೊಳ್ಳಲಿಕೆ ತಜ್ಞ ಜನರ ಅಗತ್ಯ ಇರುವದು ಎಂಬ ಸಂಗತಿಯನ್ನು ಮನಗಂಡ ಮೇಲೆ ಅವರಿಗೆ ಸಾಕಷ್ಟು ಅವಕಾಶವನ್ನು ಕಲ್ಪಿಸಿ ಕೊಡುವದು ನಮ್ಮ ಕರ್ತವ್ಯವಾಗಿದೆ. ಮೊದಲು ಆ ಕಾರ್ಯದಲ್ಲಿ ತಜ್ಞತೆಯನ್ನು ಪಡೆದವರನ್ನು ಆರಿಸಿ ಅವರನ್ನು ಗ್ರಂಥಾಲಯದ ಸೇವೆಯಲ್ಲಿ ತೆಗೆದುಕೊಳ್ಳಬೇಕು; ಆಮೇಲೆ ಅವರಿಗೆ ತಮ್ಮ ಜ್ಞಾನ, ಅನುಭವ ಮತ್ತು ಉತ್ಸಾಹಗಳಿಗೆ ತಕ್ಕಂತೆ ಆ ಸಂಸ್ಥೆಯ ಪರಿಸ್ಥಿತಿಗೆ ಅನುಗುಣವಾಗಿ ಆಸ್ಪದವನ್ನು ಕಲ್ಪಿಸಿಕೊಡಬೇಕು; ಮತ್ತು ಮೂರನೆಯದಾಗಿ ಅವರು ತಮ್ಮ ಕಾರ್ಯದಲ್ಲಿ ಮತ್ತು ತಮ್ಮಲ್ಲಿ ನೈಶಿಷ್ಟ್ಯವನ್ನು ತೋರಿಸುವಂತೆ ಹೊಸ ಹೊಸ ಸಾಧನಗಳನ್ನು ಅವರಿಗೆ ದೊರಕಿಸಿ ಕೊಡಬೇಕು. ಇದರಿಂದ ಆ ಸೇವಕರ ಕೆಲಸಕ್ಕೆ ಸಾಕಷ್ಟು ಪುರಸ್ಕಾರ ದೊರೆಯುವದಲ್ಲದೆ ಆ ಸಂಸ್ಥೆಯ ಅಸ್ತಿತ್ವವೂ ಆ ಧೋರಣೆಯಿಂದ ಸಾರ್ಥಕತೆಯನ್ನು ಪಡೆಯುವದು.

ಈ ಪ್ರಶ್ನೆಯು ನಮ್ಮನ್ನು ಇನ್ನೊಂದು ದೊಡ್ಡ ಸಮಸ್ಯೆಯತ್ತ ಎಳೆದೊಯ್ಯುತ್ತದೆ. ಧನಸಹಾಯ ಮತ್ತು ಕಾರ್ಯಸ್ವಾತಂತ್ರ್ಯ ಇವುಗಳ ಸಂಬಂಧ ಎಂತಹದಿರಬೇಕು? ಒಂದು ಸಂಸ್ಥೆಗೆ ಜನರ ಬೆಂಬಲವನ್ನು, ಅವರ ಪ್ರೋತ್ಸಾಹಕ ಶಬ್ದಗಳಿಂದಲೂ, ಪೋಷಕ ದುಡ್ಡಿನಿಂದಲೂ ದೊರಕಿಸುವಾಗ್ಗೆ ಮತ್ತು ಸಾರ್ವಜನಿಕರ ಹಿತದ ದೃಷ್ಟಿಯಿಂದ ಕಾರ್ಯಧೋರಣೆಯನ್ನು

ಹಾಕಿಕೊಡುವ ಹೊಣೆಗಾಗಿ, ಆಡಳಿತಗಾರರು ಸಂಸ್ಥೆಯ ಸೇವಕರ ಮೇಲೆ ಎಷ್ಟರ ಮಟ್ಟಿಗೆ ನಿಯಂತ್ರಣವನ್ನು ಹಾಕಬಹುದು ಎಂಬುದೊಂದು ಜಟಿಲ ವಾದ ಸಮಸ್ಯೆಯಾಗಿದೆ. ಇಂತಹ ಪ್ರಮೇಯವು ಕೇವಲ ಒಂದು ಗ್ರಂಥಾ ಲಯ, ಒಂದು ಶಾಲಾಸಮಿತಿ ಮುಂತಾದ ಚಿಕ್ಕಪುಟ್ಟ ಸಂಸ್ಥೆಗಳಿಗಷ್ಟೆ ಅಲ್ಲದೆ, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯುಗಳು ಮತ್ತು ಅಂತಹ ಸಾಮಾಜಿಕ ಕಾರ್ಯದಲ್ಲಿ ತೊಡಗಿದ ಇನ್ನೂ ಅನೇಕ ಹಿರಿಯ ಮತ್ತು ಕಿರಿಯ ಸಂಸ್ಥೆ ಗಳಿಗೂ ಅನ್ವಯಿಸುತ್ತದೆ. ಒಂದು ಬದಿಯಿಂದ ಅಕ್ಷರಜ್ಞಾನವಿಲ್ಲದ, ಅನು ಭವವಿಲ್ಲದ, ಐಕ್ಯತೆಯಿಲ್ಲದ ಆದರೂ ಸ್ವಂತದ ಉದ್ಧಾರವನ್ನು ಒಬ್ಬೊಬ್ಬರಾಗಿ ಮಾಡಿಕೊಳ್ಳುವ ಬದಲು ಸಂಘಟನೆಯಿಂದ ಮಾಡಿಕೊಳ್ಳಬೇಕು ಎಂಬ ಹುಮ್ಮಸ್ಸುಳ್ಳ ನಮ್ಮ ಜನಸಾಮಾನ್ಯರು. ಅವರಿಗೆ ತಮ್ಮ ಹಿತದ ಮತ್ತು ತನ್ಮೂಲಕ ಇಡಿಯ ಸಮಾಜದ ಸುಧಾರಣೆಯ ಮಾತುಗಳನ್ನು ಅವರಿಗೆ ತಿಳಿಯುವಂತಹ ಮಾತುಗಳಲ್ಲಿ ಹೇಳಿದರೆ, ಆ ಕಾರ್ಯದಲ್ಲಿ ಅವರು ಸಂಪೂರ್ಣ ತನ್ಮಯತೆಯನ್ನು ತೋರಿಸುತ್ತಾರೆ. ಈ ವಿಷಯದ ದೃಷ್ಟಾಂತವನ್ನು ನಾವು ಸಹಕಾರಸಂಘಗಳಂತಹ ಚಿಕ್ಕ ಸಂಸ್ಥೆಗಳ ವಿಚಾರದಿಂದಾಗಲಿ, ಪಂಚಾಯತಿ ಯಂತಹ ಆತ್ಮನಿರ್ಣಯ ಮತ್ತು ಸ್ವಶಾಸನದ ಸಂಘಟನೆಯ ಸಹಾಯದಿಂದಾ ಗಲಿ, ಕರ್ನಾಟಕಸಂಘ ಇಲ್ಲವೆ ಅನ್ಯ ಸಾಂಸ್ಕೃತಿಕ ಸಂಸ್ಥೆಯಂತಹ ಆರ್ಥಿಕ ಲಾಭದ ಸಂಬಂಧವಿಲ್ಲದ ಘಟಕದಿಂದಾಗಲಿ ಪಡೆದು ಸ್ಪಷ್ಟಮಾಡಿಕೊಳ್ಳ ಬಹುದು. ಇಂತಹ ಸಂಘಟನೆಗೆ ಯೋಜಕರು ಮಾತ್ರ ಅಗತ್ಯವಾಗಿರುವರು. ಸಮಾಜದ ಕುಂದುಕೊರತೆಗಳನ್ನು ತಿಳಿದವರು, ಊರಿನ ಬೇಡಿಕೆ-ವಾಡಿಕೆ ಗಳನ್ನು ಅರಿತವರು, ಆ ಆ ಗುಂಪಿನ ವೈಶಿಷ್ಟ್ಯ-ವೈವಿಧ್ಯದ ಪರಿಚಯವುಳ್ಳ ವರು ಸಾಮಾನ್ಯವಾಗಿ ಇಂತಹ ಯೋಜಕರ ಹೊಣೆಯನ್ನು ಹೊತ್ತುಕೊಳ್ಳು ತ್ತಾರೆ. ಇನ್ನೊಂದು ಬದಿಯಿಂದ ನಮ್ರನಾದ, ಒಬ್ಬಂಟಿಗನೆನಿಸಿದ, ಹೆಚ್ಚಿನ ಶಿಕ್ಷಣ ಅಥವಾ ಅಧಿಕಾರವಿಲ್ಲದ ಕಾರ್ಯಕರ್ತನಿರುವನು (—ಅವನೇ ಭಂಡಾರಿಗ—ಗ್ರಂಥಭಂಡಾರವೆ ನಮ್ಮ ಸಮಾಜಸೇವೆಯ ಕೇಂದ್ರ ಎಂದು ತಿಳಿದುಕೊಂಡಿರುವದರಿಂದ.) ಆದರೂ ಆತನಿಗೆ ತನ್ನ ಶಿಕ್ಷಣ ಮತ್ತು ತನ್ನ ಕರ್ತವ್ಯ ಇವುಗಳ ಯೋಜನೆಯು ಪೂರ್ಣವಾಗಿದ್ದು ಆ ಸಂಸ್ಥೆಯ ಅಭಿ ವೃದ್ಧಿಗಾಗಿ ಹೆಣಗಬೇಕು ಎಂಬ ಉನ್ನತ ಆಕಾಂಕ್ಷೆಯುಳ್ಳವನಾಗಿದ್ದಾನೆ.

ಅಂತಹ ಸಮಯದಲ್ಲಿ ಜನರ ಪ್ರತಿನಿಧಿಗಳು, ಲೋಕದ ಸಮಸ್ಯೆಗಳನ್ನು ಅರಿತವರು, ಸಮಾಜವಲ್ಲಿ ಪ್ರತಿಷ್ಠೆಯುಳ್ಳವರು ಎಂದು ನಿಯೋಜಕರು ತಮ್ಮ ಯೋಚನೆಗಳಿಗೆ ಮತ್ತು ತಮ್ಮ ಸ್ಥಾನಮಾನಗಳಿಗೆ ಅಲ್ಲಿ ಹೆಚ್ಚಿನ ಮನ್ನಣೆಯನ್ನು ಪಡೆಯಬೇಕೊ, ಅರಿತ ಕೊರತೆಯನ್ನು ಹೋಗಲಾಡಿಸಲಿಕ್ಕೆ ತಜ್ಞರ ಉಪಾಯವೆ ಯೋಗ್ಯ ಎಂದು ಒಂದು ಪ್ರಶ್ನೆಯು ವಿಶಿಷ್ಟವಾದ ತೊಡಕುಗಳಿಂದ ಕೂಡಿರುವದರಿಂದ ಅದರ ಪರಿಹಾರ ಮಾಡುವ ವಿಷಯದಲ್ಲಿ ತರಬೇತಿಯನ್ನು ಪಡೆದವರಿಗೆ ಮಾತ್ರ ಆ ಕೆಲಸವನ್ನು ಬಿಟ್ಟುಕೊಡಬೇಕೊ? ಯೋಜಕರು ಮತ್ತು ತಜ್ಞರು ಇವರ ಸಂಬಂಧವು ಮುಖ್ಯ ಸಮಸ್ಯೆಯನ್ನು ಬಿಡಿಸಲಿಕ್ಕೆ ಎಷ್ಟು ನಿಕಟವಾಗಿರಬೇಕು? ಒಬ್ಬರಿಗೊಬ್ಬರು ಆಧೀನರಾಗಿ ಇಲ್ಲವೆ ಆತಂಕವಾಗಿ ಇಬ್ಬರ ಕೆಲಸಗಳನ್ನು ಕೆಡಿಸಿಕೊಳ್ಳಬೇಕೊ, ಪರಸ್ಪರ ಮಿತಿಗಳನ್ನು ತಿಳಿದುಕೊಂಡು, ಸಹಕರಿಸಿ ಸಂಸ್ಥೆಯ ಉತ್ಕರ್ಷೆಗಾಗಿ ದುಡಿಯಬೇಕೊ? ನಮ್ಮ ದೇಶದಲ್ಲಿ ಸಂಘಗಳ ಮತ್ತು ಸಂಸ್ಥೆಗಳ ರಚನೆಯ ಈ ಪ್ರಶ್ನೆಯು ಈಗ ಎಲ್ಲ ಕಡೆಗಳಲ್ಲಿ ಚರ್ಚೆಯ ವಿಷಯವಾಗಿರುತ್ತದೆ. ಎಷ್ಟೊ ಕಡೆಗಳಲ್ಲಿ ನಿಷ್ಣಾತರು, ತಮ್ಮ ಕ್ಷೇತ್ರದಲ್ಲಿ ಅಮರ್ಯಾದಿತವಾದ ಸ್ವಾತಂತ್ರ್ಯ ಮತ್ತು ಧನಸಹಾಯವು ದೊರೆಯುತ್ತಿದ್ದಾಗ್ಗೆ ಅದರ ದುರ್ಲಾಭವನ್ನು ಪಡೆಯುವ ಉದಾಹರಣೆಗಳೂ ಇರುತ್ತವೆ. ಆದರಂತೆಯೆ ಸರಿಯಾದ ಮಾರ್ಗದರ್ಶನ ಅಥವಾ ಮೇಲ್ವಿಚಾರಣೆಯು ಇಲ್ಲದಿದ್ದಲ್ಲಿ ಸಂಸ್ಥೆಯ ಕಾರ್ಯವು ಸ್ಥಗಿತ ಆಗಿ ಸಂಸ್ಥೆಯು ಅವನತಿಯನ್ನು ಪಡೆದ ದೃಷ್ಟಾಂತಗಳೂ ಹೇರಳವಾಗಿವೆ. ಹೀಗೆ ಕಾರ್ಯವ್ಯವಸ್ಥೆಯ ಎರಡು ಅಂಗಗಳಾದ—ಯೋಜಕರು ಮತ್ತು ಕಾರ್ಯವಾಹಕರು ಇವರು—ಇಬ್ಬರೂ ವಿದ್ಯಾವಂತರು, ಸಮಸ್ಯೆಯನ್ನರಿತವರು ಮತ್ತು ಕಾರ್ಯದಲ್ಲಿ ಉತ್ಸಾಹವುಳ್ಳವರು ಇದ್ದಾಗ್ಗೆ ಈ ವಿಷಯದ ಸ್ಪರ್ಧೆಯು ತೀಕ್ಷ್ಣವೆನಿಸುವಂತಹ ರೂಪವನ್ನು ತಾಳುತ್ತದೆ. ಅಂತಹ ಪರಿಸ್ಥಿತಿಯಲ್ಲಿ ಎರಡೂ ಘಟಕಗಳ ಆವಶ್ಯಕತೆಯು ಸಂಸ್ಥೆಯ ಏಳ್ಗೆಯ ದೃಷ್ಟಿಯಿಂದ ಅಷ್ಟೆ ಆವಶ್ಯಕ ಇದ್ದಾಗ್ಗೆ ಯಾರ ಕ್ಷೇತ್ರವು ಎಷ್ಟು ಎಂಬುದು ನಿಶ್ಚಿತವಾಗಿರಬೇಕು.

ನಿಯೋಜಕರು ಬಹುತರವಾಗಿ ಸ್ವಯಂಪ್ರೇರಣೆಯಿಂದ ಇಲ್ಲವೆ ಜನರ ಪ್ರತಿನಿಧಿಗಳೆಂಬ ಅಧಿಕಾರದಲ್ಲಿ ಅಲ್ಲಿ ಉಪಸ್ಥಿತರಾಗಿರುವರು; ಕಾರ್ಯಕರ್ತರು

ಈಗಿನ ಪರಿಸ್ಥಿತಿಯಲ್ಲಿ ಹೆಚ್ಚಾಗಿ ಸಂಸ್ಥೆಯ ಸೇವಕರಾಗಿ ಆದರೂ ಒಂದು ವಿಶಿಷ್ಟ ಗುಣವಾದ ಆ ವಿಷಯದ ಜ್ಞಾನವನ್ನು ಪಡೆದವರಾಗಿ ಅಲ್ಲಿ ಬಂದಿರುತ್ತಾರೆ. ಇಂತಹ ಎರಡೂ ಬಗೆಯ ಜನರು ಲೋಕನಿಯುಕ್ತರಾಗಿಯೆ ಬಂದ ಸಮಯದಲ್ಲಿ ಕೂಡ ಯೋಜಕರು ಕೇವಲ ಆ ಕಾರ್ಯದ ಆವಶ್ಯಕತೆ, ಅದರ ರೂಪರೇಷೆ, ಅದನ್ನು ಕಾರ್ಯಗತ ಮಾಡಲಿಕ್ಕೆ ಬೇಕಾದ ಸೌಕರ್ಯ-ಸಲಕರಣೆಗಳನ್ನು ದೊರಕಿಸುವದು, ಕೆಲಸವು ಸರಿಯಾಗಿ ಮುಂದೆ ಸಾಗುವಂತೆ ನೋಡಿಕೊಳ್ಳುವದು ಇಂತಹ ಧೋರಣಾತ್ಮಕವಾದ ಹೊಣೆಯುಳ್ಳವರಾಗಿದ್ದು ಕಾರ್ಯವಾಹಕರು ಸಂಸ್ಥೆಯ ಆಡಳಿತಗಾರರು ಹಾಕಿಕೊಟ್ಟ ಧೋರಣೆಯು ಕಾರ್ಯಗತ ಆಗುವಂತೆ ಮಾಡುವವರಾಗಿರುತ್ತಾರೆ. ಮೊದಲು ಆ ಧೋರಣೆಯು ಸಂಸ್ಥೆಯ ವ್ಯಾಪ್ತಿ ಮತ್ತು ಸಂಸ್ಥೆಯಲ್ಲಿ ಕೆಲಸಕ್ಕೆ ಇದ್ದ ಸೇವಕರು ಇವರಿಗೆ ಅನುಗುಣವಾಗಿ—ಅಂದರೆ ಅವರ ಶಕ್ತಿ ಮತ್ತು ತರಬೇತಿಗಳಿಗೆ ನಿಲುಕುವಂತಹದು—ಆಗಿರುವಂತೆ ನೋಡಿಕೊಳ್ಳ ಬೇಕಾಗುತ್ತದೆ. ಆಮೇಲೆ ತಮ್ಮ ವಲಯದಲ್ಲಿ ಸಂಸ್ಥೆಯ ಕಾರ್ಯನೀತಿಯು ರೂಪಗೊಳ್ಳುವಂತೆ ಮಾಡುವವರು ಅವರಾಗಿರುತ್ತಾರಷ್ಟೆ ಅಲ್ಲದೆ ಆ ಕಾರ್ಯಗತವಾದ ವಿಷಯಗಳಿಂದ ಸಂಸ್ಥೆಯು ಸಾರ್ಥಕವಾಗುವಂತೆ ಹೆಣಗುತ್ತಾರೆ. ಸಂಸ್ಥೆಯ ಉದ್ದೇಶವು ಸಫಲವಾಯಿತೆಂದರೆ ಅದು ಮುಂದೆ ಮತ್ತೆ ಹೆಚ್ಚಿನ ಸೇವೆಗೆ ಕೈಹಾಕುವಂತೆ ಪ್ರೇರಣೆಯನ್ನು ಪಡೆಯಬಹುದು ಇಂತು ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷವಾಗಿಯೂ ಕಾರ್ಯವಾಹಕರ ಮೇಲೆ ಸಂಸ್ಥೆಯ ಯಶಸ್ಸು ಸಾಕಷ್ಟು ಅವಲಂಬಿಸಿರುತ್ತದೆ. ಅಲ್ಲದೆ ಭಂಡಾರಿಗತನದಂತಹ ಕೆಲಸವು ಈಗ ಒಂದು ಪ್ರಗತವಾದ, ಪ್ರಬುದ್ಧವಾದ ಮತ್ತು ಜಟಿಲವಾದ ವಿಜ್ಞಾನವಾಗಿರುವದರಿಂದ ಅದನ್ನು ನೋಡಿಕೊಳ್ಳುವವನು ಒಬ್ಬ ತಜ್ಞನಾಗಿ ಪರಿಗಣಿಸಲ್ಪಡುತ್ತಾನೆ. ಅಂತೆಯೆ ಅವನ ಕ್ಷೇತ್ರದಲ್ಲಿ ಬರುವ ಹೊಣೆಯನ್ನು ಅವನ ಪಾಲಿಗೆ ಬಿಟ್ಟುಕೊಡುವದು ಸಂಸ್ಥೆಯ ವ್ಯವಸ್ಥೆಯ ದೃಷ್ಟಿಯಿಂದ ಮಾನ್ಯವಾದುದು.

ಈ ರೀತಿಯ ಕಾರ್ಯವಿಭಜನೆಯು ಇಂದಿನ ಸಂಘಟನೆಯ ವೈಶಿಷ್ಟ್ಯವಾಗಿದೆ; ಆದರೆ ಇಂತಹ ಮುಕ್ತ ಪರಿಸ್ಥಿತಿಯಲ್ಲಿ ಮನಸ್ಪೋಕ್ತ ಪರಿಣಾಮವನ್ನುಂಟುಮಾಡುವಂತಹ ವ್ಯಕ್ತಿಗಳೂ ಇರುತ್ತಾರೆ; ಅದರ ಅನ್ಯಥಾ ಲಾಭವನ್ನು ಪಡೆಯುವ ದೃಷ್ಟಾಂತಗಳೂ ಹೇರಳವಾಗಿರುತ್ತವೆ. ಆದಕಾರಣ

ಆಡಳಿತಗಾರರ ಮಾರ್ಗದರ್ಶನ, ಮೇಲ್ವಿಚಾರಣೆ ಮತ್ತು ನಿಯಂತ್ರಣವಿದ್ದು, ತಮ್ಮ ಕೆಲಸದ ಮಟ್ಟಿಗೆ ಕಾರ್ಯವಾಹಕರನ್ನು ಸ್ವತಂತ್ರರನ್ನಾಗಿ ಬಿಟ್ಟು ಕೊಡುವ ಪದ್ಧತಿಯು ಉತ್ತಮವಾದುದು. ಇವರಿಂದ ಪ್ರಜಾಪ್ರಭುತ್ವದ ನಿಯಮ ಮತ್ತು ತತ್ವಗಳಿಗನುಸಾರವಾಗಿ ಕಾರ್ಯವು ಸಮಾಧಾನಕಾರಕವಾಗಿ ನಡೆಯುವ ಸಂಭವವು ಹೆಚ್ಚಾಗಿರುತ್ತದೆ.

ಇದೇ ಬಗೆಯ ಉದಾರವಾದ ವಾತಾವರಣವು ಭಂಡಾರದಲ್ಲಿ ಕೂಡ ಗೋಚರವಾಗುವಂತೆ ಭಂಡಾರಿಗನು ವ್ಯವಸ್ಥೆಯನ್ನಿಡುವದು ಅಗತ್ಯವಿದೆ. ಗ್ರಂಥಭಂಡಾರದಲ್ಲಿ ಮುಕ್ತದ್ವಾರ ಪದ್ಧತಿಯಂತೆ ಪುಸ್ತಕಗಳನ್ನು ಇಟ್ಟಿರುವದು, ಅಲ್ಲಿ ಪ್ರತಿಯೊಬ್ಬ ವ್ಯಕ್ತಿಯು ತನಗೆ ಬೇಕಾದ ಪುಸ್ತಕ ಇಲ್ಲವೆ ಪತ್ರಿಕೆಗಳನ್ನು ತೆಗೆದುಕೊಳ್ಳಬಹುದು ಎಂಬ ಸೌಕರ್ಯಗಳಿದ್ದರೂ ಅದರ ದುರುಪಯೋಗವಾಗದಂತೆ ನೋಡಿಕೊಳ್ಳುವದು ಭಂಡಾರಿಗನ ಕರ್ತವ್ಯವಾಗಿದೆ. ಇದರರ್ಥ ಪ್ರತಿಯೊಬ್ಬ ಓದುಗನು ತನ್ನ ಕಾರ್ಯದಲ್ಲಿದ್ದಾಗ್ಗೆ ಭಂಡಾರಿಗನ ಕಾಟವು ಅವನ ತಲೆನೋವಾಗಬೇಕೆಂದಲ್ಲ. ಗ್ರಂಥಾಲಯದಲ್ಲಿ ಮಾತುಗಳನ್ನಾಡುತ್ತ ಗದ್ದಲವನ್ನು ಮಾಡದಂತೆ, ಪುಸ್ತಕ ಇಲ್ಲವೆ ಪತ್ರಿಕೆಗಳೊಳಗಿನ ಪುಟಗಳು ಇಲ್ಲವೆ ಭಾಗಗಳು ಹರಿಯದಂತೆ ಅಥವಾ ಕತ್ತರಿಸಲ್ಪಡದಂತೆ ಹಾಗೂ ಓದಲಿಕ್ಕೆಂದು ಬಂದವರು ಅದನ್ನು ಬಿಟ್ಟು ಅಲ್ಲಿ ನಿದ್ರಾವಶರಾಗಿ ವಿಶ್ರಾಂತಿಯನ್ನು ಪಡೆಯುತ್ತಿರದಂತೆ ಆತನು ನೋಡಿಕೊಳ್ಳಬೇಕಾಗುತ್ತದೆ. ಈ ಬಗೆಯ ಮೇಲ್ವಿಚಾರಣೆಯು ಕೇವಲ ಬಾಹ್ಯಸ್ಥಿತಿಯನ್ನು ಅವಲಂಬಿಸಿದ್ದರೆ ಪ್ರತಿಯೊಬ್ಬ ವಾಚಕನಿಗೆ ತನಗೆ ಬೇಕಾದ ಸಾಮುಗ್ರಿಯು ತೀವ್ರವಾಗಿ ಪಡೆಯುವಂತೆ, ಆತನು ತನ್ನ ಮಟ್ಟಿಗೆ ತಾನು ವಾಚನವನ್ನು ಶಾಂತರೀತಿಯಿಂದ ಮುಂದುವರಿಸಲಿಕ್ಕೆ ಸೌಕರ್ಯಗಳು ಅನಾಯಾಸವಾಗಿ ದೊರೆಯುವಂತೆ ಅಂತರ್ವ್ಯವಸ್ಥೆಯನ್ನು ಇಡುವದು ಭಂಡಾರಿಗನ ಕರ್ತವ್ಯವಾಗಿರುತ್ತದೆ.

ಗ್ರಂಥಭಂಡಾರದ ಸದಸ್ಯರ ದೃಷ್ಟಿಯಿಂದ ಪ್ರತಿಯೊಬ್ಬರಿಗೂ ಸಮಾನ ಸೌಕರ್ಯಗಳು ಮತ್ತು ಸಮಾನ ಅಧಿಕಾರಗಳು ಸಿಗುವಂತೆ ಭಂಡಾರಿಗನು ಪ್ರಯತ್ನ ಮಾಡುವ ಹಾಗೆಯೆ, ಭಂಡಾರದೊಳಗಿನ ಪ್ರತಿಯೊಬ್ಬ ಸೇವಕನಲ್ಲಿಯೂ ತನ್ನ ಕೆಲಸದ ವಿಷಯವಾಗಿ ಉತ್ಸಾಹವೂ, ಸಂಸ್ಥೆಯಲ್ಲಿ ಸಹಕಾರ

ದಿಂದ ಮಾಡಬೇಕಾದ ಕಾರ್ಯದ ಬಗ್ಗೆ ಆತ್ಮೀಯತೆಯೂ ಇರುವಂತೆ ಭಂಡಾರಿಗನು ವಾತಾವರಣವನ್ನು ಇಡಬೇಕಾಗುತ್ತದೆ. ಗ್ರಂಥಭಂಡಾರದ ಪ್ರತಿಯೊಬ್ಬ ಸೇವಕನು ತನ್ನ ಸ್ಥಾನಕ್ಕನುಗುಣವಾಗಿ ಆ ಸಂಸ್ಥೆಯ ಏಳ್ಗೆಗಾಗಿ ತನ್ನ ಕಾಣಿಕೆಯನ್ನು ಅರ್ಪಿಸಬೇಕು ಅಷ್ಟೆ ಅಲ್ಲದೆ, ಆ ಆ ಕಾರ್ಯದಲ್ಲಿ ತನ್ನ ವೈಶಿಷ್ಟ್ಯವು ಮೂಡುವಂತೆ ಆತನು ತನ್ನ ಶಿಕ್ಷಣ ಮತ್ತು ತನ್ನ ಉತ್ಸಾಹಗಳನ್ನು ಅಣಿಮಾಡುವಂತೆ ಭಂಡಾರಿಗನು ಪ್ರತಿಯೊಬ್ಬ ಸೇವಕನನ್ನು ಪ್ರೋತ್ಸಾಹಿಸಬೇಕಾಗುತ್ತದೆ. ಸಂಸ್ಥೆಯ ವ್ಯವಸ್ಥೆಯಲ್ಲಿ ಯಾವನೊಬ್ಬ ಸೇವಕನು ತನ್ನ ಮನೆತನ, ತನ್ನ ಶ್ರೀಮಂತಿಕೆ ಅಥವಾ ತನ್ನ ಸಂಗಡದಂತಹ ಬಾಹ್ಯಕಾರಣಗಳಿಗಾಗಿ ವಿಶಿಷ್ಟ ಸೌಕರ್ಯಗಳನ್ನು ಪಡೆಯದಂತೆ ಭಂಡಾರಿಗನು ನೋಡಿಕೊಳ್ಳಬೇಕು. ಅನ್ಯ ರೀತಿಯಿಂದ ಸ್ವಾರ್ಥವನ್ನು ಸಾಧಿಸಿಕೊಳ್ಳುವದಕ್ಕೆಂದು ಒಲವಿನ ಸ್ಥಾನವನ್ನಾಗಲಿ, ಬೇರೆ ಮಾನವನ್ನಾಗಲಿ ಯಾರೂ ಪಡೆಯದೆ ಕೇವಲ ತನ್ನ ಕಾರ್ಯಕ್ಷಮತೆಯ ಮಾಸದಂಡವೆ ಪ್ರತಿಯೊಬ್ಬ ಸೇವಕನ ಮೌಲ್ಯಮಾಪನವಾಗುವದು ವಿಹಿತವಾದುದು.

ಈ ರೀತಿಯ ಸ್ವೇಚ್ಛೆಯಿಂದ ನಡೆಯುವದಕ್ಕೆಂದು ಸಾಮಾಜಿಕ ಸಂಸ್ಥೆಯಲ್ಲಿ ವಾತಾವರಣವನ್ನು ಕಲ್ಪಿಸಿದರೆ ಅಲ್ಲಿ ಕಾರ್ಯವು ಸಾಗುವದೆಂತು ಎಂಬ ಪ್ರಶ್ನೆಯು ತತ್‌ಕ್ಷಣವಲ್ಲಿ ಹುಟ್ಟಬಹುದು. ಇಂತಹ ಪ್ರಜಾರಾಜ್ಯದ ತತ್ವಗಳ ಪರಿಣಾಮವು ಹೆಚ್ಚು ವಿಲಂಬ ಮತ್ತು ವೆಚ್ಚ ಎಂಬ ಮಾತನ್ನು ನಾವು ರಾಜನೀತಿಯ ವಿಷಯದಲ್ಲಿ ಕಂಡುಕೊಳ್ಳುತ್ತೇವೆ. ಅದೇ ಫಲವು ಅತ್ಯಂತ ವೇಗದಿಂದಲೂ ಕೌಶಲ್ಯದಿಂದಲೂ ನಡೆಯಬೇಕಾದ ಗ್ರಂಥಭಂಡಾರದಂತಹ ಸಾಮಾಜಿಕ ಸಂಸ್ಥೆಯ ಕಾರ್ಯದಲ್ಲಿಯೂ ಕಂಡುಬಂದರೆ ನಮ್ಮ ಉದ್ಧಾರವಾಗುವದು ಮುಂದಿನ ಶತಮಾನದಲ್ಲಿಯೆ ಎಂದು ಕೂಡ ಯಾರಾದರೂ ಮೂದಲಿಸಬಹುದು. ಆದರೆ ನಾವು ಇಲ್ಲಿಯ ವರೆಗೆ ರಾಜಕೀಯ ಕ್ಷೇತ್ರದಲ್ಲಿಯೆ ಆಗಲಿ ಸಾಮಾಜಿಕ ಸಂಸ್ಥೆಗಳಲ್ಲಿಯೆ ಆಗಲಿ ಕೇವಲ ಪ್ರಜಾಧಿಪತ್ಯದ ತತ್ವಕ್ಕನುಗುಣವಾಗಿ ಪ್ರಜೆಗಳ ಅಧಿಕಾರಗಳನ್ನು ಮಾತ್ರ ತಿಳಿದುಕೊಂಡಿದ್ದೇವೆ; ಪಡೆಯಲಿಕ್ಕೆ ಪ್ರಯತ್ನಿಸುತ್ತಿದ್ದೇವೆ. ಆದರೆ ಅಂತಹ ಆಧಾರದ ಮೇಲೆ ನಡೆಯಿಸಬೇಕಾದ ಸಂಸ್ಥೆಗಳ ಕಾರ್ಯವಾಹಕರಲ್ಲಿ ಎಂತಹ ಸಂಯಮ ಇರಬೇಕಾಗುವದು, ಯಾವ ಬಗೆಯ ಶಿಸ್ತನ್ನು ಅವರು ಪಾಲಿಸ

ಬೇಕಾಗುವದು ಎಂಬ ವಿಷಯವನ್ನು ನಾವಿನ್ನೂ ಮನಗಂಡಿಲ್ಲ. ಒಂದು ಸಂಸ್ಥೆಯನ್ನು ಕಟ್ಟುವದೆಂದರೆ ಕೇವಲ ಆತ್ಮಪ್ರೌಢಿಮೆಗಾಗಿ, ಸ್ವಯಂಪ್ರಶಂಸೆಗಾಗಿ ಎಂಬ ವಿಚಾರವು ಯೋಜಕರಲ್ಲಿ ರೂಢವಾಗಿರುವಂತೆಯೆ, ಅದರ ಕಾರ್ಯಾಲಯದಲ್ಲಿ ಸೇರುವದೆಂದರೆ ಅದರ ಲಾಭವನ್ನು ಪಡೆಯಲಿಕ್ಕೆ, ಅದರಿಂದ ಗೌರವವನ್ನು ಗಳಿಸಲಿಕ್ಕೆ ಎಂಬ ನಡತೆಯು ಕಾರ್ಯವಾಹಕರಲ್ಲಿ ಮನೆಮಾಡಿಕೊಂಡಿರುತ್ತದೆ. ಒಮ್ಮೆ ಒಂದು ಸಂಘವಾಗಲಿ, ಸಂಸ್ಥೆಯಾಗಲಿ ಸಮಾಜದ ಬೆಂಬಲ, ಸರಕಾರದಿಂದ ಹಣ ಮತ್ತು ಕಾರ್ಯವಾಹಕರಿಂದ ಸೇವೆಗಳನ್ನು ಪಡೆಯ ಹತ್ತಿತು ಎಂದು ತಿಳಿದ ಕೂಡಲೆ ಯೋಜಕರು ಅದರ ವಿಷಯವಾಗಿ ನಿಶ್ಚಿಂತರಾಗಿದ್ದು, ಕ್ರಮವಾಗಿ ಅಲಕ್ಷ್ಯವನ್ನು ತಳೆಯುವದರಿಂದ ಆ ಸಂಸ್ಥೆಯ ಬೀಳುಗಾಲವು ಆರಂಭವಾಗುತ್ತದೆ. ಅದರಂತೆಯೆ ಒಂದು ಸಾರೆ ಎಲ್ಲ ಸೇವಕರಿಗೆ ಅವರವರ ಕಾರ್ಯವನ್ನು ಹಂಚಿಕೊಟ್ಟ ಮೇರೆಗೆ ಅವರಿಂದ ಕೆಲಸವು ಸಾಗುತ್ತದೆ ಎಂದು ತಿಳಿದ ಭಂಡಾರಿಗನು ಕೈಕಟ್ಟಿಕೊಂಡು ಕುಳಿತು, ತನ್ನ ಭಾರದ ಕಾರ್ಯವಲ್ಲಿ ಅನಾಸ್ಥೆಯನ್ನು ತಳೆದರೆ ಸೇವಕರಲ್ಲಿ ಆಲಸ್ಯವು ಸೇರುತ್ತದೆ; ಕಾರ್ಯವು ವಿಲಂಬವಾಗುತ್ತದೆ; ಸಂಸ್ಥೆಯ ಹೆಸರು ಹಿಂದೆ ಬೀಳುತ್ತದೆ. ಅಂತೆಯೆ ವಿತರಣೆಯಂತೆಯೆ ವಿಚಾರಣೆಯಲ್ಲಿಯೂ ಭಂಡಾರಿಗನು ದಕ್ಷನಾಗಿರುವದು ಅತ್ಯಗತ್ಯವಾಗಿರುತ್ತದೆ.

ಕೇವಲ ಗ್ರಂಥಭಂಡಾರದ ಒಳಗಿನ ರಚನೆಯಲ್ಲಿ ಅಷ್ಟೆ ಭಂಡಾರಿಗನು ಜಾಗ್ರತೆಯುಳ್ಳವನಾಗಿದ್ದರೆ ಆ ಸಂಸ್ಥೆಯ ಕಾರ್ಯವು ಸಾಕಷ್ಟು ಸಫಲವಾಗುವದಿಲ್ಲ. ಭಂಡಾರವು ಸೇವೆಯನ್ನು ಸಲ್ಲಿಸುತ್ತಿರುವ ಸಮಾಜ ಮತ್ತು ಉದ್ದೇಶಗಳ ಮೇರೆಗೆ ಅದರ ಭಂಡಾರಿಗನು ಅದಕ್ಕೆ ಸಂಬಂಧಿಸಿದ ಇತರ ಘಟಕಗಳ ಸಂಗಡ ಸಂಪರ್ಕವನ್ನಿಟ್ಟುಕೊಳ್ಳಬೇಕಾಗುತ್ತದೆ; ಅವುಗಳ ನಿಕಟ ಪರಿಚಯವನ್ನು ಮಾಡಿಕೊಂಡು, ಆ ಆ ಸಂಸ್ಥೆಗಳ ಸಹಕಾರದಲ್ಲಿ ಗ್ರಂಥಾಲಯವು ಯಾವ ಅನ್ಯ ಸಮಾಜಸೇವೆಯ ಕಾರ್ಯಕ್ರಮವನ್ನು ಯೋಚಿಸಬಹುದು ಎಂಬುದನ್ನು ತಿಳಿದವನಾಗಿರಬೇಕಾಗುತ್ತದೆ. ಗ್ರಂಥಭಂಡಾರವು ಒಂದು ಶಾಲೆಯ ಅಥವಾ ಮಹಾವಿದ್ಯಾಲಯದ ಅಂಗವಾಗಿದ್ದರೆ ಮೊದಲಾಗಿ ಭಂಡಾರಿಗನು ಆ ಸಂಸ್ಥೆಯಲ್ಲಿ ಕಲಿಸುತ್ತಿರುವ ಎಲ್ಲ ವಿಷಯಗಳ ಪಾಠಕ್ರಮವನ್ನು, ಪಠ್ಯಪುಸ್ತಕಗಳನ್ನು ತಿಳಿದವನಾಗಿರಬೇಕು; ಆಮೇಲೆ

ವರ್ಗಗಳಲ್ಲಿ ತಿಳಿಸಿಕೊಡುವ ವಿಷಯವು ಹೆಚ್ಚು ಮನದಟ್ಟಾಗುವಂತೆ ಮತ್ತು ಅದರ ಜ್ಞಾನವ್ಯಾಪ್ತಿಯು ಬೆಳೆಯುವಂತೆ ಬಾಹ್ಯಸಾಮುಗ್ರಿಗಳನ್ನು ಒದಗಿಸಿ ಕೊಡುವ ಸಾಮರ್ಥ್ಯವನ್ನೂ ಸಮಾಚಾರವನ್ನೂ ಆತನು ಪಡೆದವನಾಗಿರ ಬೇಕಾಗುತ್ತದೆ. ಭೂಗೋಲದ ಅಥವಾ ಭೂಮಿತಿಯ ಪಾಠಗಳು ಸ್ಪಷ್ಟ ವಾಗಲಿಕ್ಕೆ ಆತನು ಸರಕಾರದ ಅಥವಾ ಸ್ಥಾನಿಕ ಸಂಸ್ಥೆಯ ಸ್ಥಾಪತ್ಯವಿಭಾಗದ ಮತ್ತು ಬೇರೆ ಭಾಗಗಳ ಸಹಾಯವನ್ನು ಪಡೆದು ಅಲ್ಲಿರುವ ವಿಶಿಷ್ಟ ಉಪ ಕರಣಗಳ ಲಾಭವನ್ನು ವಿದ್ಯಾರ್ಥಿಗಳಿಗೆ ಮಾಡಿಕೊಡುವ ವಿಚಾರ–ಯೋಗ್ಯತೆ ಗಳು ಇದ್ದವನಾಗಿರಬೇಕು. ಸಾಹಿತ್ಯದ ಅಥವಾ ಭಾಷಾಶಾಸ್ತ್ರದ ಒಂದು ಪಾಠಮಾಲೆಯು ಒಂದು ವರ್ಗದಲ್ಲಿ ನಡೆದಾಗ್ಗೆ ಅದಕ್ಕೆ ಸಹಾಯಕ ವಿಷಯ ವಾಗಿ ಊರೊಳಗಿನ ಒಬ್ಬ ಗಣ್ಯಸಾಹಿತಿಯ ಇಲ್ಲವೆ ವಿದ್ವಾಂಸನ ಭಾಷಣ ವನ್ನು ಏರ್ಪಡಿಸಿ ಆ ವಿಷಯದಲ್ಲಿ ಹೆಚ್ಚಿನ ಆಸಕ್ತಿಯು ಹುಟ್ಟುವಂತೆ ಮಾಡ ಲಿಕ್ಕೆ ಭಂಡಾರಿಗನು ಉದ್ಯುಕ್ತನಾಗಬೇಕು. ಈ ರೀತಿಯಾಗಿ ಆ ಸನ್ನಿವೇಶ ದಲ್ಲಿ ಪೂರಕಜ್ಞಾನವು ಲಭಿಸುವಂತೆ ತನ್ನ ಸಂಗ್ರಹದೊಳಗಿನ ಪಠ್ಯೇತರ ಪುಸ್ತಕಗಳಿಂದಲೂ ತನ್ನ ಮಾಹಿತಿಯೊಳಗಿನ ಶಾಲೇತರ ಸಾಮುಗ್ರಿಗಳಿಂದಲೂ ಭಂಡಾರಿಗನು ಪ್ರಯತ್ನ ಪಡಬೇಕು.

ಇತ್ತ ಸಾರ್ವಜನಿಕ ಗ್ರಂಥಭಂಡಾರಗಳಲ್ಲಿ ಇದಕ್ಕೂ ಒಂದು ಹೆಜ್ಜೆ ಮುಂದೆ ಹೋಗುವ ಧೈರ್ಯ ಮತ್ತು ಯೋಗ್ಯತೆಯು ಭಂಡಾರಿಗನಲ್ಲಿ ಬೇಕಾಗುತ್ತವೆ. ಸಾಮಾಜಿಕನು ಒಬ್ಬ ಸಾಕ್ಷರಪ್ರಜೆಯಾಗಿ ಬಾಳಿ ಬೆಳೆಯ ಬೇಕಾದುದಷ್ಟೆ ಅಲ್ಲದೆ ಆತನು ಸಂತುಷ್ಟನೂ, ಸುಸಂಸ್ಕೃತನೂ ಆಗುವಂತೆ ಮಾಡುವದು ಇಂದಿನ ರಾಷ್ಟ್ರಗಳ ಆದರ್ಶವಾಗಿರುತ್ತದೆ. ಅಂತೆಯೆ ಈ ಪ್ರಯತ್ನ ದಲ್ಲಿ ಸಾಕಷ್ಟು ತನ್ನ ಸಹಕಾರವನ್ನು ನೀಡಬೇಕಾದರೆ ಭಂಡಾರಿಗನು ಕೇವಲ ಗ್ರಂಥಪಾನಿಯಾಗಿ ಕುಳಿತರೆ ಆಗುವದಿಲ್ಲ. ಆತನು ತನ್ನ ಸಂಸ್ಥೆಯು ಎಂತಹ ಒಂದು ಸಮಾಜದ ಅಂಗವಾಗಿರುವದು ಎಂಬುದನ್ನು ಅರಿತವನಾಗಿರಬೇಕಾಗು ತ್ತದೆ. ತನ್ನ ಸದಸ್ಯರಲ್ಲಿ ಓದು ಬಲ್ಲವರೆಷ್ಟು ಜನ, ಲೇಖಕರು ಎಷ್ಟು ಜನ, ಯಂತ್ರಜ್ಞರು ಯಾರು, ಸಂಗೀತ ಬಲ್ಲವರು ಎಲ್ಲಿರುವರು ಎಂಬಿವೇ ಮೊದಲಾದ ವಿವರಗಳನ್ನು ಆತನು ತಿಳಿದಿರಬೇಕು. ಸಮಾಜದಲ್ಲಿ ಆ ಆ ಕಲೆಯನ್ನಾಗಲಿ, ವಿಜ್ಞಾನವನ್ನಾಗಲಿ ಪಡೆದ ಜನರು ಗ್ರಂಥಾಲಯದ ಸದಸ್ಯರಾಗಿರದಿದ್ದರೆ

ಅವರನ್ನರಸಿಕೊಂಡು ಹೋಗಿ ಗ್ರಂಥಭಂಡಾರವೆ ಮೊದಲಾದ ಸಾಮಾಜಿಕ ಸಂಸ್ಥೆಗಳು ಕೈಕೊಂಡ ಮಹತ್ಕಾರ್ಯದಲ್ಲಿ ತಮ್ಮ ನೆರವನ್ನು ನೀಡುವದಕ್ಕಾಗಿ ಅವರು ಭಂಡಾರದ ಪೋಷಕರಾಗಬೇಕು ಎಂದು ಹೇಳಿ ಅವರ ಸಹಕಾರವನ್ನು ಸಮಾಜದ ಸೇವೆಗಾಗಿ ಪಡೆಯಬೇಕು. ಈ ಬಗೆಯ ಕಾರ್ಯವನ್ನೆ ಉದ್ದೇಶವನ್ನಾಗಿರಿಸಿಕೊಂಡ ಅನ್ಯ ಸಂಸ್ಥೆಗಳ ಸಹಾಯವನ್ನು ಭಂಡಾರಿಗನು ಕುಳಿತಲ್ಲಿಂದ ಅಪ್ಪಣೆಮಾಡಿ ಪಡೆಯಲಿಕ್ಕೆ ಪ್ರಯತ್ನ ಮಾಡದೆ ತಾನೇ ಮುಂದಾಗಿ ಹೋಗಿ ಅವುಗಳ ಲಾಭವನ್ನು ಪಡೆಯುವದಕ್ಕಾಗಿ ಹೆಣಗಬೇಕು. ಗ್ರಂಥಾಲಯದಲ್ಲಿ ನಡೆಯಬೇಕಾದ ಒಂದು ಉತ್ಸವ ಇಲ್ಲವೆ ಒಂದು ಕಾರ್ಯಕ್ರಮಕ್ಕೆ ಆ ಸನ್ನಿವೇಶದಲ್ಲಿ ದೊರೆಯಬೇಕಾದ ಎಲ್ಲ ಸಲಕರಣೆಗಳ ವಿಷಯವಾಗಿ ಭಂಡಾರಿಗನು ಸಮಾಚಾರವುಳ್ಳವನಾಗಿರಬೇಕು; ಅವುಗಳ ಸಂಪರ್ಕವನ್ನು ಇಟ್ಟುಕೊಂಡವನಾಗಿರಬೇಕು.

ಈ ಬಗೆಯ ಬಾಹ್ಯಸಂಬಂಧವನ್ನು ಆತನು ವಿವಿಧರೀತಿಯಿಂದ ಇಟ್ಟುಕೊಳ್ಳಬಹುದು. ಮೊದಲಾಗಿ ವಿವಿಧ ತಜ್ಞರಿಗೆ ಇಲ್ಲವೆ ವಿವಿಧ ವಿಷಯಗಳ ಸಂಸ್ಥೆಗಳಿಗೆ ಆವಶ್ಯಕ ಎನಿಸುವ ವಾಚನಸಾಮಗ್ರಿಯನ್ನು ಸಂಗ್ರಹಿಸಿ ಆತನು ಆ ಆ ಕಲಾವಿದರನ್ನು ಅಥವಾ ವಿಜ್ಞಾನಿಗಳನ್ನು ಗ್ರಂಥಾಲಯದತ್ತ ಆಕರ್ಷಿಸಬಹುದು. ಎರಡನೆಯದಾಗಿ ಅವರ ಭಾಷಣಗಳನ್ನಾಗಲಿ, ಚರ್ಚೆಯನ್ನಾಗಲಿ ಏರ್ಪಡಿಸಿ ಅವರ ಅನುಭವ ಮತ್ತು ಜ್ಞಾನದ ಲಾಭವು ಸಮಾಜಕ್ಕೆ ದೊರೆಯುವಂತೆ ಮಾಡಬಹುದು. ಮೂರನೆಯದಾಗಿ ಅವರ ಸಹಾಯದಿಂದ ಗ್ರಂಥಾಲಯದ ಆಶ್ರಯದಲ್ಲಿಯೆ ಒಂದು ಗುಂಪನ್ನು ನಿರ್ಮಿಸಿ ಆ ಗುಂಪಿನಲ್ಲಿ ಒಂದು ಕಲೆಯ ವಿಷಯವಾಗಿ ಇಲ್ಲವೆ ಬೇರೆ ವಿಜ್ಞಾನದಲ್ಲಿ ಹೆಚ್ಚು ಆಸಕ್ತಿಯು ಹುಟ್ಟುವಂತೆ ಪ್ರಯತ್ನಿಸಿ ಆ ನಿಷ್ಣಾತರ ಲೋಕಪ್ರಿಯತೆಯನ್ನು ಬೆಳೆಯಿಸಬಹುದು. ಈ ಸಂಬಂಧದಲ್ಲಿ ಭಂಡಾರಿಗನು ಕೇವಲ ಆ ಸಂಸ್ಥೆಯ ಕಾರ್ಯವಾಹಕನಾಗಿರುವನಷ್ಟೆ ಅಲ್ಲದೆ ಒಂದೊಂದು ವಿಷಯವನ್ನು ಪ್ರಸರಿಸುವ ಮಟ್ಟಿಗೆ ಆತನು ಯೋಜಕನೂ ಆಗಿರಬೇಕಾಗುತ್ತದೆ. ಆ ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಪ್ರತಿಯೊಂದು ಸಂಘದ ಮತ್ತು ಅನೇಕ ಜನ ನಿಪುಣರ ಪರಿಚಯವು ಭಂಡಾರಿಗನಿಗಿದ್ದು, ಸಂಘದ ಘಟನೆ ಇಲ್ಲವೆ ನಿಯಮಗಳಾಗಲಿ, ವ್ಯಕ್ತಿಗಳ ಅಸಮಾಧಾನ ಇಲ್ಲವೆ ಅಸೂಯೆಯಾಗಲಿ ಕಾರ್ಯಕ್ಕೆ ಅಡ್ಡಿಯಾಗ

ದಂತೆ ಆತನು ದಕ್ಷನಾಗಿರಬೇಕು. ಅವಶ್ಯಕ ಎನಿಸಿದಲ್ಲಿ ಒಂದು ಸಂಸ್ಥೆಯು ಸಹಾಯವು ಮತ್ತೊಂದು ಸಂಸ್ಥೆಗೆ ಬೇಕೆನಿಸಿದ್ದರೂ ಕೆಲವು ತಾಂತ್ರಿಕ ಅಡಚಣೆಗಳ ಮೂಲಕ ಅದು ಸಾಧ್ಯವಾಗದಿದ್ದರೆ ಸಮಾಜಸೇವೆಯೆ ತನ್ನ ಗುರಿಯೆಂದು ನಡೆಯುತ್ತಿದ್ದ ಆ ಸಂಸ್ಥೆಗಳಲ್ಲಿ ಅಂತಹ ಕೃತ್ರಿಮವಾದ ಸೆವಗಳ ಗೋಡೆಯು ಆತಂಕವಾಗದಂತೆ ಆ ತೊಂದರೆಯನ್ನು ದೂರಮಾಡುವ ಹಂಚಿಕೆಯನ್ನು, ದೂರದೃಷ್ಟಿಯನ್ನು ಭಂಡಾರಿಗನು ತೋರಿಸಬೇಕಾಗುತ್ತದೆ. ಇದು ವಿವಿಧ ಉದ್ದೇಶಗಳ ಬೇರೆ ಬೇರೆ ಸಂಸ್ಥೆಗಳ ವಿಷಯದಲ್ಲಿ ಅಷ್ಟೆ ಅನ್ವಯಿಸದೆ ಒಂದೇ ಉದ್ದೇಶವಿದ್ದ, ಬೇರೆ ಬೇರೆ ಕಾರ್ಯಕ್ಷೇತ್ರಗಳಿದ್ದ ಗ್ರಂಥಭಂಡಾರಗಳಿಗೂ ಸಂಬಂಧಿಸಿರುತ್ತದೆ. ಸಮಾಜದ ಸದಸ್ಯರೆಲ್ಲರೂ ಬಂಧುಗಳು, ಒಡಹುಟ್ಟಿದವರು, ಸಹಭಾಗಿಗಳು ಎಂದು ಭಾವಿಸಬೇಕು ಎಂದಿದ್ದಕ್ಕೆ ಇಂತಹ ಸಹಕಾರವನ್ನು, ಪರಸ್ಪರ ಸಹಾಯವನ್ನು ಗ್ರಂಥಭಂಡಾರವು ಮೊದಲು ಕಾರ್ಯರೂಪದಲ್ಲಿ ತರಬೇಕಾಗುತ್ತದೆ.

ಇಷ್ಟೆಲ್ಲ ವ್ಯಾಪಕವಾದ ಕಾರ್ಯಭಾರವನ್ನು ಭಂಡಾರಗನು ವಹಿಸಿಕೊಳ್ಳಬೇಕಾದರೆ ಅವನಿಗೆ ಶಿಕ್ಷಣವು ಎಷ್ಟಾಗಿರಬೇಕು ಮತ್ತು ಅವನ ಅನುಭವವು ಎಂತಹದಾಗಿರಬೇಕು ಎಂಬ ಪ್ರಶ್ನೆಯನ್ನು ಸ್ವಾಭಾವಿಕವಾಗಿಯೆ ಯಾರಾದರೂ ಕೇಳಬಹುದು. ಈ ಪ್ರಶ್ನೆಯು ಭಂಡಾರಿಗನು ನೋಡಿಕೊಳ್ಳಬೇಕಾದ ಭಂಡಾರದ ಮೇಲೆಯೆ ಹೆಚ್ಚಾಗಿ ಅವಲಂಬಿಸಿರುತ್ತದೆ. ಆ ಗ್ರಂಥಭಂಡಾರವು ಸೇವೆಯನ್ನು ಸಲ್ಲಿಸುತ್ತಿರುವ ಕ್ಷೇತ್ರ, ಅದು ಓದುಗರ ಬೇಡಿಕೆಗಳನ್ನು ಪೂರೈಸುತ್ತಿರುವ ಪ್ರಮಾಣ ಇದರ ಮೇಲೆ ಭಂಡಾರಿಗನ ಸಿದ್ಧತೆಯು ಮತ್ತು ಅರ್ಹತೆಯು ಅವಲಂಬಿಸಿರುತ್ತದೆ. ಗ್ರಂಥಾಲಯದ ವಿಷಯ, ಗ್ರಂಥಾಲಯದ ಸಂಗ್ರಹ ಮತ್ತು ಗ್ರಂಥಭಂಡಾರದ ವಾಚಕರ ಮಟ್ಟ ಹಾಗೂ ಬೇಡಿಕೆಗಳು ಇವುಗಳ ಸಾಕಷ್ಟು ನಿಕಟವಾದ ಪರಿಚಯವು ಭಂಡಾರಿಗನಿಗೆ ಇರಬೇಕಲ್ಲದೆ, ಗ್ರಂಥಭಂಡಾರ ವಿಜ್ಞಾನವು ಅವನಿಗೆ ಅವಗತವಾಗಿರುವದು ಮೂಲ ವಿಚಾರ. ಇದ್ದ ಪರಿಸ್ಥಿತಿಯಲ್ಲಿಯೆ ಭಂಡಾರದ ಉಪಯೋಗವನ್ನು ತಾನು ಕಲಿತ ಶಾಸ್ತ್ರದ ಸಹಾಯದಿಂದ ಹೇಗೆ ಹೆಚ್ಚಿಸಬಹುದು ಎಂಬುದನ್ನು ಆತನು ಅರಿತವನಾಗಿರಬೇಕು. ಆದರೆ ಇಂತಹ ಜ್ಞಾನ ಮತ್ತು ಈ ಬಗೆಯ ತರಬೇತಿಗಳಲ್ಲದೆ ಆ ಸಂಸ್ಥೆಯ ವಿಷಯವಾಗಿ ಆತನಿಗೆ ಅಪರಿಮಿತ

ವಾದ ಉತ್ಸಾಹವಿರುವದು ಹೆಚ್ಚು ಸಹಾಯಕವೆನಿಸಬಹುದು. ಗ್ರಂಥ ಭಂಡಾರದ ಕಾರ್ಯವೆಂದರೆ ಸಂಬಳಕ್ಕೆ ತಕ್ಕ ದುಡಿತವೆಂಬ ಭಾವನೆ ಇರದೆ, ಸಮಾಜಸೇವೆಯು ಒಂದು ಸುಸಂಧಿಯುದು ಎಂಬ ದೃಷ್ಟಿಯಿದ್ದ ಭಂಡಾರಿಗನು ಆ ಸಂಸ್ಥೆಗೆ ಹೆಚ್ಚಿನ ಹೆಸರನ್ನು ತರಬಹುದು.

ಆದರೆ ಒಂದು ಸಂಸ್ಥೆಯ ಸೇವೆಯಲ್ಲಿ ಸೇರಲಿಕ್ಕೆ ಮೊದಲು ಭಂಡಾರಿಗನು ಪಡೆದಿರಬೇಕಾದ ಅರ್ಹತೆಗಿಂತ ಅವನು ಆ ಕಾರ್ಯದಲ್ಲಿ ತೊಡಗಿದ ನಂತರ ಅವನಿಗೆ ದೊರೆಯಬೇಕಾದ ಶಿಕ್ಷಣದ ಸೌಕರ್ಯಗಳು ಅವನಿಗೆ ನಿಜವಾದ ಅವಕಾಶವನ್ನು ಕಲ್ಪಿಸಿಕೊಡುವವು ಮತ್ತು ಅವನ ಯೋಗ್ಯತೆಯನ್ನು ಇನ್ನೂ ಹೆಚ್ಚಿಸುವವು. ಅಂತೆಯೆ ಭಂಡಾರದಂತಹ ಸಮಾಜಸೇವೆಯ ಸಂಸ್ಥೆಯಲ್ಲಿ ಇತರ ಅಂತಹ ಸಂಸ್ಥೆಗಳಂತೆ ಪ್ರಯೋಗದಿಂದ ಪರಿಣಾಮವನ್ನು ಪಡೆಯುವ, ಅನುಭವದಿಂದ ಪಾಠವನ್ನು ಕಲಿಯುವ ಸೌಲಭ್ಯವಿರುವದು ಮಹತ್ವದ ಮಾತಾಗಿದೆ. ಇದರರ್ಥ ಪ್ರತಿಯೊಬ್ಬ ಕಾರ್ಯವಾಹಕನು ಇಂತಹ ಸಂಸ್ಥೆಯನ್ನು ತನ್ನ ಪ್ರಯೋಗಶಾಲೆಯೆಂದಾಗಲಿ ಆಡುಂಬೊಲವೆಂದಾಗಲಿ ಮಾಡಿಕೊಂಡು ಅದರ ಪ್ರತ್ಯಕ್ಷಾಪ್ರತ್ಯಕ್ಷ ಲಾಭಗಳನ್ನು ತಾನು ಪಡೆಯಬೇಕು ಎಂದಲ್ಲ. ಆ ಸಂಸ್ಥೆಯ ಕಾರ್ಯ ಮತ್ತು ಅದರ ಸಫಲತೆಗಳಿಗೆ ಅನುರೂಪವಾಗಿ ಪ್ರತಿಯೊಬ್ಬ ಭಂಡಾರಿಗನಿಗೆ ಸಾಕಷ್ಟು ಅನುವು ಇರುವದು ಸೂಕ್ತವಾಗಿದೆ. ತಜ್ಞನೆಂದು ತಾನು ತಿಳಿದ ವಿಷಯಗಳನ್ನು ಆಚರಣೆಯಲ್ಲಿ ತರಲಿಕ್ಕೆ, ಕಾರ್ಯವಾಹಕನೆಂದು ಆತನ ಗೈಮೆಗೆ ಬಿಟ್ಟ ನೀತಿಯನ್ನು ಸಂಸ್ಥೆಯ ಉತ್ಕರ್ಷಕ್ಕೆಂದು ಅಣಿಮಾಡಲಿಕ್ಕೆ ಆತನಿಗೆ ಸಾಕಷ್ಟು ಸ್ವಾತಂತ್ರ್ಯವೂ ಉತ್ಸಾಹವೂ ಅದರಲ್ಲಿ ಹುಟ್ಟುವದು ಅನಿವಾರ್ಯವೆನಿಸೀತು. ಪ್ರತಿಯೊಬ್ಬ ಕಾರ್ಯವಾಹಕನು ತಾನು ಬೆಳೆಯುತ್ತ ಸಂಸ್ಥೆಯನ್ನು ಬೆಳೆಯಿಸುವದು ಪ್ರಜಾಧಿಪತ್ಯ ಆಡಳಿತದ ತತ್ವಗಳಲ್ಲಿ ಒಂದಾಗಿದೆ. ಇತ್ತ ಸಂಸ್ಥೆಯ ಸೌಕರ್ಯಗಳನ್ನು ತನ್ನ ಉನ್ನತಿಗಾಗಿ ಪಡೆದುಕೊಂಡು ಸಂಸ್ಥೆಯನ್ನು ಕಡೆಗಣಿಸುವದು ಸ್ವಾರ್ಥವೆನಿಸಿದರೆ, ಅತ್ತ ತನ್ನ ಏಳ್ಗೆಯನ್ನು ಮಾಡಿಕೊಳ್ಳದೆ ಸಂಸ್ಥೆಯ ಒಂದು ನಿರ್ದಿಷ್ಟ ಕಾರ್ಯದಲ್ಲಿಯೆ ಮಗ್ನನಾಗಿರುವದು ಸಂಸ್ಥೆಯ ಹಿತವನ್ನು ಹಿಮ್ಮೆಟ್ಟಿದಂತೆ ಆಗುತ್ತದೆ. ಸಂಸ್ಥೆಯ ಅಭಿವೃದ್ಧಿಯು ತನ್ನ ಪ್ರಯತ್ನದಿಂದ ಸಾಧ್ಯವಿದೆ ಎಂಬ ದೃಢವಿಶ್ವಾಸದಿಂದ ಆತನು ಮುಂದುವರಿಯ

ಬೇಕಲ್ಲದೆ ಸಂಸ್ಥೆಯ ಸಾಫಲ್ಯವು ತನಗೆ ಹಿತಕಾರಿಯಾದುದು ಎಂಬುದನ್ನು ಆತನು ತಿಳಿದುಕೊಂಡವನಾಗಿರಬೇಕು. ಅಂತೆಯೆ ಹೊಸಹೊಸ ಪ್ರಯೋಗಗಳಲ್ಲಿ ಆತನು ಆಸಕ್ತನಾಗಿರಲಿಕ್ಕೆ, ನಿತ್ಯನೂತನ ಪ್ರಯತ್ನದಲ್ಲಿ ಭಂಡಾರಿಗನಿಗೆ ಅಭಿರುಚಿಯು ಹುಟ್ಟುವಂತೆ ಗ್ರಂಥಭಂಡಾರದಲ್ಲಿ ಸೌಕರ್ಯಗಳಿರಬೇಕು; ಆತನು ಕೈಕೊಂಡ ಕಾರ್ಯದ ಪರೀಕ್ಷೆ ಮತ್ತು ಪ್ರಶಂಸೆಗಳಾಗುವಂತೆ ಅಲ್ಲಿ ವ್ಯವಸ್ಥೆಯಿರಬೇಕು. ಕಾಲಕಾಲಕ್ಕೆ ಬೇರೆ ಸಂಸ್ಥೆಗಳಲ್ಲಿ ನಡೆದ ಸಂಗತಿಗಳನ್ನು ತಿಳಿಯಲಿಕ್ಕೆ ಮತ್ತು ಗ್ರಂಥಭಂಡಾರ ಪ್ರಪಂಚದಲ್ಲಿ ಜರುಗುತ್ತಿದ್ದ ನವೀನ ರೀತಿಗಳ ಮತ್ತು ನೂತನ ತತ್ವಗಳ ಪರಿಚಯವನ್ನು ಆತನು ಮಾಡಿಕೊಳ್ಳಲಿಕ್ಕೆ ಗ್ರಂಥಭಂಡಾರದ ಆಡಳಿತವು ಸಂಧಿಗಳನ್ನು ಒದಗಿಸಿಕೊಡಬೇಕು.

ಹೊರಗಿನಿಂದ ಅಥವಾ ಎರಡನೆಯವರಿಂದ ನಿರ್ಮಿಸಲಾದ ಇಂತಹ ಸನ್ನಿವೇಶಗಳಂತೆಯೆ ಭಂಡಾರಿಗನ ಶಿಕ್ಷಣದ ಪ್ರಗತಿಗೆ ಮತ್ತು ಅವನ ಮನಸ್ಸು ಆ ಸಂಸ್ಥೆಯ ಕಾರ್ಯದಲ್ಲಿ ಪರಿಪಾಕ ಹೊಂದಲಿಕ್ಕೆ ಅವನು ಸ್ವತಃ ನಿರ್ಮಿಸಿಕೊಂಡ ಕೆಲವು ನಿಯಮ ಮತ್ತು ನೀತಿಗಳು ಹಾಗೂ ತನ್ನ ಪ್ರಯತ್ನದಿಂದ ಗ್ರಂಥಾಲಯದಲ್ಲಿ ಆಚರಣೆಗೆ ತಂದ ವ್ಯವಸ್ಥೆ ಮತ್ತು ಪದ್ಧತಿಗಳು ಹೆಚ್ಚು ಪ್ರಯೋಜಕ ಆಗುತ್ತವೆ. ಭಂಡಾರದ ಆಡಳಿತಗಾರರಲ್ಲಿ ಆತ್ಮೀಯತೆಯನ್ನು, ಗೌರವವನ್ನು ತಳೆಯುವದರಿಂದ ಗ್ರಂಥಭಂಡಾರಿಗನಿಗೆ ತನ್ನ ಬೇಡಿಕೆಗಳನ್ನು ಅವರ ಮುಂದಿರಿಸಲಿಕ್ಕೂ ಅವರ ತೊಡಕುಗಳನ್ನು ತಾನು ಅರಿತು ಅದಕ್ಕೆ ತಕ್ಕಂತಹ ಸೂಚನೆಗಳನ್ನು ಮಂಡಿಸಲಿಕ್ಕೂ ಆತನಿಗೆ ಹೆಚ್ಚು ಅನುಕೂಲವಾಗುತ್ತದೆ. ಆಡಳಿತದ ಪ್ರಗತಿಯಲ್ಲಿ ತನ್ನ ಕಾರ್ಯಕೌಶಲ್ಯವೆ ವಿಶೇಷವಾಗಿ ಕಾರಣವಾದುದು ಎಂಬುದನ್ನರಿತ ಭಂಡಾರಿಗನು ಅದರ ಮೂಲಕ ತನ್ನ ವರ್ಚಸ್ಸನ್ನು, ಶ್ರೇಷ್ಠತೆಯನ್ನು ಬೆಳೆಯಿಸಿಕೊಳ್ಳಲಿಕ್ಕೆ ಅವಣಿಸಬೇ. ಗ್ರಂಥಾಲಯದ ಆಡಳಿತವು ಸುಗಮವಾಗಿಯೂ ಲಾಭದಾಯಕವಾಗಿಯೂ ಸಾಗಲಿಕ್ಕೆ ತನ್ನ ವಿನಮ್ರ ಮತ್ತು ನಿಃಸ್ವಾರ್ಥ ಆಚರಣೆಯು ಮುಖ್ಯವಾದುದು ಎಂಬ ವಿಚಾರದಿಂದ ತನ್ನ ಕಾರ್ಯದಲ್ಲಿ ನಿರತನಾಗಿದ್ದರೆ ಅಪ್ರತ್ಯಕ್ಷವಾಗಿಯಾದರೂ ನಿಶ್ಚಿತವಾಗಿ ತನ್ನ ಉನ್ನತಿಯನ್ನು ಆತನು ಸಾಧಿಸಿಕೊಳ್ಳುವನು.

ಅದರಂತೆಯೆ ಸೇವಕರ ಪಥಕವು ತನ್ನ ಸಂಗಡ ಕೆಲಸಮಾಡುತ್ತಿರು

ವದೇ ಹೊರತಾಗಿ ತನಗೆ ಅಧೀನ ಇಲ್ಲವೆ ಅನುಚರರಾಗಿ ಅಲ್ಲ ಎಂಬ ಮಾತನ್ನು ಆತನು ಸ್ಪಷ್ಟಮಾಡಿಕೊಂಡಿದ್ದರೆ ಅದರಿಂದ ತನಗೇ ಲೋಕಶಿಕ್ಷಣದ ಲಾಭವು ದೊರೆತಂತಾಗುವದು. ಗ್ರಂಥಭಂಡಾರದ ಕಾರ್ಯವನ್ನು ಮಾಡುತ್ತಿದ್ದ ಚಿಕ್ಕ ದೊಡ್ಡ ವಿಭಾಗಗಳ ಅಧಿಕಾರಿಗಳೆಲ್ಲರ ಸಂಗಡ ಭಂಡಾರಿಗನು ಪ್ರೀತಿಪೂರ್ವಕ ವಾಗಿಯೂ, ನಿಃಸಂಕೋಚದಿಂದಲೂ ವರ್ತಿಸಿದರೆ ಗ್ರಂಥಾಲಯದ ಕಾರ್ಯವು ಸಲೀಲವಾಗಿ ನಡೆಯುವದು ಮಾತ್ರವಲ್ಲ; ಪ್ರತಿಯೊಂದು ವಲಯದಲ್ಲಿ ಆ ಆ ಕಾರ್ಯನಿರತರು ಎದುರಿಸುತ್ತಿರುವ ಸಮಸ್ಯೆಗಳು ಮತ್ತು ಪಡುತ್ತಿರುವ ಅನುಭವ ಇವುಗಳ ಪರಿಚಯವು ಹೆಚ್ಚು ಶೀಘ್ರವಾಗಿಯೂ ಸುಲಭವಾಗಿಯೂ ಭಂಡಾರಿಗನಿಗೆ ಆಗುವದರಿಂದ ಆತನಿಗೆ ಆ ವಿಷಯದ ಸಂಪೂರ್ಣ ಜ್ಞಾನವು ಪ್ರಾಪ್ತವಾಗುವದು. ಆ ಅನುಕೂಲತೆಯ ಫಲವಾಗಿ ಇತ್ತ ಆಡಳಿತದಲ್ಲಿ ಭಂಡಾರಿಗನು ಅವಶ್ಯಬಿದ್ದ ಪರಿವರ್ತನೆಗಳನ್ನು ಮಾಡುವದಕ್ಕೆ ಸುಸಮರ್ಥ ನಾಗುವನಲ್ಲದೆ ಅತ್ತ ಗ್ರಂಥಾಲಯದ ವ್ಯವಸ್ಥೆಯ ಕಾರ್ಯಾಚರಣೆಯಲ್ಲಿ ತಕ್ಕ ಸುಧಾರಣೆಗಳನ್ನು, ಉಪಾಯಗಳನ್ನು ಯೋಜಿಸಲಿಕ್ಕೆ ಪಾತ್ರನಾಗು ವನು. ಕಾರ್ಯನಿರ್ವಹಣದಲ್ಲಿ ಆತನು ವಹಿಸುವ ದೈನಂದಿಕ ಆಸ್ಥೆ-ಉತ್ಸಾಹಗಳೆ ಅವನಿಗೆ ಈ ರೀತಿಯಾಗಿ ನಿತ್ಯನೂತನ ಪಾಠಗಳಾಗಿ ಪರಿಣಮಿ ಸುತ್ತವೆ; ಕಾರ್ಯವೆ ಅವನಿಗೆ ಪಾಠಶಾಲೆಯಾಗುತ್ತದೆ; ಆಸಕ್ತಿಯೆ ಮಾರ್ಗ ದರ್ಶಕ ಆಗಿ ಮುಂದೆ ನಡೆಯಿಸುತ್ತದೆ.

ಇಷ್ಟು ನಿಶ್ಚಿತವಾಗಿದ್ದರೂ ಇವುಗಳಿಗಿಂತ ಒಳ್ಳೆಯ ಪರಿಣಾಮವನ್ನುಂಟು ಮಾಡುವ ಶಕ್ತಿಯು ವಾಚಕವರ್ಗದಲ್ಲಿ ಇರುತ್ತದೆ. ವಾಚಕರ ಸಂಗಡ ಭಂಡಾರಿಗನು ಇಟ್ಟುಕೊಂಡ ಸಂಬಂಧವು ಅವನ ಕಾರ್ಯದ ಗತಿಯನ್ನು ನಿರ್ಣಯಿಸುತ್ತದೆ; ಅವನ ಯೋಗ್ಯತೆಯ ಮಟ್ಟವನ್ನು ಗೊತ್ತುಪಡಿಸುತ್ತದೆ. ಗ್ರಂಥಭಂಡಾರದಲ್ಲಿ ಸದಸ್ಯರು ಕೇವಲ ಒಂದು ಆಶ್ರಯಸ್ಥಾನನೆಂಬ ಭಾವನೆ ಯಿಂದಾಗಲಿ, ಬಾಡಿಗೆಯ ಮನೆಯೆಂಬ ವಿಚಾರದಿಂದಾಗಲಿ ಪ್ರವೇಶ ಮಾಡ ದಂತೆ ನೋಡಿಕೊಳ್ಳುವ ಹೊಣೆಯು ಭಂಡಾರಿಗನದಾಗಿರುತ್ತದೆ. ಪ್ರತಿಯೊಬ್ಬ ಓದುಗನ ಸ್ವಾಗತವನ್ನು ಬಯಸಿ, ಆತನ ಬೇಡಿಕೆಯನ್ನು ತಿಳಿದು, ಅದನ್ನು ಪೂರೈಸಲಿಕ್ಕೆ ಭಂಡಾರಿಗನು ಸ್ವತಃ ಮಾಡುವ ಏರ್ಪಾಡಿನಿಂದ ವಾಚಕನು ಇಡಿಯ ಗ್ರಂಥಾಲಯದ ಅಭಿಪ್ರಾಯವನ್ನು ಮಾಡಿಕೊಳ್ಳುತ್ತಾನೆ. ಕೇವಲ

ನಿರ್ಜೀವಿಗಳಾಗಿರುವ ಸೂಚೀಪಟ್ಟಿಗಳು, ಗ್ರಂಥಗಳನ್ನು ತೋರಿಸುವ ಮುಕ್ತ ಫಲಕಗಳು, ಇವುಗಳಿಂದ ವಾಚಕನ ಸಮಾಧಾನವಾಗದೆ ಗ್ರಂಥಭಂಡಾರದಲ್ಲಿ ಬಂದೊಡನೆ ಆತನು ಕೇಳುವ ಒಂದೆರಡು ಸಾಮಾನ್ಯ ಪ್ರಶ್ನೆಗಳಿಗೆ ಆತನು ಪಡೆಯುವ ಉತ್ತರದಿಂದ ಮತ್ತು ತನ್ನ ಕಾರ್ಯಕ್ಕೆ ಅಲ್ಲಿ ವೈಯಕ್ತಿಕವಾಗಿ ಸೇವಕದಲವು ಒದಗಿಸಿಕೊಡುವ ಸೌಕರ್ಯಗಳು ಇವುಗಳಿಂದ ಆತನು ತನ್ನ ಕಾರ್ಯಸಾಫಲ್ಯವನ್ನು ಸರಿಯಾಗಿ ಪಡೆಯುತ್ತಾನೆ. ಅಂತೆಯೆ ಇತ್ತೀಚೆಗೆ ಸಾರ್ವಜನಿಕ ಗ್ರಂಥಭಂಡಾರಗಳಲ್ಲಿಯೆ ಆಗಲಿ, ಮಿಕ್ಕ ಸಾಮಾನ್ಯ ಗ್ರಂಥಾಲಯಗಳಲ್ಲಿಯೆ ಆಗಲಿ ಮಾರ್ಗದರ್ಶಕ ಭಂಡಾರಿಗನ ಆವಶ್ಯಕತೆ ಮತ್ತು ಸ್ಥಾನಗಳು ಮಹತ್ವವನ್ನು ಪಡೆದಿವೆ. ಈ ಬಗೆಯ ಉಚ್ಚವರ್ಗದ ಮತ್ತು ವಿಶಿಷ್ಟರೀತಿಯ ಅನುಲಯ ಸೇವೆಯಿಂದ ಓದುಗನಿಗೆ ತನ್ನ ಕಾರ್ಯವು ಸುಲಭ ಎನಿಸುತ್ತದೆ; ಅಂತೆಯೆ ಗ್ರಂಥಾಲಯದ ಉದ್ದೇಶವು ಕೂಡ ಹೆಚ್ಚು ಸಮರ್ಪಕವಾಗಿ ಸಾಧಿಸುತ್ತದೆ. ಇತ್ತ ಇಂತಹ ಕಾರ್ಯದಲ್ಲಿ ತೊಡಗಿದ ಭಂಡಾರಿಗನಿಗೆ ತನ್ನ ವಾಚಕವೃಂದದ ಸಮಸ್ಯೆಗಳು ತಿಳಿದು, ಅದರಿಂದ ತನ್ನ ಶಿಕ್ಷಣವಾಗುವದಷ್ಟೆ ಅಲ್ಲದೆ ತನ್ಮೂಲಕ ಗ್ರಂಥಭಂಡಾರದ ಉಪಯುಕ್ತತೆಯನ್ನು ಹೆಚ್ಚಿನ ವಾಸ್ತವಿಕತೆಯಿಂದ ಬೆಳೆಯಿಸಲು ಅನುಕೂಲವಾಗುತ್ತದೆ

ಈ ಸಂದರ್ಭಸೇವೆಯು ಇಂದು ಎಲ್ಲ ಗ್ರಂಥಭಂಡಾರಗಳಲ್ಲಿಯೂ ಪ್ರಾಧಾನ್ಯವನ್ನು ಪಡೆಯುತ್ತಲಿದೆ. ಇದು ಭಂಡಾರಿಗನ ವಿದ್ವತ್ತೆಯನ್ನಾಗಲಿ, ವರ್ಚಸ್ಸನ್ನಾಗಲಿ ಪುಟಗೊಳಿಸುವ ಇನ್ನೊಂದು ಸಾಧನವಾಗಿರದೆ, ಆತನ ಸೇವೆಯನ್ನು ಸ್ಪಷ್ಟಪಡಿಸುವ ಮತ್ತು ಸಾರ್ಥಕಗೊಳಿಸುವ ಸುಸಂಧಿಯೆಂದು ತಿಳಿದುಕೊಂಡು ಅದರಲ್ಲಿ ಮನಸ್ಸು ಮಾಡಿದರೆ ಗ್ರಂಥಭಂಡಾರದ ಪ್ರಯೋಜನ ಹೆಚ್ಚಾಗುವದು.

ಇನ್ನು ಭಂಡಾರಿಗನ ಸ್ಥಳಕ್ಕೆ ಎಂತಹ ಯೋಗ್ಯತೆಯ ಮತ್ತು ಮನೋಭಾವದ ಜನರು ಅರ್ಹರಾಗಿರುವರು ಎಂಬುದನ್ನು ಇಲ್ಲಿಯವರೆಗೆ ಯೋಚಿಸಿದ ಸಂಗತಿಗಳ ಮೇಲಿಂದ ತಿಳಿದುಕೊಳ್ಳೋಣ. ಮೊದಲನೆಯದಾಗಿ ಗ್ರಂಥಭಂಡಾರದ ಸ್ಥಾಪನೆ, ವ್ಯವಸ್ಥೆ ಮತ್ತು ಆಡಳಿತದಲ್ಲಿ ಭಂಡಾರಿಗನು ಅತ್ಯಂತ ಉತ್ಸಾಹಿಯಾಗಿಯೂ ಅಧಿಕಾರದಿಂದಲೂ ಆಚರಿಸಬೇಕಾದುದರಿಂದ ಆತನೊಬ್ಬ ಗೌರವ ಕಾರ್ಯವಾಹಕನಾಗಿದ್ದರೆ ಸರಿಯಾಗುವದೆ? ಈ [illegible]ಡಿ

ನಿಂದ ಇಂದಿನ ನಮ್ಮ ಆರ್ಥಿಕ ಹೀನಾವಸ್ಥೆಯಲ್ಲಿ ಸಾಕಷ್ಟು ಮಿತವ್ಯಯವಾಗ ಬಹುದು ಮತ್ತು ಶೈಕ್ಷಣಿಕ ಪ್ರಗತಿಯು ಸಾಕಷ್ಟು ಪ್ರಮಾಣದಲ್ಲಿ ಆಗಿರದ ನಮ್ಮ ದೇಶದಲ್ಲಿ ಕಾರ್ಯನಿರ್ವಾಹಕರು ದೊರೆಯುವದೆ ಕಠಿಣವಾಗಿರುವದ ರಿಂದ, ಯೋಜಕ ಜನರೊಳಗಿನ ಒಬ್ಬನನ್ನು ಸನ್ಮಾನಾರ್ಥ ಭಂಡಾರಿಗ ಎಂದು ಕೆಲಸಮಾಡಲಿಕ್ಕೆ ಮನವೊಲಿಸಿದರೆ ಗ್ರಂಥಾಲಯದ ಕಾರ್ಯವು ಸಮ ರ್ಪಕವಾಗಿ ಸಾಗಬಹುದು. ಈ ರೀತಿಯ ವಾದವು ಆರಂಭದಲ್ಲಿ ಸಮಂಜಸ ವೆಂದು ಕಂಡರೂ ಕಾಲಾಂತರದಲ್ಲಿ ತೊಂದರೆಗಳನ್ನು ತಂದೊಡ್ಡುತ್ತದೆ. ಗೌರವಪೂರ್ಣವಾದ ಸ್ಥಾನದಿಂದ ಕೆಲಸ ಮಾಡುವ ಆ ವ್ಯಕ್ತಿಯು ಇತರ ಕಾರ್ಯಮಂಡಲದ ಸದಸ್ಯ ಜನರಿಂದ ಮೊದಲಿನಂತೆ ಗೌರವವನ್ನು ಪಡೆಯದೆ ಹೋಗಬಹುದು; ಇಲ್ಲವೆ ಗೌರವ ಮತ್ತು ಅಧಿಕಾರ ಎರಡೂ ದೊರೆಯುವದ ರಿಂದ ಆದರಲ್ಲಿ ಅಧಿಕಾರದ ಉಪಯೋಗವನ್ನು ಹೆಚ್ಚಾಗಿ ಮಾಡಿಕೊಂಡು ಅವನು ಸ್ವಾರ್ಥವನ್ನು ಸಾಧಿಸಿಕೊಳ್ಳಬಹುದು; ಇಲ್ಲವೆ ಹಾಗೆ ಮಾಡದಿದ್ದ ಪಕ್ಷದಲ್ಲಿ ಕೂಡ ಹೊಣೆಗಾರಿಕೆಯಿಲ್ಲದೆ ಗೌರವ ದೊರೆಯುವ ಸಂದರ್ಭ ವಿರುವದರಿಂದ ಅಲ್ಲಿ ಸಾಕಷ್ಟು ಕಾರ್ಯವೆ ಆಗಲಿಕ್ಕಿಲ್ಲ. ಹೀಗಾಗಿ ಇಂತಹ ವ್ಯವಸ್ಥೆಯಿಂದ ಯೋಚಿಸಿದ ಉದ್ದೇಶವೆ ಸಾಧಿಸಿದಂತಾಗುವದಿಲ್ಲ.

ಹಾಗಾದರೆ ಧರ್ಮೋಪದೇಶಕರಂತಹ ಸ್ವಯಂಪ್ರೇರಣೆಯಿಂದ ದುಡಿ ಯುವ ಜನರು ಈ ಸ್ಥಾನಕ್ಕೆ ಯೋಗ್ಯರೆನಿಸಬಹುದೆ? ಕಡಿಮೆ ಸಂಬಳ, ಪ್ರಶಂಸೆಯ ಅಭಾವ, ಸ್ಪರ್ಧೆಯಲ್ಲಿ ಮೆರೆಯುತ್ತಿರುವ ಅಧಿಕಾರ ಇವುಗಳಿಂದ ಎದ್ದುಕಾಣುವ ಇಂದಿನ ಭಂಡಾರಿಗತನವು ಆ ಬಗೆಯ ಯಾವ ಆಸೆಯ ಆಕರ್ಷಣೆಯೂ ಇಲ್ಲದ ಒಂದು ಮಠದ ಅನುಚರರಾಗಲಿ, ಒಂದು ಆಶ್ರಮದ ವಿದ್ಯಾರ್ಥಿಗಳಾಗಲಿ ಈ ಕೆಲಸಕ್ಕೆ ಉಚಿತವಾಗಿ ದೊರೆಯಬಹುದು. ಸಮಾಜಸೇವೆಯೆ ತಮ್ಮ ಧರ್ಮ, ಧರ್ಮಾಚರಣೆಯೆ ತಾವು ಕೈಕೊಂಡ ಕಾರ್ಯದ ಸಾಫಲ್ಯ ಎಂದು ಬಗೆದ ಧರ್ಮೋಪದೇಶಕರು ಒಳ್ಳೆಯ ಭಂಡಾರಿಗ ರಾಗಬಹುದು. ಒಂದು ಕಾಲದಲ್ಲಿ ಅಂದರೆ ಆಧುನಿಕ ಗ್ರಂಥಭಂಡಾರಗಳು ಅಸ್ತಿತ್ವದಲ್ಲಿ ಬಂದ ಹೊಸದಾಗಿ, ವಿದ್ಯಾದಾನವು ಒಂದು ಧರ್ಮಕಾರ್ಯವೆಂದು ಮಠಗಳು ಭಾವಿಸಿಕೊಂಡು ಭಂಡಾರಿಗರಾಗಲಿಕ್ಕೆ ಅನೇಕ ಜನ ಶಿಷ್ಯರನ್ನು ಬಿಟ್ಟುಕೊಟ್ಟವು. ಆದರೆ ಆ ರೂಢಿಯು ಬಹುಕಾಲ ಬಾಳಲಿಲ್ಲ; ಮಠಗಳ

ನೀತಿನಿಯಮಗಳು ಭಂಡಾರಿಗನ ಕರ್ತವ್ಯಕ್ಕೆ ಚ್ಯುತಿಯನ್ನುಂಟು ಮಾಡಿದ ವೆಂದೊ, ಯಶಸ್ವಿಯಾದ ಭಂಡಾರಿಗನು ಧರ್ಮಕಾರ್ಯವನ್ನೆ ಬಿಟ್ಟು ಬಿಡಬಹು ದೆಂಬ ಭೀತಿಯಿಂದೊ ಧರ್ಮೋಪದೇಶಕರು ಹೆಚ್ಚಾಗಿ ಈ ಕಾರ್ಯಕ್ಕುದ್ಯುಕ್ತ ರಾಗಲಿಲ್ಲ. ಆದರೂ ನಾವು ಅಂತಹ ಮನೋಭಾವ ಭಂಡಾರಿಗನ ಕೆಲಸಕ್ಕೆ ಅವಶ್ಯಕ ಎಂಬ ಮಾತನ್ನು ಮರೆಯುವಂತಿಲ್ಲ. ಧರ್ಮಕಾರ್ಯದಲ್ಲಿ ತೋರಿ ಸುವ ಉತ್ಕಂಠೆ ಮತ್ತು ತನ್ಮಯತೆಗಳು ಭಂಡಾರಿಗನಿಗೂ ಅತ್ಯಗತ್ಯ.

ಈ ಸಂದರ್ಭದಲ್ಲಿ ತಲೆಯೆತ್ತಿರುವ ಇನ್ನೊಂದು ವಿಷಯವೆಂದರೆ ಸ್ತ್ರೀಯರು ಒಳ್ಳೇಯ ಭಂಡಾರಿಗರಿರುವರೆ ಎಂಬುದು. ಇದು ಒಂದು ವಿಧದಲ್ಲಿ ವಾದಗ್ರಸ್ತ ವಿಷಯವೇನಲ್ಲ. ಇಂದು ಅಮೇರಿಕೆ–ರಶಿಯ–ಇಂಗ್ಲಂಡ್ ಮೊದ ಲಾದ ಮುಂದುವರಿದ ರಾಷ್ಟ್ರಗಳಲ್ಲಿ ಬಹುಸಂಖ್ಯ ಭಂಡಾರಿಗರು ಸ್ತ್ರೀಯರೆ ಆಗಿರುವರು. ಅಂದ ಮಾತ್ರಕ್ಕೆ ಅವರು ಪುರುಷರಿಗಿಂತ ಹೆಚ್ಚು ಕುಶಲರು, ಕಷ್ಟಸಹಿಷ್ಣುಗಳು, ಉತ್ಸಾಹಿಗಳು ಎಂದೇನು ಭಾವಿಸಲಾಗುವದಿಲ್ಲ. ದಾಯಿ ತನಕ್ಕೆ ಬೇಕಾಗುವ ಕೆಲವು ನೈಸರ್ಗಿಕ ಗುಣಗಳ ಮೂಲಕ ಆ ಕೆಲಸಕ್ಕೆ ಸ್ತ್ರೀಯರು ತುಂಬಾ ಅವಶ್ಯಕ ಅಥವಾ ಹೆಚ್ಚು ಯೋಗ್ಯರು ಎಂಬಂತೆ ಶಿಕ್ಷಕ ವೃತ್ತಿ–ಭಂಡಾರಿಗತನ ಇವುಗಳಲ್ಲಿ ಹೆಚ್ಚಿನ ಸ್ತ್ರೀವಿಶಿಷ್ಟ ಗುಣಗಳದೇನು ಪ್ರಾಮುಖ್ಯತೆಯಿರುವದಿಲ್ಲ. ಆದರೂ ಸ್ತ್ರೀಸಹಜವಾದ ಅಚ್ಚುಕಟ್ಟು, ಮಿತವ್ಯಯ, ಸಹನಶೀಲತೆ ಹಾಗೂ ಉತ್ಸಾಹಗಳು ಭಂಡಾರಿಗನಿಗೆ ಬೇಕಾಗು ವದರಿಂದ ಈ ಗುಣಗಳಿದ್ದ ಪುರುಷರಾಗಲಿ ಸ್ತ್ರೀಯರಾಗಲಿ ಗ್ರಂಥಭಂಡಾರಕ್ಕೆ ಅಷ್ಟೆ ಉಪಯುಕ್ತರಾಗಿರುವರು. ಆದರೆ ತಾತ್ವಿಕ ತಳಹದಿಯ ಮೇಲಿನ ಈ ಚರ್ಚೆಯನ್ನು ವಾಸ್ತವಿಕ ಮಟ್ಟಕ್ಕೆ ತಂದರೆ ಸ್ತ್ರೀಯರ ಅಪಾತ್ರತೆಯನ್ನು ಸಿದ್ಧಮಾಡಿದಂತಾಗಬಾರದು; ಪ್ರಚಲಿತ ಪರಿಸ್ಥಿತಿಯಲ್ಲಿ ಅವರ ಸಂಖ್ಯೆಯು ಭಾರತದ ಗ್ರಂಥಭಂಡಾರಗಳಲ್ಲಿಯಾದರೂ ಹೆಚ್ಚಾಗಿ ಬೆಳೆಯದಿದ್ದುದಕ್ಕೆ ಕಾರಣ ಯಾವುದು ಎಂಬುದನ್ನು ತಿಳಿದಂತಾಗಬಹುದು.

ಮೊದಲನೆಯದಾಗಿ ನಮ್ಮ ನಾಡಿನಲ್ಲಿ ಸ್ತ್ರೀಯರಿಗೆ ಸ್ವತಂತ್ರ ವಾತಾ ವರಣವು ದೊರೆತುದು ತೀರ ಇತ್ತೀಚೆಗೆ; ಅದರಲ್ಲಿ ಅವರಿಗೆ ತಕ್ಕ ಶಿಕ್ಷಣ ಮತ್ತು ಪ್ರೋತ್ಸಾಹ ದೊರೆತು ಅವರನ್ನು ಸುಶಿಕ್ಷಿತ ನಾಗರಿಕರಾಗಲಿಕ್ಕೆ ಮಾಡಿದುದು ಇಂದಿನ ಯುಗವೆ. ಆದರೆ ಸಾಮಾಜಿಕ ರೂಢಿಗಳು ಮತ್ತು

ಪರಂಪರಾಗತ ಪದ್ಧತಿಗಳು ಬದಲಾಗುವದು ತೀರ ಸಾವಕಾಶವಾಗಿ. ಅದಲ್ಲದೆ ಇಲ್ಲಿಯ ವರೆಗೆ ನಮ್ಮ ದೇಶದಲ್ಲಿದ್ದ ಆರ್ಥಿಕ ವ್ಯವಸ್ಥೆಯು ಒಂದು ಕುಟುಂಬದ ಇಬ್ಬರೂ ವ್ಯಕ್ತಿಗಳು ದುಡಿದು ತರುವಂತಹ ಒತ್ತಾಯವನ್ನು ಒಡ್ಡುತ್ತಿರಲಿಲ್ಲ. ಅಂತೆಯೆ ಮಹಿಳಾವರ್ಗವು ಸಂಬಳಕ್ಕಾಗಿ ದುಡಿಯಲಿಕ್ಕೆ ಹೋಗುವ ಪರಿಸ್ಥಿತಿಯು ನಮ್ಮಲ್ಲಿ ನಿರ್ಮಾಣವಾಗಿರಲಿಲ್ಲ. ಆದರೆ ಇಂದು ಕಾಲದಲ್ಲಿ ಪರಿವರ್ತನೆಯಾಗಿದೆ. ಔದ್ಯೋಗಿಕ ಪ್ರಗತಿ ಮತ್ತು ಆರ್ಥಿಕ-ಸಾಮಾಜಿಕ ಸ್ಥಿತ್ಯಂತರಗಳು ಸಂಭವಿಸಿದಂತೆ ಇಂದಿನ ನಮ್ಮ ಮನೋಭಾವವು ಬೇರೆಯಾಗಿದ್ದರೂ ಸ್ತ್ರೀಪುರುಷರಿಬ್ಬರಿಗೂ ಕೆಲಸಗಳು ಸಿಗುವಷ್ಟು ನಮ್ಮ ಆರ್ಥಿಕ ಉನ್ನತಿಯಾಗಿಲ್ಲ. ಅಂತೆಯೆ ಕಲಿತ ಸ್ತ್ರೀಯರು ಕೆಲಸಕ್ಕೆ ನಿಲ್ಲುವ ಮನಸ್ಸು ಮತ್ತು ಆವಶ್ಯಕತೆಯುಳ್ಳವರಾಗಿದ್ದರೂ ಅವಕಾಶವಿಲ್ಲದವರಾಗಿದ್ದಾರೆ. ಅತ್ತ ಸಾಮಾಜಿಕ ಸುಸ್ಥಿತಿ ಮತ್ತು ಆರ್ಥಿಕ ಅಭಿವೃದ್ಧಿಯಾದಂತೆ ಸ್ತ್ರೀಪುರುಷರಿಬ್ಬರಿಗೂ ಭಂಡಾರಿಗನ ಕೆಲಸ ಮಾಡಲಿಕ್ಕೆ ಸಾಧ್ಯವಾಗುವದೆಂದು ಆಶಿಸಬಹುದಾಗಿದೆ. ಆ ಪರಿಸ್ಥಿತಿಯಲ್ಲಿ ಸ್ತ್ರೀಯರು ತಮ್ಮ ವೈಶಿಷ್ಟ್ಯಗಳಿಂದ ಪುರುಷರಿಗಿಂತ ಹೆಚ್ಚು ಯಶಸ್ವಿಯಾದ ಭಂಡಾರಿಗರೆಂದು ಸಿದ್ಧ ಮಾಡಿದರೆ ಆಶ್ಚರ್ಯವೇನಾಗಬೇಕಾಗಿಲ್ಲ !



# ೧. ಸೂತ್ರಸಂಚಕ



ಪುಸ್ತಕಾಲಯಗಳ ಕಾರ್ಯವು ಒಂದು ಶಾಸ್ತ್ರವಾಗಿ ಬೆಳೆದು ಬಂದ ಬಳುವಳಿ ಪಾಶ್ಚಾತ್ಯರದಷ್ಟೆ. ಅದರ ತಂತ್ರ ಮತ್ತು ವಿಧಾನ ಇಷ್ಟೆಲ್ಲ ವಿಸ್ತೃತ ಗೊಂಡಿದ್ದರೂ, ಇಡೀ ಈ ವಿದ್ಯೆಯನ್ನು ಕೆಲವೇ ಮಾತುಗಳಲ್ಲಿ ಸೂತ್ರರೂಪ ವಾಗಿ ಸಂಗ್ರಹಿಸುವುದು ಅವರಿಂದ ಆಗಲಿಲ್ಲವೆನ್ನೋಣವೇ ? ಭಾರತದ ಡಾ. ರಂಗನಾಥನ್ನರವರು ಆ ಕೆಲಸ ಮಾಡಿದ್ದಾರೆ. ಪುಸ್ತಕಾಲಯದ ಯಶಸ್ವೀ ಕಾರ್ಯದ ಬಗೆಯನ್ನು ಐದು ಸೂತ್ರವಾಕ್ಯಗಳಲ್ಲಿ ಅವರು ಕಾಣಿಸಿದ್ದಾರೆ. ಅವು ಯಾವುವೆಂದರೆ—

೧. ಪುಸ್ತಕಗಳು ಉಪಯೋಗಾರ್ಥವಾಗಿ ಇವೆ;

೨. ಪ್ರತಿಯೊಬ್ಬರಿಗೂ ಅವರವರ ಪುಸ್ತಕ ದೊರೆಯಬೇಕು;

೩. ಪ್ರತಿ ಪುಸ್ತಕಕ್ಕೂ ಅದರ ಓದುಗನಿರಬೇಕು;

೪. ಓದುಗರ ವೇಳೆ ಉಳಿಸಬೇಕು; ಮತ್ತು

೫. ಗ್ರಂಥಾಲಯವು ಬೆಳೆಯುತ್ತಿರುವ ಸಂಸ್ಥೆ.

'ಓ ಇದರಲ್ಲೇನಿದೆ ಮಹಾ' ಎಂದೋ, 'ಇವನ್ನಾರು ಅಲ್ಲಗಳೆಯುತ್ತಾರೆ, ಪ್ರತ್ಯೇಕ ಹೇಳಬೇಕಾದದ್ದೇನು ಅಗತ್ಯವಿದೆ' ಎಂದೋ ಓದುಗರು ಕೇಳಬಹುದು. ಆದರೆ ಎಲ್ಲ ಶಾಸ್ತ್ರಗಳ ಪ್ರಥಮ ಸೂತ್ರಗಳು ಇರುವುದೇ ಹೀಗೆ. ಅವುಗಳನ್ನು ಹಿಗ್ಗಿಸಿದಾಗ, ಕೃತಿಯಲ್ಲಿ ಅವನ್ನೇ ಒಡಮೂಡಿಸುವುದು ಎಷ್ಟು ಕಷ್ಟ ಎಂಬುದು ಈ ಮುಂದೆ ತಿಳಿದೀತು.

## ೧. ಉಪಯೋಗಾರ್ಥವಾಗಿ ಪುಸ್ತಕಗಳು

ಪುಸ್ತಕಗಳು ಉಪಯೋಗಕ್ಕಾಗಿ ಇವೆ; ಹೌದು, ಎಂದು ಒಪ್ಪಿದರೂ ಆಚರಣೆಯಲ್ಲಿ ಹಾಗೆ ನಾವು ನಡೆದುಕೊಂಡು ಬಂದಿಲ್ಲ. ಸೂತ್ರರೂಪದಲ್ಲಿ ಈ ಮಾತು ಗೊತ್ತಿರದಿದ್ದರೂ ಸರಿ. ಓದುಗರ ಉಪಯೋಗಕ್ಕಾಗಿ ಪುಸ್ತಕ

ಗಳನ್ನು ಉಪಯೋಗಿಸುವುದಾದರೆ ನೆರವೇರಿಸಬೇಕಾದ ಅಂಶಗಳ ಕಡೆಗೆ ಇಂದಿಗೂ ನಾವು ಗಮನ ಕೊಟ್ಟಿಲ್ಲ.

ಒಂದು ಕಾಲಕ್ಕೆ, ಎಂದರೆ ೧೪ನೆಯ ಶತಕದ ವರೆಗೂ ಪುಸ್ತಕಗಳನ್ನು ಕಾಯ್ದಿರಿಸುತ್ತಿದ್ದರು; ಉಪಯೋಗಿಸುತ್ತಿದ್ದಿಲ್ಲ! ಮ್ಯುಸಿಯಂನಲ್ಲಿ ಕಲ್ಲಿನ ಮೂರ್ತಿ, ತಾಮ್ರದ ಹಳೆಯ ನಾಣ್ಯ ಇಟ್ಟಿರುವ ಹಾಗೆ; ಅವನ್ನು ಬರೀ ನೋಡಿ ಹೋಗಬೇಕು, ಅಷ್ಟೆ; ಮತ್ತೆ ಯಾರಾದರೂ (ಓದಲು ?) ಒಯ್ದು ಗಿಯ್ದಾರೆಂದು ಸರಪಣಿ ಬಿಗಿದು ಇಡುತ್ತಿದ್ದರು. ಇದಕ್ಕೆ ಕಾರಣ ಹೇಳ ಬಹುದು; ಆ ಕಾಲಕ್ಕೆ ಪುಸ್ತಕಗಳೆಂದರೆ ಬಹಳ ಬೆಲೆಯುಳ್ಳ ವಸ್ತುಗಳಲ್ಲವೆ? ಒಂದು ಪ್ರತಿಯನ್ನು ಸಿದ್ಧಗೊಳಿಸಬೇಕಾದರೆ ಎಷ್ಟು ಕಷ್ಟ! ಅಂತೆಯೆ ಹಾಗೆ ಪುಸ್ತಕಗಳನ್ನು ಭದ್ರವಾಗಿರಿಸುತ್ತಿದ್ದರು, ಎನ್ನುವ. ಬಹಳವಾದರೆ ರಾಜಮನೆತನದವರಿಗೋ, ಪಂಡಿತರಿಗೋ ಮಾತ್ರ ಓದಲು ಅವು ಆಗಾಗ ದೊರೆಯುತ್ತಿದ್ದುವೆಂದೂ ಒಪ್ಪುವ.

ಮುಂದೆ ಮುದ್ರಣ ಶೋಧವಾದ ಮೇಲೂ ಪುಸ್ತಕಗಳ ಅನಿರ್ಬಂಧ ಉಪಯೋಗ ನಡೆಯಿತೇ ? ಇಲ್ಲ ಪುಸ್ತಕಗಳ ನಡುವಿಗೆ ಕಟ್ಟುತ್ತಿದ್ದ ಸಣ್ಣ ಸರಪಣಿಗಳೇನೋ ತೆಗೆಯಲ್ಪಟ್ಟುವು. ಕೆಲವರಿಗಾದರೂ ಅದರ ಪ್ರಯೋಜನವಾಗತೊಡಗಿತ್ತು. ಅನಂತರ ೧೮-೧೯ನೆಯ ಶತಮಾನಗಳಿಂದ ಸಾಮಾನ್ಯ ಜನತೆಗೆ ಯಾವಾಗ ಕ್ರಮೇಣ ಪ್ರಾಶಸ್ತ್ಯ ಬರತೊಡಗಿತೋ, ಪುಸ್ತಕ ಅಂಥವರ ಕೈಗೂ ಎಟುಕತೊಡಗಿದುವು. ಆದರೆ ಆವಾಗಲೂ ನಿರ್ಬಂಧನೇ. ಓದು ಬಲ್ಲವರಾಗಿ, ದುಡ್ಡು ಕೊಡುವವರು ಮಾತ್ರ ಪುಸ್ತಕ ಗಳನ್ನು ಉಪಯೋಗಿಸಬಹುದಾಯಿತು.

ನಮ್ಮ ಇಂದಿನ ಸಾರ್ವಜನಿಕ ಪುಸ್ತಕಾಲಯಗಳು ಸದ್ಯ ಈ ಮೆಟ್ಟಲಿ ನಲ್ಲಿ ನಿಂತಿವೆ. ಪ್ರಾದೇಶಿಕ ಅಥವಾ ವಿಶ್ವವಿದ್ಯಾನಿಲಯ ಗ್ರಂಥಾಲಯ ಗಳಲ್ಲಿ ದುಡ್ಡು ಕೊಡದೇನೇ ಪುಸ್ತಕ ಓದಬಹುದು. ಆದರೆ ಅಂಥದರಲ್ಲೂ ಒಂದು ಕಟ್ಟು ಇದೆ; ಸಾಮಾನ್ಯವಾಗಿ ಆ ಪುಸ್ತಕಾಲಯದ ಕಟ್ಟಡದ ಹೊರ ಗಡೆ ಅವನ್ನು ಒಯ್ಯುವಂತಿಲ್ಲ. ಅಂತೂ ಪ್ರತಿಯೊಬ್ಬ ಓದುಗನಿಗೂ ಸಾಧ್ಯ ವಾದಷ್ಟು ಹೆಚ್ಚೆಚ್ಚು ಪುಸ್ತಕಗಳು ಉಪಯೋಗಕ್ಕೆ ದೊರೆತರೆ, ಅದು ಈ ಹಾದಿಯಲ್ಲಿ ಕೊನೆಯ ಘಟ್ಟವೆನ್ನಬೇಕು.

ಕೆಲವು ಶ್ರೀಮಂತರ ಮನೆಯಲ್ಲಿ ಶೋಭೆಗಾಗಿ ಪುಸ್ತಕಗಳನ್ನು ಇಡುವುದನ್ನು ನೋಡಿರಬಹುದು. ಅವರಿಗೆ ಪುಸ್ತಕಗಳೆಂದರೆ ಮನೆಯ ದಿವಾನಖಾನೆಯ ಒಂದು ಅಲಂಕಾರ ಮಾತ್ರ. ಸ್ವತಃ ಖಂಡಿತ ಉಪಯೋಗಿಸುವುದಿಲ್ಲ. ಇತರರು ಕೇಳಿದರೆ, ಕೊಡುತ್ತಾರೆ. ಆದರೆ ಅದರ ಮರುಪ್ರಯೋಜನವಾಗಲಿ ಎಂದು ವಿಚಾರವನ್ನಿಟ್ಟುಕೊಂಡು, ಆ ಪುಸ್ತಕದ ಮುಂದಿನ ಕ್ಷೇಮ ಸಮಾಚಾರ ತೆಗೆದುಕೊಳ್ಳುವುದಿಲ್ಲ. 'ಏನು ಮಾಡುವುದು ? ಬರುತ್ತಾರೆ. ತೆಗೆದುಕೊಂಡು ಹೋಗುತ್ತಾರೆ. ಇದರಿಂದ ನೂರಾರು ರೂಪಾಯಿಯ ಪುಸ್ತಕ ಕಳೆದುಕೊಂಡಿದ್ದೇನೆ' ಎಂದು ಅವರ ಉದ್ಗಾರವಿರುತ್ತದೆ. ಇನ್ನು, ಓದುಭಟ್ಟರಾದ ಕೆಲವರ ಮನೆಯಲ್ಲಿಯೂ ಹೀಗೇ ಪುಸ್ತಕಸಂಗ್ರಹವಿರುವುದುಂಟು. ಇವರು ಮಾತ್ರ ಓದುತ್ತಾರೆ. ಆದರೆ ಇನ್ನೊಬ್ಬರು ಓದಲೆಂದು ಅವರು ತಪ್ಪಿಯೂ ಕೊಡುವವರಲ್ಲ. ಬಂದು ಕೇಳುವವರ 'ಕೀಟಲೆ' ತಪ್ಪಿಸಿಕೊಳ್ಳಲು, ಮನೆಯ ಒಳಗಿನ ಕೋಣೆಯಲ್ಲಿ ಬೀಗ ಹಾಕಿಯೋ, ಕಪಾಟಿಗೆ ಗಾಜು ಇದ್ದರೆ, ಬ್ರೌನಪೇಪರನ್ನು ಅಂಟಿಸಿಯೋ, ಮರೆಮಾಡುವ ಮಹನೀಯರಿವರು ! ಇವರಾರೂ ಪುಸ್ತಕಗಳು ಉಪಯೋಗಕ್ಕಾಗಿ ಇವೆ ಎಂಬ ಮಾತನ್ನು ನಡಿಸುವವರಲ್ಲ.

ವ್ಯಕ್ತಿಶಃ ಮಾತು ಅಂತಿರಲಿ. ಈ ಸೂತ್ರದಿಂದಾಗಿ ಪುಸ್ತಕಾಲಯದ ವ್ಯವಸ್ಥೆ ಹಾಗೂ ಆಡಳಿತದಲ್ಲಿ ಆಗುವ ಕೆಲ ಪರಿಣಾಮಗಳನ್ನು ನಾವೀಗ ನೋಡಬಹುದು.

## ಸ್ಥಳ

ಪುಸ್ತಕಾಲಯವೊಂದನ್ನು ತಮ್ಮ ಊರಲ್ಲಿ ಪ್ರಾರಂಭಿಸಬೇಕೆಂಬ ಒಂದು ನಗರಸಭೆಯ ಯೋಚನೆಯನ್ನೂ, ಅದು ಯಾರ ಗಲಾಟೆಯೂ ಇಲ್ಲದ ಸ್ಥಳದಲ್ಲಿ, ಊರ ಹದ್ದಿನ 'ಪ್ರಶಾಂತ' ಬಯಲಿನಲ್ಲಿ ಇರಬೇಕೆಂದು ನಗರಪಾಲಿಕ ಮಹಾಶಯರೊಬ್ಬರು ಮಂಡಿಸಿದ ಸೂಚನೆಯನ್ನೂ ಡಾ. ರಂಗನಾಥನ್ನರವರು ತಮ್ಮ ಪುಸ್ತಕದಲ್ಲಿ ಕೊಟ್ಟಿದ್ದಾರೆ. ಪುಸ್ತಕಾಲಯವೆಂದರೆ ಊರ ಹೊರಗಿರುವ ಹನುಮಪ್ಪನ ಗುಡಿಯೇ? ಇಂಥ ವಿಚಾರಮತಿಗಳಲ್ಲಿ ಈ ಮೊದಲ ಸೂತ್ರ ಸ್ವಲ್ಪವೂ ಗಮನದಲ್ಲಿಲ್ಲವೆಂಬುದು ಸ್ಪಷ್ಟವಿದೆ.

ಒಂದು ಸಾರ್ವಜನಿಕ ಪುಸ್ತಕಭಂಡಾರವು, ಊರ ಮಧ್ಯದಲ್ಲಿ, ಎಲ್ಲರಿಗೂ ಅಷ್ಟಷ್ಟು ಹತ್ತಿರವಾಗಿರುವಂತೆ ಇರಬೇಕು. ಊರಲ್ಲಿಯ ಜನ ಸಾಧಾರಣವಾಗಿ ದಿನಕ್ಕೊಮ್ಮೆ ತಪ್ಪದೇ ಹೋಗಿಬರುವ ಸುಭಗತೆಯುಳ್ಳ ನಿತ್ಯಸ್ಥಳವೆನಿಸಿಕೊಳ್ಳಬೇಕು. ಊರು ದೊಡ್ಡದಾಗಿದ್ದರೆ ಶಾಖೆಗಳನ್ನು ಸಹಿತ ತೆಗೆದು ಪುಸ್ತಕಗಳ ಪ್ರಯೋಜನ ಮೂಲೆಮೂಲೆಗೂ ಆಗುವಂತೆ ನೋಡಿಕೊಳ್ಳಬೇಕು.

ಪೋರ್ತುಗಾಲದ ರಾಜಧಾನಿ ಲಿಸ್ಬನ್ ನಗರದಲ್ಲಿ ಉಪವನ ಗ್ರಂಥಾಲಯವೊಂದಿದೆಯಂತೆ. ಊರ ವ್ಯವಹಾರಕೇಂದ್ರದ ಕೂಟದಲ್ಲಿ ಸಣ್ಣ ಉಪವನ; ಯಾವಾಗಲೂ ಅಲ್ಲಿ ಹಸಿರೆಲೆಗಳ ದಟ್ಟ ನೆರಳು ಹಾಸಿರುತ್ತದೆ. ಅದರೊಳಗೆ ಹಲವು ಆಸನಗಳನ್ನು ಹಾಕಿದ, ಕೆಲವೇ ಕಪಾಟುಗಳುಳ್ಳ ಆ ಪುಸ್ತಕಾಲಯ. ಬಿಡುವಿನ ವೇಳೆಯಲ್ಲಿ, ಅಥವಾ ಕೆಲಸ ಮುಗಿಸಿ ಮನೆಗೆ ಹೋಗುವಾಗ ತಮಗೆ ಬೇಕಿದ್ದ ಗ್ರಂಥಗಳನ್ನು ಜನ ಒಯ್ಯುತ್ತಾರೆ. ಇಲ್ಲವಾದರೆ ಅಲ್ಲಿಯೇ ಕುಳಿತು ಓದುತ್ತಾರೆ. ಬರುವ ಓದುಗರ ಅಭಿರುಚಿಗನುಗುಣವಾಗಿಯೇ ಇಟ್ಟ ಆ ಚೊಕ್ಕ ಸಂಗ್ರಹದಲ್ಲಿ ಎಲ್ಲ ಪುಸ್ತಕಗಳೂ ಉಪಯೋಗವಾಗುತ್ತವೆ! ಅಲ್ಲಿರುವುದು ಒಂದೇ ಸಾವಿರ ಪುಸ್ತಕಗಳ ಸಂಗ್ರಹ, ಮೇಲಿಂದ ಮೇಲೆ ಪುಸ್ತಕಗಳನ್ನು ಬದಲುಮಾಡುವುದುಂಟು. ಹೀಗೆ ಪುಸ್ತಕಾಲಯವು ಸುಗಮ್ಯ ಹಾಗೂ ಆಕರ್ಷಣೀಯವಿದ್ದರೆ, ಪುಸ್ತಕಗಳ ಉಪಯೋಗ ಹೆಚ್ಚಿಚ್ಚಾಗಿ ಆಗದಿದ್ದೀತೆ ?

ಬೇರೆ ಪ್ರಕಾರದ ಪುಸ್ತಕಾಲಯಗಳನ್ನು ತೆಗೆದುಕೊಳ್ಳುವ. ಕಾಲೇಜಿನ ಪುಸ್ತಕಾಲಯಗಳಲ್ಲಿ ಸ್ವಲ್ಪಾದರೂ ಈ ಸೂತ್ರ ಅನುಸರಿಸಲ್ಪಡುತ್ತಿರಬಹುದು. ಶಾಲೆಗಳಲ್ಲಿ, ಗ್ರಾಮ ವಾಚನಾಲಯಗಳಲ್ಲಿ ಸ್ಥಿತಿ ಹಾಗಿಲ್ಲ. ಶಾಲೆಯಲ್ಲಿ ಇದ್ದಬಿದ್ದ ಪುಸ್ತಕಗಳನ್ನೆಲ್ಲ ಒಂದು ಕಪಾಟಿನಲ್ಲಿ ಹಾಕಿ, ಆ ಕಪಾಟನ್ನು ಸಹಿತ ಒಂದು ಬೀಗ ಹಾಕಿದ ಕೋಣೆಯಲ್ಲಿ ಇಡುತ್ತಾರೆ! ಅದರ ಬಾಗಿಲನ್ನು ತೆರೆಯುವುದಾದರೆ ಯಾತಕ್ಕೆ ಗೊತ್ತೇ ? ಕೊನೆಯ ಪರೀಕ್ಷೆಗೆ ಕೂಡ್ರುವ ವಿದ್ಯಾರ್ಥಿಗಳ ಸ್ಪೆಶಲ್ ಕ್ಲಾಸಿಗಾಗಿ ! ಅಲ್ಲಿಯೇ ಹುಡುಗರ ಆಟದ ಸಲಕರಣೆಗಳು, ಮುರುಕು ಫರ್ನಿಚರು, ಆ ಈ ಮೂಲೆಯಲ್ಲಿ ಹರಡಿರುತ್ತವೆ. ವಿದ್ಯಾರ್ಥಿಗಳು ಪುಸ್ತಕಗಳತ್ತ ಆಕರ್ಷಿತರಾಗಿ, ಓದುವ

ಅವೆ ಇಟ್ಟುಕೊಂಡು, ಅವರು ಬೇಕಾದಾಗ, ಮತ್ತು ಬೇಕಾದಷ್ಟು ಪುಸ್ತಕ ಒಯ್ಯುವಂತೆ ಸ್ಥಿತಿ ಇದ್ದಿದ್ದರೆ, 'ನಿಜ, ಪುಸ್ತಕಗಳು ಉಪಯೋಗಕ್ಕಲ್ಲದೆ ಸುಮ್ಮನೆ ಇಡಲಿಕ್ಕಲ್ಲ' ಎಂಬ ಮಾತು ಅವರಿಗೆ ತಿಳಿದಿದೆಯೆಂದು ಹೇಳ ಬಹುದಿತ್ತು.

## ತೆರೆದಿರುವ ವೇಳೆ

ಪುಸ್ತಕಗಳನ್ನು ಸಂಗ್ರಹಿಸಿ ಬರೀ ರಕ್ಷಿಸುವ ಕಾಲದಲ್ಲಿ, ಪುಸ್ತಕಾಲಯ ಗಳನ್ನು ಯಾವಾಗ ತೆರೆದವರೇನಂತೆ? ಮುಂದೆಯೂ ಸಹಿತ ದಿನದ ೨೪ ಗಂಟೆ ಗಳಲ್ಲಿ, ತೆರೆದಿರುವುದಕ್ಕಿಂತ ಮುಚ್ಚಿರುವುದೇ ಹೆಚ್ಚಾದರೆ, ಏನೆಂದು ತಿಳಿಯ ಲಿಕ್ಕಿದೆ? ಕ್ರಿ. ಶ. ೧೮೦೬ ರ ಕಾಲಕ್ಕೆ ಹೆಸರಾಂತ ಆಕ್ಸಫರ್ಡ ವಿದ್ಯಾಪೀಠದ ಪುಸ್ತಕಾಲಯಕ್ಕೆ ಒಬ್ಬ ವ್ಯಾಸಂಗಿಯು ಓದಲೆಂದು ಬಂದಾಗ ಇಕ್ಕಿದ ಬಾಗಿಲನ್ನು ಕಂಡು. ಈ ರೀತಿ ಬರೆದ ಒಂದು ಕಾಗದ ಅಂಟಿಸಿ ಹೋದನಂತೆ; ಏನೆಂದರೆ "ಜ್ಞಾನದ ಬೀಗವನ್ನೇ ತೆಗೆದುಕೊಂಡು ಹೋದ ನಿನಗೆ ಕೇಡಾಗಲಿ. ನೀನೂ ಅಲ್ಲಿ ಹೋಗುವುದಿಲ್ಲ, ಇತರರಿಗೂ ಹೋಗಗೊಡು ವುದಿಲ್ಲ!"

ಅನಂತರ ಈ ತತ್ವದ ಫಲವಾಗಿ ಎಂಬಂತೆ, ಪಾಶ್ಚಾತ್ಯ ಪುಸ್ತಕಾಲಯ ಗಳಲ್ಲಿ ಸಾಕಷ್ಟು ಬದಲಾವಣೆಯಾಗತೊಡಗಿತು. ಅದೇ ಆಕ್ಸಫರ್ಡ ಗ್ರಂಥಾ ಲಯ ಈಗ ದಿನಕ್ಕೆ ೧೬ ತಾಸು ತೆರೆದಿರುತ್ತದೆ; ಹೆಚ್ಚು ಕಡಿಮೆ ಎಲ್ಲ ವಿಶ್ವ ವಿದ್ಯಾಲಯಗಳಲ್ಲೂ ಹಾಗೆಯೇ. ಇನ್ನು, ಇದಕ್ಕೂ ಮುಂದೆ ಹೋಗಿ ಹಗಲು ಇರುಳು, ಇಡೀ ದಿನ ಮುಕ್ತದ್ವಾರವಿರುವ ಲಂಡನ್ ಯುನಿ ವರ್ಸಿಟಿಯ ಕಾಲೇಜೂ ಉಂಟು.

ನಮ್ಮ ದೇಶದಲ್ಲಿ, ದೊಡ್ಡ ದೊಡ್ಡ ಸಾರ್ವಜನಿಕ ಪುಸ್ತಕ ಭಂಡಾರ ಗಳು ದಿನಕ್ಕೆ ೮-೧೦ ತಾಸು ಮಾತ್ರ ತೆರೆದಿರುತ್ತವೆ. ನಮ್ಮ ಸಂಸ್ಥಾ ಭಂಡಾರಗಳಲ್ಲಿ ಪ್ರತಿದಿನವೂ ಕೆಲವು ತೆರೆದಿರುತ್ತವೆ. ಇನ್ನು ಕೆಲವು ವಾರಕ್ಕೆ ಒಂದೆರಡು ಸಲ, ಒಂದೆರಡು ತಾಸುಗಳ ಮಟ್ಟಿಗೆ ಮಾತ್ರ!

ಹಾಗೆಂದು ಎಲ್ಲ ಬಗೆಯ ಪುಸ್ತಕಾಲಯಗಳು ಹಗಲು. ರಾತ್ರಿ ತೆರೆ ದಿದ್ದರೆಯೇ ಆದರ್ಶವಾದುದು ಎಂದು ಹೇಳಿದರೆ ಹುಚ್ಚುತನದ್ದಾಗುತ್ತದೆ. ಮುಖ್ಯ ಮಾತೆಂದರೆ, ಜನಗಳು ಬರುತ್ತಿರುವ, ಬರಬೇಕಾದ ಅವಧಿಯಲ್ಲಿ

ಎಂದಿಗೂ ಪುಸ್ತಕಭಂಡಾರವು ಮುಚ್ಚಿರಕೂಡದು. ಹಾಗೆ ನೋಡಿದರೆ ರವಿವಾರ ಹಾಗೂ ರಜೆಯ ದಿನಗಳಲ್ಲಿ ಸಹಿತ ಓದುಮನೆಯನ್ನು ತೆರೆದಿರಬೇಕು. ಪುಸ್ತಕಭಂಡಾರದ ರೂಢಿ ಬಿದ್ದ ವಿದ್ಯಾರ್ಥಿಗಳಿಗೆ ಅವರ ಓದುವಿಕೆಯಲ್ಲಿ ಭಂಗ ಬರಬಾರದೆಂದು, ಮುಂಬಯಿ ವಿಶ್ವವಿದ್ಯಾಲಯದವರೂ ಮಧ್ಯವರ್ತಿ ಗ್ರಂಥಾಲಯದವರೂ ರಜೆಯ ದಿನಗಳಲ್ಲಿ ಸಹಿತ ತುಸು ಹೊತ್ತು ತೆರೆದಿರಲು ಪ್ರಾರಂಭಿಸಿರುವುದು, 'ಪುಸ್ತಕಗಳು ಓದುವುದಕ್ಕಾಗಿ ಇವೆ' ಎಂಬುದರ ಅರಿವಿನ ದ್ಯೋತಕವೆನ್ನಬೇಕು.

## ಪುಸ್ತಕಗಳನ್ನಿಡುವ ಕ್ರಮ

ಪುಸ್ತಕಭಂಡಾರಗಳಲ್ಲಿ ಪುಸ್ತಕಗಳನ್ನಿಡುವ ಕ್ರಮವನ್ನು ತುಸು ಪರಿಶೀಲಿಸಿದರೆ ಮೊದಲನೆಯ ಸೂತ್ರ ಹೇಗೆ ಹತ್ತಿಕ್ಕಲ್ಪಟ್ಟಿದೆ ಎಂಬುದು ತಿಳಿದು ಬರುವಂತಿದೆ. ಪುಸ್ತಕಗಳನ್ನು ಕಬ್ಬಿಣದ ಪೆಟ್ಟಿಗೆಗಳಲ್ಲಿ ಭದ್ರವಾಗಿ ಕೀಲಿ ಹಾಕಿ ಇಡುವುದಿದೆ ಅದರಿಂದ ಓದುಗರು, ಪುಸ್ತಕಗಳನ್ನು ನೋಡಿ ಉಪಯೋಗಿಸುವ ಆಶೆಯುಳ್ಳವರಾಗಿ, ಓದಲು ಕೇಳಲಿ ಎಂಬ ಆಶಯ ಅಲ್ಲಿಲ್ಲ; ಭದ್ರತೆಯ ದೃಷ್ಟಿ ಮಾತ್ರ ಇದೆ, ಎಂದೆನಿಸದಿರದು. ಇನ್ನು, ಕೆಲವು ವಿಶ್ವವಿದ್ಯಾಲಯಗಳಲ್ಲಿ ನೆಲದಿಂದ ಮೇಲೆತ್ತರದ ವರೆಗೂ ಪುಸ್ತಕಗಳನ್ನು ಅಡಕಲಾಗಿ ಇರಿಸಲಾಗುತ್ತದೆ. ಮೇಲಿದ್ದ ಪುಸ್ತಕಗಳು ಉಪಯೋಗಿಸಲ್ಪಡುತ್ತವೆ ಎಂದು ಹೇಗೆ ನಂಬುವುದು? ಅಂತೆಯೇ, ಯಾವ ಪುಸ್ತಕವೂ ನಮ್ಮ ಕೈಗೆಟಕುವುದಕ್ಕಿಂತ ಹೆಚ್ಚು ಮೇಲೆ ಇರಬಾರದು. ಎಂದರೆ ಕಪಾಟುಗಳ ಎತ್ತರ ೭ ಫೂಟು ಮಾತ್ರ ಇರಬೇಕು.

ಕಪಾಟುಗಳನ್ನು ಇರಿಸುವ ಕ್ರಮದಲ್ಲಿ ಸಹಿತ ನಾವು ಈ ಸೂತ್ರವನ್ನು ಅನುಲಕ್ಷಿಸಬೇಕು. ಎಲ್ಲ ಕಪಾಟುಗಳಿಗೂ ಸುಲಭದಲ್ಲಿ ಹೋಗಿ ಬರುವಂತೆ ಮಧ್ಯಮಾರ್ಗವಿರಬೇಕು. ಈ ಕಪಾಟುಗಳಿಗೆ ಬೀಗ ಬಾಗಿಲು ಇರಕೂಡದು. ಬರೀ ಖಾನೆಗಳುಳ್ಳ, ಎರಡೂ ಬದಿಗೆ ತೆರೆದಿರುವ ಕಬ್ಬಿಣದ ಕಪಾಟುಗಳು ಈಗೆಲ್ಲ ಕಡೆಗೆ ಉಪಯೋಗದಲ್ಲಿವೆ. ಮತ್ತೆ, ಕೂಡುವ ಆಸನಗಳು, ಓದುಗರನ್ನು ಸುಖಲೋಲುಪರನ್ನಾಗಿ ಮಾಡುವಂತಿರಕೂಡದು. ಇಲ್ಲವಾದರೆ ಪುಸ್ತಕವನ್ನು ಓದುವುದಕ್ಕಾಗಿ ಉಪಯೋಗಿಸದೆ, ಮುಖದ ಗೊರಕೆಯನ್ನು ಮರೆಗೆ ಹಿಡಿಯಲು ಬಳಸಲಾದೀತು! ಹಾಗೆಯೇ ಒಳ್ಳೆಯ ಗಾಳಿ

ಬೆಳಕು ಬರುವಂತೆಯೂ. ಪ್ರತಿ ಮೇಜಿಗೂ ಸಣ್ಣ ದೀಪವಿರುವಂತೆಯೂ ನೋಡಿಕೊಳ್ಳಬೇಕಾದುದಗತ್ಯ. ಓದುಗರ ಸೌಕರ್ಯಕ್ಕಾಗಿ ಕುಡಿಯುವ ನೀರು, ಮರೆಕೋಣೆ ಸಹಿತ ಇರಬೇಕೆಂದೂ ಹೇಳಬಹುದು.

### ಸಹಾಯಕ ವರ್ಗ

ಇಷ್ಟೆಲ್ಲ ಇದ್ದರೂ ಪುಸ್ತಕಭಂಡಾರದ ಕೆಲಸಗಾರರು ದಕ್ಷರಿಲ್ಲದಿದ್ದರೆ, ಈ ಮೊದಲ ಸೂತ್ರದ ಫಲ ಏನೂ ಇಲ್ಲವೆನ್ನಬಹುದು. ಪುಸ್ತಕಗಳನ್ನು ಸಂಗ್ರಹಿಸಿ, ಬರೀ ಕಾಯುವ ಕೆಲಸ ಮಾಡುವುದಿದ್ದರೆ, ಅದನ್ನು ಯಾರೂ ಮಾಡುವರಲ್ಲವೆ? 'ಇತರ ಯಾವ ಕೆಲಸಕ್ಕೂ ಬಾರದ ಒಬ್ಬ, ಲೈಬ್ರರಿಗಾದರೂ ಆದೀತು' ಎಂಬ ಭಾವನೆ ಇತ್ತು; ಈಗೂ ಇದೆ! "ಏನು ಮಹಾ ಕೆಲಸ, ಬಂದವರಿಗೆ ನಂಬರು, ಹೆಸರು ಬರೆದುಕೊಂಡು ಪುಸ್ತಕ ಕೊಡುವುದು, ಇಸಕೊಂಡು ಕಪಾಟಿಗೆ ಸೇರಿಸುವುದು" ಎಂದು ಎಷ್ಟು ಜನ ತಿಳಿದಿಲ್ಲ? ಪುಸ್ತಕಗಳ ಉಪಯೋಗವಾಗಲಿ ಎನ್ನುವ ದೃಷ್ಟಿಯನ್ನೆ ಇಟ್ಟುಕೊಂಡರೆ, ಅವನ ಜವಾಬುದಾರಿ, ಕಾರ್ಯಕ್ಷಮತೆ ಇವುಗಳ ಅರಿವಾಗದಿರದು.

## ೨. ಪ್ರತಿಯೊಬ್ಬರಿಗೂ ಅವರವರ ಪುಸ್ತಕ ದೊರೆಯಬೇಕು.

ಮೊದಲ ಸೂತ್ರಕ್ಕಿಂತ ಇದು ಒಂದು ಹೆಜ್ಜೆಯನ್ನು ಮುಂದೆ ಇಟ್ಟಂತಾಗಿದೆ. ಪುಸ್ತಕಗಳು ಉಪಯೋಗಕ್ಕಾಗಿ ಇವೆ, ತಾನೇ. ಹಾಗಿದ್ದರೆ ಎಲ್ಲರಿಗೂ ಆ ಪ್ರಯೋಜನ ದೊರೆಯಬೇಕೆಂಬುದೇ ಇದರ ಮರ್ಮ. ಪುಸ್ತಕಗಳ ದೃಷ್ಟಿಕೋನ ಮೊದಲ ಸೂತ್ರದಲ್ಲಿದ್ದರೆ, ಪುಸ್ತಕಗಳನ್ನು ಉಪಯೋಗಿಸುವವರನ್ನು ಗಮನದಲ್ಲಿಟ್ಟುಕೊಂಡು, ಈ ಸೂತ್ರವನ್ನು ಹೇಳಿದ್ದಾಗಿದೆ. ಮೊದಲನೆಯ ಸೂತ್ರ ಇದ್ದ ಪುಸ್ತಕಾಲಯಗಳನ್ನು ಹೆಚ್ಚು ಉಪಯೋಗಿಸಬೇಕೆಂಬ ಮಾತನ್ನು ಹೇಳಿದರೆ, ಇಲ್ಲಿ ಹೊಸ ಹೊಸ ಪುಸ್ತಕಭಂಡಾರಗಳನ್ನು ತೆರೆಯಬೇಕೆಂಬ ಸೂಚ್ಯ ವಿಚಾರ ಇದೆ. ಅಲ್ಲದೆ, ವಿಚಾರಶಕ್ತಿ ಇರುವ ಪ್ರತಿಯೊಬ್ಬರಿಗೂ ಅನ್ನ, ವಸ್ತ್ರ, ವಸತಿಯಷ್ಟೇ ಶಿಕ್ಷಣವು ಅವಶ್ಯವೆಂದಾಗ, ಅವರೆಲ್ಲರಿಗೂ ಓದಿನ ಪೂರೈಕೆಯ ಅಗತ್ಯವೂ ಇದೆಯೆಂದಾಗಿ, ಆ ಶಿಕ್ಷಣ ಎಲ್ಲರಿಗೂ ದೊರೆತಿರಬೇಕೆಂಬ ಪೂರ್ವಭಾವಿಯಾದ ವಿಚಾರ ಇದರಲ್ಲಡಗಿದೆ.

## ಬಡವ–ಬಲ್ಲಿದ

ಅಂತೆಯೆ ಇಲ್ಲಿ ಬಡವ–ಸಿರಿವಂತ, ಹಳ್ಳಿಗ-ನಾಗರಿಕ ಎಂಬ ಭೇದ ಇರಕೂಡದು. ನಿಜ; ಆದರೆ ಉಂಟಲ್ಲ? ಇಂದು ಶಹರದಲ್ಲಿದ್ದ ಕೆಲವರಿಗೆ ಮಾತ್ರ ಶಿಕ್ಷಣವೂ, ಅದರ ನೊಗವಾದ ಪುಸ್ತಕವೂ ಬೇಕಾಗಿವೆ. ನಗರ ದವರೇ ಆದ ಇತರ ಶ್ರಮಜೀವಿಗಳಿಗೆ? ಹಳ್ಳಿಯ ಮುಕ್ಕನಿಗೆ?

ಬಡವರು ವಿದ್ಯೆಗೇ ಅನರ್ಹರು ಎಂಬ ರೂಢಿಗತ ಭಾವನೆ ಮೊನ್ನೆ ಮೊನ್ನೆಯ ವರೆಗೆ ಇತ್ತು. ಬುದ್ಧಿಶಕ್ತಿ ಕೆಲವರದೇ ಸೊತ್ತು, ಅವರು ಸಾಮಾನ್ಯತಃ ಮೇಲಿನ ವರ್ಗದಿಂದ ಬಂದವರು ಎಂದೇ ಭಾವಿಸುತ್ತಿದ್ದೆವು. ಇಂದು ಹಾಗಿಲ್ಲ, ಹಳ್ಳಿಗಳ ದೇಶವಾದ ಭಾರತದಲ್ಲಿ ಹಳ್ಳಿಗರ ಉನ್ನತಿಗೆಂದು ಪಟ್ಟಣಿಗರಷ್ಟೇ ಓದಿನ ಸೌಕರ್ಯ ಅವರಿಗಿರಬೇಕು. ಅವರ ಉದ್ಯೋಗ ಒಕ್ಕಲತನ, ಕೈಗಾರಿಕೆ. ಅವುಗಳಿಗೆ ಪೋಷಕವಾಗುವಂತೆ, ಮತ್ತು ದುಡಿದು ದಣಿವಾದಾಗ ತುಸು ಮನರಂಜಕವಾಗುವಂತೆ ಪುಸ್ತಕ ಪ್ರಯೋಜನ ದೊರಿತರೆ ಎಷ್ಟು ಚೆನ್ನು! ನಮಗಾದರೆ ಇದೊಂದು ರಮ್ಯಕಲ್ಪನೆ. ರಶಿಯಾದಂತಹ ಇತರ ದೇಶಗಳಲ್ಲಿ, ಅದು ವಸ್ತುಸ್ಥಿತಿ. ಮಧ್ಯಾಹ್ನದ ವರೆಗೆ ಬೆವರು ಹರಿಸಿ, ಅಲ್ಲಿಯ ರೈತ ದುಡಿದನೆಂದರೆ, ಎಲ್ಲರೂ ಗಿಡದ ನೆರಳಲ್ಲಿ ಕುಳಿತು, ಊಟ, ಪಾನೀಯ ಸೇವಿಸುತ್ತಾರೆ. ಅವರಿಗಾಗಿ ಬಂದ ಪತ್ರಿಕೆಗಳನ್ನು, ಇತರ ಪುಸ್ತಕಗಳನ್ನು ಓದುತ್ತಾರೆ. ಅಲ್ಲಿಂದ ಪುನಃ ಕೆಲಸ. ಹೀಗೆಯೇ ನಮ್ಮ ಗ್ರಾಮಬಾಂಧವರ ಅರಿವು, ಅಭಿರುಚಿಗಳನ್ನು ಪೂರೈಸಲು ಪುಸ್ತಕ ನೆರವಾದರೆ, ದೇಶದಲ್ಲಿ ಇಂದು ಇರುವ ವರ್ಗಶೋಷಣೆ, ಮೇಲುಕೀಳೆಂಬ ಭಾವ, ಬಡತನದ ಬವಣೆ, ಹಳ್ಳಿಗಳು ತೆರವಾಗಿ ಪಟ್ಟಣಗಳು ತುಂಬಿಕೊಳ್ಳುತ್ತಿರುವುದು, ಇವೆಲ್ಲ ಕಡಿಮೆಯಾಗುತ್ತವೆ. ಈ ಬಗೆಯ ಕೆಲಸ ಬೇಗ ಆದಷ್ಟು, ದೇಶದ ಶಾಂತಿ ಹಾಗೂ ಪ್ರಗತಿಗೆ ಹಾದಿ ಹಾಕಿಕೊಟ್ಟಂತಾಗುತ್ತದೆ.

ಆದುದರಿಂದ ಪ್ರತಿಯೊಬ್ಬರಿಗೂ ಪುಸ್ತಕಾಲಯಸೇವೆ ಸಲ್ಲಬೇಕಾದರೆ, ಆತನಿಗೆ ಪ್ರಾಥಮಿಕ ಶಿಕ್ಷಣ ದೊರೆಯಬೇಕು. ಏಕೆ, ಆ ಶಿಕ್ಷಣಕ್ಕಾಗಿಯೇ ಪ್ರಾರಂಭದಲ್ಲಿ ಪುಸ್ತಕಾಲಯಗಳು ಶ್ರಮಿಸಬೇಕಾಗುವುದು. ಮುಂದೆ ಕಲಿತ ವಿದ್ಯೆ ಮರೆಯಲಾಗದಂತೆ, ವಿಚಾರದೀವಿಗೆಗೆ ಓದಿನ ತೈಲವನ್ನು

ಕೊಡುತ್ತಲೇ ಇರಬೇಕಾಗುವದು. ಅಲ್ಲಿಯವರೆಗೆ ನಮ್ಮ ಪುಸ್ತಕಾಲಯ ಸೇವೆಯಲ್ಲಿ ಇದು ಅತ್ಯಂತ ದೊಡ್ಡ ಕೊರತೆಯೆಂದೇ ಭಾವಿಸಬೇಕು.

## ಸ್ತ್ರೀಯರಿಗಾಗಿ

ಇದು ಹೀಗಾದರೆ, ಗಂಡಸರಿಗಿರುವಷ್ಟು ಪುಸ್ತಕಾಲಯದ ನೆರವು ನಮ್ಮ ಸ್ತ್ರೀವರ್ಗಕ್ಕಿಲ್ಲ. ಆಕೆ ದೈಹಿಕವಾಗಿ ಅಬಲೆ, ಅವಳ ಕೆಲಸ ಮನೆಗೆಲಸ ಎಂಬ ಮನೋಭಾವ ಇರುವ ನಾಗರಿಕ ಗಂಡಸರೇ ಎಷ್ಟಿಲ್ಲ! ಇನ್ನು ಕೆಲವು ವೇಳೆ ಕಲಿತ ಹೆಂಡತಿಯಿದ್ದರೂ, ಮನೆಯ ಕೈಂಕರ್ಯದಲ್ಲಿ ಕಲಿತ ಓದು, ಮರೆವಿನ ತೆರೆಯಲ್ಲಿ ಮರೆಯಾಗಿ ಹೋಗುವುದು ಅದೆಷ್ಟು ಸಂದರ್ಭಗಳಲ್ಲಿಲ್ಲ! ಆದರೆ ಲೋಕಸತ್ತೆಯ ಈ ಯುಗದಲ್ಲಿ ಆಕೆ ಅಬಲೆಯೆಂಬ ಭಾವನೆ ಕ್ರಮೇಣ ಮಸಳಿಸಿ ಹೋಗುತ್ತಲಿದೆ. ಅಷ್ಟೇಕೆ, ತಲ್ಲೀನತೆಯುಳ್ಳವರೂ ಸಹನ ಶೀಲೆಯರೂ ಆಗಿರುವ ಮಹಿಳೆಯರೇ ಓದಿಗೆ ಹೆಚ್ಚು ಅರ್ಹರೇನೋ! ಅವಳ ಬುದ್ಧಿಶಕ್ತಿ ಗಂಡಸಿನಷ್ಟು ಚುರುಕಲ್ಲ, ಎಂದೀಗ ಹೇಳಲು ಆಗದು. ಶಾಲೆ, ಕಾಲೇಜಿನ ಪರೀಕ್ಷೆಗಳಲ್ಲಿ ಸ್ತ್ರೀಯರೇ ಆಗಾಗ ನೈಲುಗೈಯವರಾಗುವುದನ್ನು ನೋಡುತ್ತಿದ್ದೇವೆ. ಇನ್ನವಳು ಕಲಿತು, ಓದಿಗೆ ನಿಂತರೆ, ಗೃಹಿಣೀಪದವನ್ನು ಚೆನ್ನಾಗಿ ನೋಡಿಕೊಳ್ಳಲಾರಳು ಎನ್ನುವಂತಿಲ್ಲ. ಕಲಿತ ಶಿಕ್ಷಣ, ಸ್ವಾಸ್ಥ್ಯ ಜೀವನಕ್ಕೆ ಬೇಕಾದ ಮುಂದಿನ ಓದು ಅವಳಿಗೆ ದೊರೆತು, ಭಾವೀ ನಾಗರಿಕರನ್ನು ಸಿದ್ಧಗೊಳಿಸುವ ಹಿರಿದಾದ ಹೊಣೆ ಅವರ ಮೇಲುಳಿಯುತ್ತದೆ. ಅಂತೆಯೇ ಪುಸ್ತಕಗಳ ಉಪಯೋಗದಲ್ಲಿ ಗಂಡಸು, ಹೆಂಗಸು ಎಂಬ ಭೇದ ಇರಕೂಡದು. ಮತ್ತಲ್ಲದೆ ಅವರ ದೃಷ್ಟಿಯಿಂದಲೇ ಅವರ ಜ್ಞಾನವೃದ್ಧಿಗೆ ಸಹಾಯಕವಾಗುವ ಪುಸ್ತಕಗಳು ಹೊರಡಬೇಕಾಗಿದೆ. ಅವರಿಗಾಗಿ ಪ್ರತ್ಯೇಕ ವಿಭಾಗವಿರುವುದೂ ಸರಿಯೇ.

## ಮಕ್ಕಳು — ಮುದುಕರು

ನಮಗೆ ವೈಯಕ್ತಿಕ ಆಸೆಯಿದ್ದರೂ ಈ ವಿಷಯದಲ್ಲಿ ನಾವು ಅಲಕ್ಷ್ಯ ಮಾಡಿದ ಇನ್ನೊಂದು ವರ್ಗವೆಂದರೆ ಮಕ್ಕಳದು! ಪಠ್ಯಪುಸ್ತಕ ಬಿಟ್ಟು ಬೇರೊಂದನ್ನು ನಮ್ಮ ಮಕ್ಕಳು ಓದುವುದು ಸಲ್ಲದೆಂಬ ಭಾವನೆ ಇನ್ನೂ ಇದೆ. "ಶಾಲೆಯ ಶಿಕ್ಷಣ ಮುಗಿಯುವ ವರೆಗೆ ಅವನ್ನೆಲ್ಲ ತಗೊಂಡು ನಮ್ಮ ಹುಡುಗ ಏನು ಮಾಡುತ್ತಾನೆ? ಮೇಲಾಗಿ ಅಭ್ಯಾಸಕ್ಕೆ ಗಮನ ಕೊಡದೆ ಪರೀಕ್ಷೆ

ಯಲ್ಲಿ ನಪಾಸು ಕೂಡಾ ಆದಾನೆ”ಂಬ ಹೆದರಿಕೆ, ನಮಗೆ! ಆದರೆ ಗಿಳಿಯಂತೆ ಪಾಠಮಾಡಿ ಪರೀಕ್ಷೆಗೆ ಕಟ್ಟಿದ ಮಗುವಿಗಿಂತ ಆಸ್ಥೆ ಇಟ್ಟು ಇತರ ಪುಸ್ತಕಗಳನ್ನು ಓದಿ, ವಿವಿಧ ವಿಷಯಗಳನ್ನು ತಿಳಿಯಲೇಳಸುವ ಮಗು ಸಮಾಜದಲ್ಲಿ ಹೆಚ್ಚು ಮುಂದೆ ಬರುತ್ತದೆ ಕುತೂಹಲ ಜಿಜ್ಞಾಸೆಗಳು ಮಕ್ಕಳ ಸಹಜ ಗುಣಗಳು. ಅವು ಬೆಳೆಯಲು ಪಠ್ಯೇತರ ಪುಸ್ತಕಗಳೇ ಹೆಚ್ಚು ಸಹಾಯಕಾರಿಯಾಗಿವೆ. ಮತ್ತೆ ಪಠ್ಯಗಳು ಕೂಡ ಇಂಥ ಒಂದು ಉದ್ದಿಶ್ಯದಲ್ಲಿ ನೆರವಾಗುವ ಒಂದು ಸಾಧನ ಮಾತ್ರವಲ್ಲವೆ? ಆದುದರಿಂದ ಮಕ್ಕಳಿಗೂ ಪುಸ್ತಕಸೇವೆ ಸಲ್ಲಬೇಕೆಂಬುದು ನಿರ್ವಿವಾದವಾಗಿದೆ.

ಇದನ್ನೊಪ್ಪಿಕೊಂಡ ಮೇಲೆ ಪ್ರೌಢರಿಗಿಂತ ಮಕ್ಕಳ ಪುಸ್ತಕಾಲಯ ಸೇವೆಗೆ ಹೆಚ್ಚು ಗಮನ ಕೊಡಬೇಕಾಗುತ್ತದೆ. ಅವರ ಬೇಕು, ಬೇಡಗಳನ್ನು ಅರಿತು ಕೆಲಸ ಮಾಡಬೇಕಾಗುತ್ತದೆ. ಅವರ ಎಳೆಯ ಮನಕ್ಕೆ ಹಿಡಿಯುವಂತೆ ಸಚಿತ್ರ ಹಾಗೂ ಕಥನಾತ್ಮಕ ರೀತಿಯಲ್ಲಿ ಅವರ ಪುಸ್ತಕಗಳಿರಬೇಕು. ಅವುಗಳೆಡೆಗೆ ತಾವಾಗಿಯೇ ಆಕರ್ಷಿತರಾಗುವಂತೆ ವ್ಯವಸ್ಥೆ ಇರಬೇಕು. ಮತ್ತು ಈ ವಯಸ್ಸಿನಲ್ಲಿಯೇ ಪುಸ್ತಕಾಲಯ ಪ್ರವೃತ್ತಿ ಬೇರೂರುವಂತೆ ನೋಡಿಕೊಳ್ಳಬೇಕು.

ಇದರ ಮಹತ್ವವನ್ನರಿತು ದೊಡ್ಡ ದೊಡ್ಡ ಸಾರ್ವಜನಿಕ ಪುಸ್ತಕ ಭಂಡಾರಗಳಲ್ಲಿ ಮಕ್ಕಳಿಗಾಗಿ ಪ್ರತ್ಯೇಕ ವಿಭಾಗವಿರುತ್ತದೆ. ಅಲ್ಲಿ ಅದಕ್ಕಾಗಿಯೇ ತರಬೇತಿಯನ್ನು ಹೊಂದಿದ ಭಂಡಾರಿಗರು ಬೇಕಾಗುತ್ತದೆ ಆ ವ್ಯಕ್ತಿ ಸ್ತ್ರೀಯಾಗಿದ್ದರೆ ಹೆಚ್ಚು ಲೇಸು ಅದರಂತೆ ಶಾಲೆ, ಕಾಲೇಜುಗಳಲ್ಲಿಯೂ ಪುಸ್ತಕಗಳ ವಿನಿಯೋಗ ಚೆನ್ನಾಗಿ ಆಗಲೇಬೇಕು ಮುಖ್ಯತಃ, ಮೊದಲು ಅದರ ಅರಿವು ಸಂಬಂಧಪಟ್ಟವರಿಗೆ ಆಗಬೇಕು, ಎನ್ನೋಣವೇ?

## ರೋಗಿಗಳು, ಕೈದಿಗಳು

ಹೀಗೆಯೇ ಓದಿನ ಹಕ್ಕಿನಿಂದ ವಂಚಿತರಾಗುವ ಅಥವಾ ಕಡಿಮೆ ಸೌಕರ್ಯ ದೊರೆಯುವ ಬೇರೆ ವರ್ಗಗಳುಂಟು. ಆಸ್ಪತ್ರೆಯಲ್ಲಿಯ ರೋಗಿಗಳನ್ನು ತೆಗೆದುಕೊಳ್ಳಬಹುದು. ರೋಗ ಗುಣವಾಗುವ ಸ್ಥಿತಿಯಲ್ಲಿದ್ದು, ಇನ್ನೂ ಶುಶ್ರೂಷೆ ಮುಗಿದಿರದ ರೋಗಿಗಳು ೨೪ ಗಂಟೆ ಹಾಸಿಗೆಯ ಮೇಲೆ ಹೊರಳಾಡಿಯೆ ದಿನ ತೆಗೆಯಬೇಕೆ? ಮಾನಸಿಕ ಶ್ರಮವಾಗದಂತೆ ಅವರಿಗೂ

ಪುಸ್ತಕಗಳು ಓದಲು ಬೇಕು. ಇದನ್ನರಿತೇ ಅಮೇರಿಕೆಯಲ್ಲಿ ಎಲ್ಲ ದೊಡ್ಡ ಆಸ್ಪತ್ರೆಗಳಲ್ಲಿ ಪುಸ್ತಕಾಲಯಗಳಿವೆ. ಸದ್ದುಮಾಡದೇ ಸರಿದಾಡುವ ಒಂದು ಶೆಲ್ಫಿನಲ್ಲಿ ಪುಸ್ತಕಗಳು ಪ್ರತಿ ಹಾಸಿಗೆಯನ್ನೂ ಕಂಡುಬರುತ್ತವೆ.

ಹಾಗೆಯೇ ಸೆರೆಮನೆಯಲ್ಲಿರುವವರು. ಅವರು ಸೆರೆಮನೆಯಲ್ಲಿರುವುದು ಅಪರಾಧವನ್ನು ತಿದ್ದಿಕೊಂಡು ಹಾದಿಗೆ ಹತ್ತಲೆಂದಾಗಿ. ಮಾಡಿದ ತಪ್ಪಿಗಾಗಿ ಕೇವಲ ದಂಡಿಸಲೆಂದಲ್ಲ. ಅಂಥವರಿಗೂ ಅವರವರಿಗೆ ಸರಿಹೊಂದುವಂತೆ ಪುಸ್ತಕಗಳನ್ನು ಕೊಡಬೇಕು. ಅಲ್ಲಿಯ ಭಂಡಾರಿಗ ಪ್ರತಿಯೊಬ್ಬನನ್ನು ಕಂಡು, ಅವರಿಗೆ ಏನು ಬೇಕಾದೀತು ಎಂದು ಪರ್ಯಾಯವಾಗಿ ವಿಚಾರಿಸಿ, ಅಂಥವುಗಳನ್ನು ಒದಗಿಸಬೇಕು. ಅದರಿಂದ ಒಟ್ಟಿನ ಪರಿಣಾಮ ಎಷ್ಟು ಒಳ್ಳೆಯದಾದೀತು ಎಂದು ಹೇಳಲಳವಲ್ಲ. ನಮ್ಮಲ್ಲಿ ರಾಜಕೀಯ ಕೈದಿಗಳಿಗೇನೋ ಪುಸ್ತಕಗಳನ್ನೊದಗಿಸುವ ಪರಿಪಾಠ ಬಿದ್ದಿದೆ. ಆದರೆ ಅದು ವ್ಯವಸ್ಥಿತವಾಗಿ ಇಲ್ಲ.

## ಅಂಗಹೀನರು

ಇನ್ನು ವಿಧಿಯ ದುರ್ವಿಪಾಕಕ್ಕೆ ತುತ್ತಾಗಿ ಅಂಗಹೀನರಾದವರ ಗತಿಯೇನು? ಅಂಥವರಲ್ಲಿ ಕುರುಡರು ಮುಖ್ಯರು. ಕಣ್ಣಿಲ್ಲದ ಮಾತ್ರಕ್ಕೆ ಕುರುಡನು ಶಿಕ್ಷಣಕ್ಕೂ ಓದಿಗೂ, ಮುಖ್ಯತಃ ಬದುಕುವುದಕ್ಕೆಯೇ ಬಾಧ್ಯಸ್ಥನಾಗಲಾರನೆ? ಈ ದಿಸೆಯಲ್ಲಿ ಪಾಶ್ಚಾತ್ಯರು ತುಂಬಾ ಪ್ರಗತಿಯನ್ನು ಸಾಧಿಸಿದ್ದಾರೆ. ಕುರುಡರಿಗಾಗಿ, ಅಕ್ಷರಗಳು ಮೇಲೆದ್ದ ತಗಡಿನ ಪುಸ್ತಕಗಳನ್ನು ಹೊರಡಿಸಿದ್ದಾರೆ. ಇಡೀ ಪುಸ್ತಕಗಳನ್ನೆ ರೆಕಾರ್ಡ ಮಾಡಿ, ಗ್ರಾಮೋಫೋನಿನಿಂದ ಕೇಳುವ ಹಾಗೆ ಯೋಜಿಸಿದ್ದಾರೆ. ಇಂಗ್ಲಂಡಿನಲ್ಲಿ ಕುರುಡರಿಗಾಗಿ ಒಂದು ರಾಷ್ಟ್ರೀಯ ಪುಸ್ತಕಭಂಡಾರವೇ ಇದೆ. ಅದರ ಪುಸ್ತಕಸಂಗ್ರಹ ಒಂದು ಲಕ್ಷಕ್ಕೂ ಮಿಕ್ಕಿದೆ!

ಹೀಗೆ ಪ್ರತಿಯೊಬ್ಬರಿಗೂ, ಆತ ಯಾರೇ ಇರಲಿ, ಎಲ್ಲಿಯೇ ಇರಲಿ, ಎಲ್ಲರಿಗೂ ಪುಸ್ತಕಗಳು ತಲುಪಬೇಕು. ಪ್ರಜಾಪ್ರಭುತ್ವದ ರಕ್ಷಣೆ ಇಂಥ ವಿಧಾಯಕ ಕಾರ್ಯಗಳಿಂದಲೇ ಚೆನ್ನಾಗಿ ನೆರವೇರುವುದೆಂಬುದನ್ನು ನಾವು ಮರೆಯಲಾಗದು. ಮತ್ತು ಈ ಸೂತ್ರದ ವ್ಯಾಪ್ತಿ ಬಹು ವಿಶಾಲವಾಗಿದ್ದು ಅದು ದೇಶದ ಮೂಲೆಮೂಲೆಗೂ ತಾಗುವಂತಿದೆ. ಇದನ್ನು ಸಾಧಿಸಬೇಕಾದರೆ

ಸರಕಾರವು ಒತ್ತಾಯದ ಲೈಬ್ರರಿ ಕಾನೂನನ್ನು ತರಬೇಕಾಗುತ್ತದೆ. ಇತ್ತ, ಸ್ಥಳೀಯ ಕಾರ್ಯವಾಹಕರ, ಭಂಡಾರಿಗರ ವಿಶಿಷ್ಟ ದುಡಿಮೆಯಲ್ಲಿಯೂ ಇದರ ಸಫಲತೆ ಅಡಗಿದೆ.

## ೩. ಪ್ರತಿಪುಸ್ತಕಕ್ಕೂ ಅದರ ಓದುಗನಿರಬೇಕು.

ಎಲ್ಲ ಓದುಗರಿಗೂ ಪುಸ್ತಕ ದೊರೆಯಬೇಕು ಎಂದು ಹೇಳಿದ ಎರಡನೆಯ ಸೂತ್ರಕ್ಕೆ ಈ ಮಾತು ಪೂರಕವಾಗಿದೆ. ದುಡ್ಡು ವೆಚ್ಚಮಾಡಿ ಪುಸ್ತಕಗಳನ್ನಿಡುವುದು ಓದಲೆಂದು. ಅವುಗಳಲ್ಲಿ ಕೆಲವೇ ಪುಸ್ತಕಗಳು ಉಪಯೋಗವಾಗುತಲಿದ್ದು ಅನೇಕ ಗ್ರಂಥಗಳು ಕಪಾಟಿನಲ್ಲಿಯೇ ಕುಳಿತಿರುವುದಾದರೆ, ಎಂದಿಗೂ ಸರಿಯಲ್ಲ. ಆಕಾರಣ ಪ್ರತಿ ಪುಸ್ತಕಕ್ಕೂ ಅದರ ಓದುಗ ದೊರೆಯಬೇಕು. ಈ ವಿಚಾರವನ್ನು ಸಫಲಗೊಳಿಸಬೇಕಾದರೆ ಪುಸ್ತಕಭಂಡಾರದಲ್ಲಿ ಕೆಲವು ಸುಧಾರಿತ ವಿಧಾನಗಳನ್ನು ಕೈಕೊಳ್ಳಬೇಕಾಗುತ್ತದೆ.

### ಮುಕ್ತದ್ವಾರ ಪದ್ಧತಿ

ಅವುಗಳಲ್ಲಿ ಮುಖ್ಯವಾದುದೆಂದರೆ ಮುಕ್ತದ್ವಾರ ಪದ್ಧತಿ. ಎಂದರೆ ಪ್ರತಿಯೊಬ್ಬನಿಗೆ ತನ್ನ ಮನೆಯ ಪುಸ್ತಕಸಂಗ್ರಹವಿದ್ದರೆ ಹೇಗೋ ಹಾಗೆ ಕಪಾಟುಗಳ ಬಳಿ ಹೋಗಿ ತಾನಾಗಿಯೇ ತನಗೆ ಬೇಕಿದ್ದ ಪುಸ್ತಕಗಳನ್ನು ಯಾವ ನಿರ್ಬಂಧವಿಲ್ಲದೆ ಪರಿಶೀಲಿಸುವ ಒಂದು ಸೌಕರ್ಯ. ಹೀಗೆ ಮುಕ್ತ ದ್ವಾರವಿದ್ದಾಗ ಓದುಗ ಲೈಬ್ರರಿಯಲ್ಲಿ ಯಾವ ಕಡೆಗಾದರೂ ಸುತ್ತಿಕೊಂಡು ತನಗೆ ಬೇಕಿದ್ದ ಹೊತ್ತಿಗೆಗಳನ್ನು ತೆಗೆದುಕೊಳ್ಳಬಹುದು. ಬೇಡವೇ ಅಲ್ಲಿಯೇ ಇಟ್ಟುಬಿಡಬಹುದು. ಹೀಗೆ ತಾವಾಗಿ ಹುಡುಕಿ ಪುಸ್ತಕವನ್ನೆತ್ತಿಕೊಳ್ಳುವ ಸ್ವಾತಂತ್ರ್ಯದಿಂದ ಓದುಗರಿಗುಂಟಾಗುವ ಸಮಾಧಾನ, ಸಂತೋಷ ಅಷ್ಟಿಷ್ಟಲ್ಲ. ಬರೀ ಸೂಚಿಯನ್ನು ನೋಡಿದರೆ ಒಂದು ಪುಸ್ತಕದ ಮಹತ್ವದ ಅರಿವು ಅವನಿಗಾಗುವುದಿಲ್ಲ. ಈ ಪದ್ಧತಿಯಿಂದ ಮರೆಯಲ್ಲಿದ್ದ ಪುಸ್ತಕಗಳು ಉಪಯೋಗಕ್ಕಾಗಿ ಹೊರಬರುತ್ತವೆ. ಓದುಗರು ತಾವಾಗಿ ಶೋಧಿಸುತ್ತ ಹೋದಂತೆಲ್ಲ, ಮೊದಲು ಬಾಹ್ಯಪರಿಚಯ ಮಾಡಿಕೊಂಡು, ಆ ಮೂಲಕ ಪುಸ್ತಕ ಒಳ್ಳೆಯದಿದ್ದೀತು, ತನಗದರ ಉಪಯೋಗವಾದೀತು ಎಂದು ಅದನ್ನು

ಎತ್ತಿಕೊಳ್ಳುವರು. ಮುಂದುವರಿದ ರಾಷ್ಟ್ರಗಳಲ್ಲಿ ಈ ಉಪಯೋಗ ಸ್ವಾತಂತ್ರ್ಯ ವಿಲ್ಲದ ಪುಸ್ತಕಭಂಡಾರಗಳು ಕಡಿಮೆ.

ಹೀಗೆ ಮಾಡಿದ್ದಾದರೆ, ಪುಸ್ತಕ ಕಳೆಯುವ ಸಂಭವವುಂಟು ಎಂದು ಕೆಲವರು ಶಂಕೆಯನ್ನೆತ್ತಬಹುದು. ಅವರಲ್ಲಿ ತಥ್ಯವಿಲ್ಲದಿಲ್ಲ. ಆದರೆ ಅನುಪ ಯೋಗೀ ಪುಸ್ತಕಗಳಲ್ಲಿ ತೊಡಗಿಸಿದ ಹಣದ ಮೊತ್ತವನ್ನು ನೆನೆದರೆ ಕಳೆದು ಹೋಗಬಹುದಾದ ಪುಸ್ತಕಗಳ ನಷ್ಟ ಏನೇನೂ ಅಲ್ಲ. ಅಲ್ಲದೆ ಕೇಳಿದ ಪುಸ್ತಕಗಳನ್ನು ತರುವ, ಇಡುವ ಸಹಾಯಕನ ಕೆಲಸವೂ ಅಷ್ಟು ಉಳಿಯು ತ್ತದೆ. ಓದುಗನ ವೇಳೆಯು ಉಳಿತಾಯ ಸಹಿತ ಇದರಿಂದ ಒದಗುವುದು. ಅಂತು, ಪುಸ್ತಕಗಳ ಹೆಚ್ಚಿನ ಉಪಯೋಗ, ಓದುಗನ ಸಮಾಧಾನ ಇವುಗಳ ಅರಿವು ನಮಗೆ ಎಷ್ಟು ಬೇಗ ಆದೀತೋ, ಅಷ್ಟು ಒಳ್ಳೆಯದು.

## ಪುಸ್ತಕ ಪ್ರಸರಣ

ಹೀಗಿದ್ದರೂ ಎಷ್ಟೋ ಸಲ ಓದುಗರ ಕೈಗೆ ಕೆಲವು ಪುಸ್ತಕಗಳು ಇನ್ನೂ ಎಟಕದೆ ಉಳಿಯುತ್ತವೆ. ಇಲ್ಲಿ ಪುಸ್ತಕಗಳನ್ನು ವಿಷಯಾನುಸಾರ ಹೊಂದಿಸಿ ಇಟ್ಟುದಾದರೆ ಆ ಒಂದು ವಿಷಯದ ಮೇಲಿನ ಎಲ್ಲ ಪುಸ್ತಕಗಳೂ ಉಪಯೋಗ ವಾಗದೇ ಇರವು. ಅದರಂತೆ ಹೊಸತೆಂಬುದರಲ್ಲಿಯ ಆಸಕ್ತಿ ಮಾನವ-ಸಹಜವಾದುದು. ಹೊಸ ಪುಸ್ತಕಗಳು ಬಂದವೆಂದರೆ, ಓದುಗರು ಒಳಗೆ ಕಾಲಿರಿಸಿದೊಡನೆ ಕಾಣುವಂತೆ, ಬಾಗಿಲ ಬಳಿಯಲ್ಲಿಯೇ ಅವನ್ನಿಟ್ಟರೆ, ಕಥನೇ ತರ ಪುಸ್ತಕಗಳಿಗೆ ಸಹಿತ 'ಗಿರಾಕಿ'ಗಳು ದೊರೆಯುವರು.

ಹಾಗೆಯೇ ಓದುಮನೆಯ ಕಿಟಕಿಗಳಲ್ಲೋ, ಎದ್ದು ಕಾಣುವಂತಹ ಇನ್ನಾವುದಾದರೂ ಸ್ಥಳದಲ್ಲಿಯೋ ಪ್ರದರ್ಶಕಗಳಲ್ಲಿ ವಿಶಿಷ್ಟಪುಸ್ತಕಗಳನ್ನಿಟ್ಟು ಆಕರ್ಷಿಸುವುದೂ ಒಂದು ಒಳ್ಳೆಯ ರೀತಿ. ಯಾವುದಾದರೂ ಪ್ರಚಲಿತ ಪ್ರಸಂಗದ ಮೇಲೆ ಭಂಡಾರದಲ್ಲಿದ್ದ ಎಲ್ಲ ಸಾಹಿತ್ಯವನ್ನು ತೆಗೆದು ಅಂಥ ಒಂದು ಜಾಗದಲ್ಲಿ ಇಡಬಹುದು. ಈಗ, ಸಾರ್ವಜನಿಕವಾಗಿ ಒಂದು ಚರ್ಚಾಕೂಟ ನಡೆಯುತ್ತಿದೆ ಎಂದು ತಿಳಿಯುವ. ವಿಷಯ—'ಧರ್ಮದಿಂದ ಸಮಾಜದ ಏಳಿ ಗೆಯೋ ವಿಜ್ಞಾನದಿಂದೋ?' ಧರ್ಮ ಮತ್ತು ವಿಜ್ಞಾನ ಈ ಎರಡೂ ವಿಷಯ ಗಳಿಗೆ ಸಂಬಂಧಪಟ್ಟ ಪುಸ್ತಕಗಳನ್ನು ಕೆಲ ದಿನಗಳ ಮುಂಚೆ ಗ್ರಂಥಾಲಯ ದಲ್ಲಿ, ಆನಂತರ ಚರ್ಚೆ ನಡೆಯುವ ಸಭಾಮಂದಿರದಲ್ಲಿ, ಇಡಬೇಕು. ಅವರಿಂದ

ಪುಸ್ತಕಗಳ ಬಳಕೆ ಹೆಚ್ಚಾಗದಿರದು. ಅದರಂತೆ, ಒಬ್ಬ ಹಿರಿ ಸಾಹಿತಿಗಳು ನಮ್ಮೂರಿಗೆ ಬರುವರೆನ್ನೋಣ. ಅವರ ಎಲ್ಲ ಕೃತಿಗಳನ್ನೂ ಪ್ರತ್ಯೇಕಿಸಿ ಇಟ್ಟು, ಓದುಗರನ್ನು ಆಕರ್ಷಿಸಬಹುದು.

## ಸೂಚಿಯು

ಪುಸ್ತಕಭಂಡಾರದಲ್ಲಿಯ ಸಂಗ್ರಹವನ್ನು ನಾವು ಸೂಚಿಯಲ್ಲಿ ಕಾಣ ಬಹುದು ತಾನೆ. ಮತ್ತೆ ಮುಕ್ತದ್ವಾರ ಪದ್ಧತಿಯೂ ಇದೆ ಎನ್ನುವ. ಇಷ್ಟಾ ದರೂ ಕಣ್ಣಿಗೆ ಬೀಳದಿರಬಹುದಾದ ಕೆಲ ಪುಸ್ತಕಗಳನ್ನು ಈ ಸೂಚಿಯು ಕೆಲ ವಿಧಾನಗಳಿಂದ ಅರಿಯಬಹುದು. ಮೈಸೂರ ಪ್ರಚಾರ ಪುಸ್ತಕಮಾಲೆ ಯವರು ಚಿಕ್ಕಚಿಕ್ಕ, ಆದರೂ ಅತ್ಯಂತ ಉಪಯುಕ್ತ ಪುಸ್ತಕಗಳನ್ನು ಪ್ರಕಟಿಸಿದ್ದಾರಷ್ಟೆ. ಅವುಗಳಲ್ಲಿ ಒಂದನ್ನು ಓದಿದ ಮೇಲೆ ಓದುಗರಿಗೆ ಮಾಲೆಯ ಇತರ ಪುಸ್ತಕಗಳನ್ನೂ ಓದಬೇಕೆಂಬ ಆಶೆ ಉಂಟಾಗುವುದು. ಆಗ ಸೂಚಿಯಲ್ಲಿ ಕ್ರಮವಾಗಿ ಈ ಮಾಲೆಯ ಎಲ್ಲ ಪುಸ್ತಕಗಳನ್ನೂ ಒಂದೆಡೆ ತೋರಿಸಿದರೆ, ತುಂಬ ಅನುಕೂಲವಲ್ಲವೆ ?

ಅದರಂತೆ ಯಾವುದೊಂದು ವಿಷಯವನ್ನು ತಿಳಿದುಕೊಳ್ಳಬಯಸುವವ ರಿಗೆ ಆ ವಿಷಯಕ್ಕೆ ಸಂಬಂಧಪಟ್ಟ ಇತರ ವಿಷಯಗಳನ್ನೂ ನೋಡಿರಿ ಎಂದು ಸುಳುಹನ್ನು ಕೊಟ್ಟು ಸೂಚಿಸಿದರೆ, ಅದರಿಂದ ಆ ಪುಸ್ತಕಗಳಿಗೂ ಓದುಗರು ದೊರೆಯುತ್ತಾರೆ.

## ವ್ಯಕ್ತಿಗತ ಸಹಾಯ

ಇಷ್ಟೆಲ್ಲ ಮಾಡಿದರೂ ಇದು ತಾಂತ್ರಿಕ ಕೆಲಸವಾಯಿತು. ನೀವು ಭಂಡಾರಕ್ಕೆ ಬಂದಿರೆಂದರೆ, ಅಲ್ಲಿ ನಿಮಗೆ ಹಸನ್ಮುಖಿಯಾಗಿ ಒಬ್ಬರು ಬಂದು ಸಹಾಯ ಮಾಡಿದರೆ ಹೇಗೆ ! ಈ ವರ್ಗೀಕರಣ, ಈ ಸೂಚಿ ಇವೆಲ್ಲ ಇದ್ದರೂ ಅವು ನಿರ್ಜೀವವಾದವುಗಳು. ಮಾನವನೇ ಪುಸ್ತಕಗಳ ಪ್ರಭಾವೀ ಪ್ರಚಾರಕ ನಾಗಬಲ್ಲ. ಆಕಾರಣ ಪುಸ್ತಕಾಲಯದ ಅಧಿಕಾರೀವರ್ಗದಲ್ಲೊಬ್ಬರು, ನಿಮಗೆ ಈ ರೀತಿಯ ಸಂದರ್ಭಸೇವೆಯನ್ನು ನೀಡುವವರಾಗಿ ಇರುತ್ತಾರೆ. ಅವರ ಕೆಲಸ ತಾತ್ಕಾಲಿಕವಾಗಿ ನಿಮಗೆ ಬೇಕಿದ್ದುದನ್ನು ಒದಗಿಸುವುದಾದರೂ ಒಟ್ಟಿನಲ್ಲಿ ಪುಸ್ತಕಗಳ ಬಗೆಯನ್ನು ವಿವರಿಸಬಲ್ಲರು. ನಿಮಗೆ ಎಂಥ ಪುಸ್ತಕ ಗಳು ಬೇಕೆಂಬುದನ್ನೂ ತಿಳಿಯಪಡಿಸುವರು. ಹೀಗೆ ಓದುಗರೊಟ್ಟಿಗೆ ನೇರ

ವಾದ ಸಂಸರ್ಕ ಅವರಿಗಿರುತ್ತದೆ. ಪುಸ್ತಕಭಂಡಾರದ ಬಗೆಬಗೆಯ ಪ್ರಯೋಜನವನ್ನು ಅವರು ಮಾಡಿಕೊಡುತ್ತಾರೆ. ಹಾಗಾಗಿ ಓದುಗರ ಶ್ರಮ ಉಳಿಯುತ್ತದೆ. ಅದರಿಂದ ಓದುಗರ ಮನಕ್ಕೆ ಅನಿಸುವ ಸಮಾಧಾನ ಪುಸ್ತಕಭಂಡಾರದ ಇಡುಗಂಟು ಇದ್ದ ಹಾಗೆ.

## ಪ್ರಚಾರ ಕಾರ್ಯ

ಇದು ಪ್ರಚಾರದ ಯುಗವಾದುದರಿಂದ ಪುಸ್ತಕಾಲಯಸೇವೆಯ ವಿಚಾರದಲ್ಲಿಯೂ ಪ್ರಚಾರಕಾರ್ಯ ಕೈಕೊಳ್ಳುವುದು ಅಗತ್ಯವೆಂದು ಬೇರೆ ಹೇಳಬೇಕಾಗಿಲ್ಲ. ತಮ್ಮ ಪುಸ್ತಕಭಂಡಾರದ ವ್ಯಾಪ್ತಿ, ಪ್ರಯೋಜನ, ಸೌಕರ್ಯ ಏನೇನಿವೆಯೆಂದು ಜನಕ್ಕೆ ಮನವರಿಕೆ ಮಾಡಿಕೊಡಬೇಕು. ಪುಸ್ತಕಭಂಡಾರಕ್ಕೆ ಎಷ್ಟು ಜನ ಹೆಚ್ಚೆಚ್ಚಾಗಿ ಬರುತ್ತಾರೆಯೋ, ಅದರಲ್ಲಿಯೇ ಭಂಡಾರಿಗರ ಕೆಲಸದ ಸಾಫಲ್ಯವಿದೆ. ಒಮ್ಮೆ ಒಳಗೆ ಪ್ರವೇಶಿಸಿದಾಗ, ನಮ್ಮ ಕಾರ್ಯ, ನಾವು ಕೊಡುವ ಸೌಕರ್ಯವನ್ನು ಮೆಚ್ಚಿ ಇನ್ನೊಂದು ಸಲಕ್ಕೆ ಬಾರದೆ ಉಳಿಯಲಾರರು ಎನ್ನೋಣ, ಆದರೆ ಮೊದಲ ಸಲಕ್ಕಾದರೂ ಅವರು ನಮ್ಮಲ್ಲಿ ಬರುವಂತಾಗಬೇಕಲ್ಲ !

ಈ ಪ್ರಚಾರ ಒಂದು ತಂತ್ರವಾದರೂ, ಮೂಲತಃ ಅದು ಒಂದು ಕಲೆ. ಪುಸ್ತಕಾಲಯ ಪ್ರಚಾರದ ತಾತ್ವಿಕತೆಯನ್ನು ಇಲ್ಲಿ ಹೇಳಬಹುದಷ್ಟೇ. ಪ್ರತಿಯೊಂದು ಪುಸ್ತಕಾಲಯದ ಪ್ರಚಾರ, ಪರಿಸ್ಥಿತಿಗನುಗುಣವಾಗಿಯೂ, ಕಾರ್ಯವಾಹಕರ ಯೋಗ್ಯತೆಯನ್ನು ಹೊಂದಿಕೊಂಡೂ ಇರುತ್ತದೆ.

ಗ್ರಂಥಾಲಯ ಪ್ರಚಾರ ಎರಡು ಬಗೆಯದು. ಒಂದು ಸಾಮಾನ್ಯ ಪ್ರಚಾರ. ಎಂದರೆ, ಪುಸ್ತಕಗಳು ಮತ್ತು ಅದರ ಓದಿನ ಬಗ್ಗೆ ಜನತೆಯಲ್ಲಿ ಒಟ್ಟಿನಲ್ಲಿ ಅಭಿರುಚಿ ಹುಟ್ಟಿಸುವುದು. ಅವರು ಪುಸ್ತಕಾಲಯಗಳಲ್ಲಿ ಆಸ್ಥೆ ವಹಿಸುವಂತೆ ಮಾಡುವುದು. ಇನ್ನೊಂದು, ವಿಶಿಷ್ಟ ಪ್ರಚಾರ; ತಮ್ಮ ಪುಸ್ತಕಾಲಯ ಜನತೆಗೆ ಯಾವ ಯಾವ ರೀತಿಗಳಲ್ಲಿ ನೆರವಾಗಲಿಕ್ಕಿದೆ ಎಂಬುದನ್ನು ಮನಗಾಣಿಸುವುದು.

ಪ್ರಚಾರಕಾರ್ಯದಲ್ಲಿ ಪತ್ರಿಕೆಗಳೇ ಮುಖ್ಯ ಸಾಧನವಾಗಿವೆ. ಪುಸ್ತಕಾಲಯ ಕೆಲಸದಲ್ಲಿ ಅಥವಾ ನಿರ್ವಹಣೆಯಲ್ಲಿ ಬದಲಾವಣೆಯೋ, ಸುಧಾರಣೆಯೋ ಆದೊಡನೆಯೇ, ಇಲ್ಲವೆ ಮಹತ್ವದ ಘಟನೆ ಇದ್ದರೆ ಪತ್ರಿಕೆಗಳಲ್ಲಿ

ಪ್ರಕಟಿಸಬೇಕು. ಭಂಡಾರಕ್ಕೆ ಸೇರಿಸಲಾದ ಹೊಸ ಪುಸ್ತಕಗಳ ಪಟ್ಟಿಯನ್ನು ವಾರವಾರಕ್ಕೆ ಪ್ರಕಟಿಸಬೇಕು. 'ಹಿಂದೂ' ಪತ್ರಿಕೆಯಲ್ಲಿ ಇಂಥ ಪ್ರಕಟನೆ ಪ್ರತಿವಾರವೂ ಇರುವುದನ್ನು ನೋಡಿರಬಹುದು.

ಇನ್ನು, ಇವೇ ಮೊದಲಾದ ವಿಷಯಗಳನ್ನು ಕರಪತ್ರಗಳ ಮೂಲಕವೋ ಬಹುಪ್ರತಿ ಯಂತ್ರದಿಂದ, ಸಾಕಷ್ಟು ಪ್ರತಿಗಳನ್ನು ಸಿದ್ಧಗೊಳಿಸಿಯೋ, ಹತ್ತು ಕಡೆ ಅದನ್ನು ಹರಡಬಹುದು. ಕೆಲವು ದೊಡ್ಡ ಪುಸ್ತಕಭಂಡಾರಗಳು ತಮ್ಮದೇ ಒಂದು ಮಾಸಪತ್ರಿಕೆಯನ್ನು ಹೊರಡಿಸುವುದುಂಟು. ಬಾನುಲಿಯನ್ನು ಸಹಿತ ಪುಸ್ತಕಭಂಡಾರದ ಪ್ರಚಾರಕ್ಕೆ ವಿನಿಯೋಗಿಸಿಕೊಳ್ಳಬಹುದು. ಆಗಾಗ ಪುಸ್ತಕಭಂಡಾರದಲ್ಲೇ ಸಾರ್ವಜನಿಕ ಭಾಷಣಗಳನ್ನು ಏರ್ಪಡಿಸುವುದೂ ಒಂದು ಬಗೆಯ ಪ್ರಚಾರವಾದಂತಾಗುತ್ತದೆ.

ನಗರದಲ್ಲಿ ಇಷ್ಟೆಲ್ಲ ಮಾಡಲಾದೀತು, ಎನ್ನುವ. ಆದರೆ ಹಳ್ಳಿಗಳಲ್ಲಿ? ತಾಲೂಕಿನ ಸ್ಥಳಗಳಲ್ಲಿ ? ನಿರಕ್ಷರಿಗಳಾದವರ ಮುಂದೆ ಇದೆಲ್ಲ ಎಂತು ಸಾಧ್ಯ? ಅಂಥಲ್ಲಿ ಪುಸ್ತಕಗಳನ್ನು ನಾಲ್ಕು ಜನರ ಮುಂದೆ ವಿವರಿಸುತ್ತ ಓದಿ ಹೇಳಬೇಕಾಗಿ ಬರುವುದು. ಇದಲ್ಲದೇ ಮಾಯಾದೀಪಗಳು, ಪ್ರದರ್ಶನಗಳಂತೂ ಸರಿಯೇ. ಅಂದರೆಯೇ ಅವರಲ್ಲಿ ಕಲಿಯಬೇಕೆಂಬ ಆಸೆ ತಾನಾಗಿ ಉತ್ಪನ್ನವಾಗುವುದು. ಶಿಕ್ಷಣಕಾರ್ಯದಲ್ಲಿ ಪುಸ್ತಕಭಂಡಾರವು ಪೋಷಕವಾಗಿ ಉಳಿಯುವುದು.

ಇಲ್ಲಿ ಎಳೆಎಳೆಯಾಗಿ ಪ್ರಚಾರಕಾರ್ಯವನ್ನು ಹೇಳಿದೆಯಷ್ಟೆ. ಇವಕ್ಕೆ ಮಹತ್ವ ಕೊಟ್ಟಷ್ಟೂ ಜನತೆಯಲ್ಲಿ ಪುಸ್ತಕಾಲಯಗಳ ಬಗ್ಗೆ ಈಗಿರುವ ಅನಾಸ್ಥೆ ಹೋಗಲು ಸಾಧ್ಯವಾಗುತ್ತದೆ. ಪ್ರತಿ ಪುಸ್ತಕದ ಅಮೂಲ್ಯ ಪ್ರಯೋಜನ ಪ್ರತಿಯೊಬ್ಬರಿಗೂ ದೊರೆಯುತ್ತದೆ.

## ೪. ಓದುಗನ ವೇಳೆ ಉಳಿಸಬೇಕು.

ಕೈಗಡಿಯಾರದ ಈ ಕಾಲದಲ್ಲಿ ವೇಳೆಯ ಮಿತವ್ಯಯಕ್ಕೆ ಏಕೆ ಗಮನ ಕೊಡಬೇಕೆಂಬುದರ ಸಮರ್ಥನೆ ಬೇಡವಷ್ಟೆ. ಮಿತವ್ಯಯ ಅಂತಿರಲಿ, ಒಂದು ಪುಸ್ತಕಕ್ಕೋ, ಒಂದು ವಿಷಯ ತಿಳಿದುಕೊಳ್ಳುವುದಕ್ಕೋ ಬಂದ ಓದುಗ

ರನ್ನು ಸುಮ್ಮನೆ ಕಾಯಿಸುವದೆಂದರೆ ಎಂಥ ಅನ್ಯಾಯ! ಆದುದರಿಂದ ಎಷ್ಟು ಕಡಿಮೆ ವೇಳೆಯಲ್ಲಿ ಅವರಿಗೆ ಬೇಕಿದ್ದುದನ್ನು ಒದಗಿಸಿಕೊಡುವೆವೋ, ಅಷ್ಟು ಒಳ್ಳೆಯದು. ಓದುಗರ ಸೇವೆಯೇ ಭಂಡಾರಿಗನ ಪ್ರಥಮಕಾರ್ಯ. ಇತರ ಯಾವ ಕೆಲಸವಿದ್ದರೂ ಬಿಟ್ಟುಬಂದು ಮೊದಲು ಅವರ ಕೇಳಿಕೆಗೆ ಕಿವಿಗೊಡಬೇಕು.

ವೇಳೆಯ ಪ್ರಶ್ನೆ ದೊಡ್ಡ ದೊಡ್ಡ ಪುಸ್ತಕಾಲಯಗಳಲ್ಲಿ ಒಂದು ಹಿರಿಯ ಸಮಸ್ಯೆಯಾಗುತ್ತ ಹೋಗುವುದು. ಸಾವಿರಗಟ್ಟಲೆ ಪುಸ್ತಕಗಳಿರುವ ಭಂಡಾರಗಳಲ್ಲಿ ಯಾವುದೋ ಒಂದು ಪುಸ್ತಕ ಕೇಳಿದಾಗ, ಹುಡುಕುವುದಕ್ಕೇ ಒಂದು ಗಂಟೆ ಕಳೆದರೆ ಎಂಥ ಅಪವ್ಯಯವಾದೀತು, ವೇಳೆಯದು? ಮೂವತ್ತು ಲಕ್ಷಕ್ಕೆ ಮಿಕ್ಕಿ ಗ್ರಂಥಗಳು ಇರುವ ಬ್ರಿಟಿಶ್ ಮ್ಯೂಸಿಯಂ ಪುಸ್ತಕ ಭಂಡಾರದಲ್ಲಿ, ಯಾರೂ ಇದುವರೆಗೆ ಕೇಳಿರದ, ಕರ್ನಾಟಕದ ಇತಿಹಾಸಕ್ಕೆ ಸಂಬಂಧಪಟ್ಟ ಓದಿನ ಸಾಮಗ್ರಿಯನ್ನು ಕನ್ನಡಿಗರೊಬ್ಬರು ಹೋಗಿ ಕೇಳಿದಾಗ, ೧೦ ನಿಮಿಷಗಳಲ್ಲಿ ತಂದುಕೊಟ್ಟರಂತೆ!

ಈ ಮೊದಲೇ ಹೇಳಿದಂತೆ ಮುಕ್ತದ್ವಾರವಿರುವುದರಿಂದ ಓದುಗನ ವೇಳೆ ಅನೇಕ ಬಗೆಯಾಗಿ ಉಳಿಯುತ್ತದೆ. ಆಗ, ಒಂದು ಪುಸ್ತಕಕ್ಕಾಗಿ ಚೀಟಿ ಬರೆದುಕೊಟ್ಟು ಅದು ಬರುವ ವರೆಗೆ ಕಾಯುವ ತಾಪತ್ರಯವಿಲ್ಲ. ಒಂದು ಪುಸ್ತಕವನ್ನು ಈಗೊಮ್ಮೆ ನೋಡಿ ಇಟ್ಟಿರುತ್ತಾರೆ. ಮತ್ತೊಂದು ದಿನ ಬಂದಾಗ, ಒಂದೇ ನಿಮಿಷದಲ್ಲಿ, ಓದುಗರೇ ತಟ್ಟನೆ ಹೋಗಿ ಅದನ್ನು ತಗೊಂಡು ಬರಬಹುದಲ್ಲ. ನಂಬರನ್ನು ತಿಳಿಸುವಾಗ ಓದುಗರೇನಾದರೂ ಥಕ್ಕನೆ ತಪ್ಪಿದಲ್ಲಿ ಮತ್ತೆ ಹೆಚ್ಚಿನ ವೇಳೆ ಬೇಕಾಗುತ್ತದೆ. ಅಲ್ಲದೆ ಪ್ರತಿಸಾರೆ ಸೂಚಿಯನ್ನು ತೆರೆತೆರೆದು ನೋಡುವುದರ ವೇಳೆಯೂ ಉಳಿಯುವುದಿಲ್ಲವೆ?

## ಪುಸ್ತಕಗಳ ಹೊಂದಿಕೆ

ಪುಸ್ತಕಗಳನ್ನು ಕಪಾಟುಗಳಲ್ಲಿ ಹೊಂದಿಸಿಡುವಲ್ಲಿಯೂ ಈ ಸೂತ್ರವನ್ನು ಗಣನೆಗೆ ತಂದುಕೊಳ್ಳಬೇಕಾಗುತ್ತದೆ. ಎಲ್ಲ ಪುಸ್ತಕಗಳನ್ನು ಅವುಗಳ ತಲೆಬರಹದ ಮೊದಲಕ್ಷರದಿಂದಲೋ, ಲೇಖಕರ ಹೆಸರಿನ ಅಕಾರಾದಿಯಲ್ಲೋ ಹೊಂದಿಸಿಟ್ಟರೆ, ಓದುಗನ ವೇಳೆ ತುಂಬಾ ವ್ಯಯವಾಗುತ್ತದೆ. ಆದುದರಿಂದ ಅವುಗಳನ್ನು ವಿಷಯಾನುಕ್ರಮದಲ್ಲಿ ಹೊಂದಿಸಿಡಬೇಕು. ಇದರಲ್ಲಿ ಒಂದಕ್ಕೊಂದು

ಸಂಬಂಧಪಡುವ ವಿಷಯಗಳ ಪುಸ್ತಕಗಳು ಹತ್ತಿರ ಹತ್ತಿರವಿರಬೇಕು; ವೇದಾಂತದ ವಿಭಾಗದ ಬಳಿಯಲ್ಲೇ ಧಾರ್ಮಿಕ ಪುಸ್ತಕಗಳಿರಬೇಕು.

ಈ ಹೊಂದಿಕೆಯಲ್ಲಿ ಇನ್ನೊಂದು ಅಂಶವೆಂದರೆ, ಯಾವ ವಿಭಾಗಗಳಲ್ಲಿ ಓದುಗರ ಬಳಕೆ ಹೆಚ್ಚಾಗಿರುವುದೋ ಅವುಗಳು ತೀರ ಸಮೀಪದಲ್ಲಿರಬೇಕು. ಉದಾಹರಣೆಗೆ ಕತೆ, ಕಾದಂಬರಿಗಳು. ಅದರಂತೆ ತಾತ್ಕಾಲಿಕ ಉಪಯೋಗದ ನಿಘಂಟುಗಳೂ, ಕೋಶಗಳೂ, ಕೈಪಿಡಿಗಳೂ ಓದುಗರು ಬಂದೊಡನೆ, ಅವರೆದುರಿಗೆ ಕಾಣುವಂತಿರಬೇಕು.

## ಉಳಿತಾಯದ ಇತರ ಸಾಧನಗಳು

ಮುಕ್ತದ್ವಾರ ಪದ್ಧತಿಯನ್ನನುಸರಿಸಲಿ ಬಿಡಲಿ, ಪುಸ್ತಕಗಳನ್ನಿಟ್ಟ ಸ್ಥಳದ ಪ್ರವೇಶದ ಬದಿಗೆ ಯಾವ ಯಾವ ಕಪಾಟುಗಳಲ್ಲಿ ಯಾವ ಯಾವ ವರ್ಗಗಳಿವೆ ಎಂಬುದರ ಸೂಚಿ ಇರಬೇಕು. ಅಲ್ಲದೆ ಪ್ರತಿ ಕಪಾಟಿಗೂ ಅದರಲ್ಲಿ ಯಾವ ನಂಬರಿನಿಂದ ಯಾವ ನಂಬರಿನ ವರೆಗೆ ಪುಸ್ತಕಗಳಿವೆಯೆಂಬುದೂ ಸೂಚಿತವಾಗಿದ್ದರೆ ಸಹಾಯಕನ ವೇಳೆಯೂ ಉಳಿಯುತ್ತದೆ.

ಓದುಗನ ವೇಳೆ ಉಳಿಸಲು ಸೂಚಿಯಲ್ಲಿಯೂ ಸೂಕ್ಷ್ಮ ಗಮನ ಕೊಡುವುದಗತ್ಯವಿದೆ. ಅದರಲ್ಲಿ ಒಂದು ವಿಷಯದ ಮೇಲೆ ಎಲ್ಲ ಪುಸ್ತಕಗಳೂ ಒಂದೆಡೆಗೇ ಇರುವಂತೆ ವ್ಯವಸ್ಥೆ ಇರಬೇಕು. ಮತ್ತೆ, ಪ್ರಮಾಣಪತ್ರಿಕೆಗಳಲ್ಲಿ ಬೆಲೆಯುಳ್ಳ ಲೇಖನಗಳಿರುತ್ತವೆ. ಆ ಲೇಖನಗಳನ್ನು ಸಹಿತ ವಿಷಯಾನ್ವಯ ವರ್ಗೀಕರಿಸಿ ಇಡಬೇಕು.

ಸಂದರ್ಭಸೇವೆ ಎಂದರೆ ವ್ಯಕ್ತಿಗತ ಸಹಾಯದ ಕುರಿತು ಹೇಳಿತಲ್ಲವೆ. ಇದರಿಂದಲೂ ಓದುಗರ ಅನವಶ್ಯಕ ಹುಡುಕಾಟ ಬೇಕಾದಷ್ಟು ಸಲ ತಪ್ಪುತ್ತದೆ. ಅವರ ವೇಳೆಯನ್ನು ಉಳಿಸಲು ಎಷ್ಟೆಲ್ಲ ಏರ್ಪಾಡನ್ನು ಮಾಡಿರಬಹುದು. ದೊಡ್ಡ ದೊಡ್ಡ ಗ್ರಂಥಾಲಯಗಳಲ್ಲಿ ಆ ಏರ್ಪಾಟುಗಳನ್ನೆ ಹುಡುಕುವಂತಾಗುತ್ತದಲ್ಲ! ಆಗ 'ಸಂದರ್ಭಸಹಾಯಕ'ನಿದ್ದರೆ ಕೆಲಸ ಸುಲಭ.

## ಕಾರ್ಡಿನ ಉಪಯೋಗ

ನಮ್ಮ ಇಂದಿನ ಸಾಧಾರಣ ದೊಡ್ಡ ಪುಸ್ತಕಾಲಯಗಳಲ್ಲಿ ಕಂಡುಬರುವ ಕೊರತೆ ಎಂದರೆ ಪುಸ್ತಕಗಳನ್ನು ಕೊಡುವಲ್ಲಿ, ಇಸಿದುಕೊಳ್ಳುವಲ್ಲಿ ತುಂಬಾ ವೇಳೆಯನ್ನು ತೆಗೆದುಕೊಳ್ಳಲಾಗುತ್ತಿದೆ. ಒಂದೊಂದು ಸಲ ಮುಕ್ಕಾಲು

ಗಂಟೆ ಕಾಯಬೇಕಾಗುತ್ತದೆ. ಅದಕ್ಕೆ ಕಾರಣ, ಅಲ್ಲಿಯ ನಿರ್ವಾಹಕರ ಅನಾಸ್ಥೆಯಲ್ಲ, ದಕ್ಷತೆಯ ಪ್ರಶ್ನೆಯಲ್ಲ; ಪುಸ್ತಕವನ್ನು ಕೊಡತಗೊಳ್ಳುವ ಕ್ರಮದಲ್ಲಿ ದೋಷವಿದೆ. ನಮ್ಮ ಸಂಘ-ಸಂಸ್ಥೆಗಳ ಪುಸ್ತಕ ಭಂಡಾರಗಳಲ್ಲಿ ಓದುಗರ, ರಜಿಸ್ಟರಿನಲ್ಲಿಯ ಪುಟಸಂಖ್ಯೆ, ಅದು ನೆನಪಿರದಿದ್ದರೆ ಪರಿವಿಡಿ ನೋಡಿ ಅವರಲ್ಲಿ ಪುಸ್ತಕಗಳ, ನಂಬರನ್ನು ಹೆಸರನ್ನು ಬರೆದುಕೊಂಡು, ತಾರೀ ಖನ್ನು ಹಾಕಿ ಅವರ ಸಹಿ ತೆಗೆದುಕೊಂಡಲ್ಲಿಗೆ ಮುಗಿಯುತ್ತದೆ. ಇಷ್ಟಕ್ಕೆ ಎರಡರಿಂದ ಮೂರು ಮಿನಿಟು ಮಾತ್ರ ಹತ್ತುತ್ತದೆ. ನಿಜ, ೨-೩ ನಿಮಿಷದ ವೇಳೆ ಏನೂ ಅಲ್ಲ. ಅದೇ ಗಡಬಡಿಯ ಗಳಿಗೆಗಳಲ್ಲಿ, ಜನ ಹೆಚ್ಚಿದ್ದಾಗ, ಬಂದವರು ಕಾಯುತ್ತ ನಿಲ್ಲಬೇಕಾಗಿ ಬಂದಾಗ ಅವರ ಮನಸ್ಸಿಗಾಗುವ ಕಿರಿ ಕಿರಿ ಗ್ರಂಥಾಲಯ ಸೇವೆಗೆ ಒಂದು ಕಲಂಕವಿದ್ದ ಹಾಗೆ. ಅದಕ್ಕಾಗಿ, ಈ ರಜಿ ಸ್ಟರಿನ ಪದ್ಧತಿಯನ್ನು ಬಿಟ್ಟುಬಿಟ್ಟು, ಕಾರ್ಡಿನ ಪದ್ಧತಿಯನ್ನು ಬಳಸಿದು ದಾದರೆ ವೇಳೆ ತುಂಬಾ ಉಳಿಯುತ್ತದೆ. ಅದರ ಕ್ರಮವನ್ನು ಮುಂದೆ ವಿವರ ದಲ್ಲಿ ಹೇಳಲಾಗುವುದು.

### ನಿರ್ವಾಹಕರ ವೇಳೆಯ ಉಳಿತಾಯ

ಕೊನೆಯದಾಗಿ, ಓದುಗರ ವೇಳೆ ಉಳಿಯಬೇಕೆಂಬುದರಲ್ಲಿ ಪುಸ್ತಕಾ ಲಯ ನಿರ್ವಾಹಕರ ವೇಳೆಯ ಉಳಿತಾಯದ ಅಂಶವೂ ಇದೆ. ನಿತ್ಯ ಕೆಲಸ ದಲ್ಲಿ, ದಾಖಲೆಗಳನ್ನಿಡುವಲ್ಲಿ ಅವರ ವೇಳೆ ಉಳಿದಷ್ಟೂ ಓದುಗರಿಗೆ ವ್ಯಕ್ತಿಶಃ ನೆರವು ನೀಡುವ ಅವಧಿ ಹೆಚ್ಚುತ್ತದೆ. ಅದರಿಂದಾಗಿ ಎಷ್ಟೋ ಬದಲಾವಣೆ ಗಳಾಗಿವೆ. ಅವುಗಳಲ್ಲಿ ಹಿನ್ನೆಲೆಯಾಗಿರುವುದೆಂದರೆ, ಕಾರ್ಡುಗಳ ಉಪ ಯೋಗವೇ! ಅದರಿಂದ ವೇಳೆಯ ಉಳಿತಾಯವೊಂದೇ ಅಲ್ಲದೆ, ಇತರ ಸೌಕರ್ಯ ಗಳು ದೊರೆತಿರುವುದೂ ಇಷ್ಟೇ ಎಂದು ಹೇಳಲುಬಾರದು.

## ೫. ಗ್ರಂಥಾಲಯವು ಬೆಳೆಯುತ್ತಿರುವ ಸಂಸ್ಥೆ

ಮೊದಲ ನಾಲ್ಕು ಸೂತ್ರಗಳಿಗಿಂತ ಇದರ ನಮೂನೆಯೇ ಬೇರೆ. ಅಲ್ಲಿ ಪುಸ್ತಕಾಲಯಗಳ ಕಾರ್ಯವನ್ನು ಹೇಳಿದ್ದಿದ್ದರೆ, ಇಲ್ಲಿ ಅದರ ಯೋಜನೆ ಯನ್ನು ಕುರಿತು ವಿಚಾರಿಸಬೇಕಾಗಿದೆ. ಬೆಳವಣಿಗೆಯೇ ಜೀವಂತಿಕೆಯ ಲಕ್ಷಣ. ತನ್ನ ಕಾರ್ಯದಲ್ಲಿ ಸ್ಥಗಿತವಾದ ಪುಸ್ತಕಾಲಯವು ನಿರ್ಜೀವ ಹಾಗೂ

ನಿಷ್ಪ್ರಯೋಜಕವೆಂದೇ ಹೇಳಬೇಕು. ಈ ಬೆಳವಣಿಗೆ ಎಂಬ ಮಾತಿನಲ್ಲಿ ಬದಲಾವಣೆಯಿದೆ. ಹಳೆಯದನ್ನೂ, ಜೀರ್ಣವಾದುದನ್ನೂ ತೆಗೆದೆಸೆದು ಹೊಸ ಆಕಾರ, ರೂಪ ಹಾಗೂ ಹೊಸ ರೀತಿಯನ್ನು ಹೊಂದುವ ಗುಣಧರ್ಮವಿದೆ.

ಪುಸ್ತಕಾಲಯಗಳೆಂದರೆ ಪುಸ್ತಕ, ಓದುಗ, ಭಂಡಾರಿಗ ಇವರ ತ್ರಿಕೂಟವೆಂಬುದನ್ನು ನೋಡಿದ್ದೇವೆ. ಬೆಳವಣಿಗೆಯು ಈ ಮೂರರಲ್ಲೂ ಕಾಣಿಸಿಕೊಳ್ಳುತ್ತದೆ. ಆದುದರಿಂದ ಒಂದು ಪುಸ್ತಕಾಲಯದ ಯೋಜನೆಯನ್ನು ಕೈಕೊಳ್ಳುವಾಗ, ಈ ಮೂರರ ಬೆಳವಣಿಗೆ ಮುಂದೆ ಆಗಲಿದೆಯೆಂಬ ದೂರದೃಷ್ಟಿಯನ್ನಿಟ್ಟುಕೊಂಡಿರಲೇಬೇಕು.

## ಪುಸ್ತಕಗಳು

ಸಾವಿರಾರು ಪುಸ್ತಕಗಳು ಮುದ್ರಿತವಾಗುತ್ತಿರುವ ಈ ಕಾಲದಲ್ಲಿ ಪುಸ್ತಕಗಳ ಸಂಖ್ಯೆ ಹೆಚ್ಚುವ ಪ್ರಮಾಣ ಹೀಗೇ ಎಂದು ಹೇಳಲಾದೀತೆ? ೫೦೦೦ ಪುಸ್ತಕಗಳಿಂದ ಪ್ರಾರಂಭವಾದ ಒಂದು ಪಾಶ್ಚಾತ್ಯ ಪುಸ್ತಕಾಲಯದ ಸಂಗ್ರಹ ಕೆಲವೇ ವರ್ಷಗಳಲ್ಲಿ ಎರಡು ಲಕ್ಷಕ್ಕೂ ಮಿಕ್ಕಿದುದಿದೆ. ಇದರ ಪರಿಣಾಮ ವೈಪರೀತ್ಯವೇನೆಂದರೆ, ಪುಸ್ತಕಾಲಯ ಕಟ್ಟಡ ಸಣ್ಣದಾಗಿದ್ದುದಾದರೆ ಸ್ಥಳಸಂಕೋಚದ ಸಮಸ್ಯೆ ನಿಲ್ಲುತ್ತದೆ. ಆದುದರಿಂದ ಕಟ್ಟಡವು, ಸಾಧ್ಯವಾದರೆ ಮಹಡಿಗಳನ್ನು ಏರಿಸುವ ಹಾಗೆ ರಚಿತವಾಗಿರಬೇಕು. ಇಲ್ಲವೆ ಬದಿಗೆ ಇನ್ನೊಂದನ್ನು ಕಟ್ಟುವುದಕ್ಕಾದರೂ ಜಾಗವಿರಬೇಕು. ಆಕ್ಸಫರ್ಡ ವಿಶ್ವವಿದ್ಯಾಲಯಕ್ಕೆ ಇಂಥ ಅನುಕೂಲತೆಗಳಿಲ್ಲದ್ದರಿಂದ, ಪುಸ್ತಕಗಳನ್ನಿಡಲು ನೆಲಮನೆಯನ್ನು ಮಾಡಬೇಕಾಯಿತು.

ಆದುದರಿಂದ ಪುಸ್ತಕ ಸಂಗ್ರಹದ ಕೋಣೆಗಳು ಸಾಕಷ್ಟು ಎತ್ತರವಾಗಿದ್ದು, ಪ್ರಸಂಗ ಬಂದರೆ ಅದರಲ್ಲೇ ಅಟ್ಟಣೆಯನ್ನು ಮಾಡುವ ಹಾಗಿರಬೇಕು. ಹಾಗೆಯೇ ಪತ್ರಿಕಾಗಾರವೂ ಕೂಡ ವಿಶಾಲವಾದುದಿರಬೇಕು. ಅಲ್ಲಿ ಪತ್ರಿಕೆಗಳ ಸಂಖ್ಯೆಯಾದರೂ ಹೆಚ್ಚಬಹುದು. ಓದುಗರ ಸಂಖ್ಯೆಯೂ ಕ್ರಮೇಣ ಹೆಚ್ಚಾಗುವುದು.

ಕಾರ್ಡಿನ ರೂಪದಲ್ಲಿ ಸೂಚಿಯು ಇರುವೆಡೆಯಲ್ಲಿ ಅವುಗಳ ಪೆಟ್ಟಿಗೆಗಳಿಗಾಗಿ ಜಾಗ ತುಂಬಾ ಬೇಕು. ಪುಸ್ತಕಗಳ ಬೆಳವಣಿಗೆಯ ಐದು ಪಟ್ಟು ಇದರ ಬೆಳವಣಿಗೆಯಿರುವುದೆಂಬುದನ್ನು ಇಲ್ಲಿ ನೆನೆಯುವಂತಿದೆ.

ಇನ್ನು ಬರುವ ಹೊಸ ಪುಸ್ತಕಗಳಿಗಾಗಿ ನಾವು ಹಳೆಯ ಪುಸ್ತಕಗಳಲ್ಲಿ ಕೆಲವನ್ನು ತೆಗೆಯಬೇಕಾಗುತ್ತದೆ. ವಿಶ್ವವಿದ್ಯಾಲಯ ಅಥವಾ ಕಾಪಿರೈಟ ಗ್ರಂಥಾಲಯಗಳಲ್ಲಿ ಇದು ಸಾಧ್ಯವಾಗಲಿಕ್ಕಿಲ್ಲ. ಆದರೂ ಸಾರ್ವಜನಿಕ ಪುಸ್ತಕಾಲಯಗಳಲ್ಲಿ ಹರಕಲು ಪುಸ್ತಕಗಳನ್ನು, ಒಂದಕ್ಕಿಂತ ಹೆಚ್ಚಿಗೆ ಪ್ರತಿಗಳುಳ್ಳ ನಿರುಪಯೋಗಿಯಾದ ಪುಸ್ತಕಗಳನ್ನು ಆಗಾಗ ತೆಗೆಯಬೇಕು. ಕಷ್ಟವೇನೆಂದರೆ, ಹೀಗೆ ತೆಗೆಯುವುದಕ್ಕೆ ಮನಸು ಒಗ್ಗುವುದಿಲ್ಲ! ಆದರೆ ಕಸವನ್ನೆಲ್ಲ ತುಂಬಿಕೊಂಡಿರುವ ಪುಸ್ತಕಾಲಯ ಜೀವಂತವಾದುದಲ್ಲ, ನಿರುಪಯೋಗಿ ಪುಸ್ತಕಗಳ ಹೊರೆ ಖಂಡಿತ ಅಗತ್ಯವಿಲ್ಲ ಎಂಬುದು ಚೆನ್ನಾಗಿ ತಲೆಗೆ ಹಾಗಬೇಕಾಗಿದೆ ನಮಗೆ!

ಪುಸ್ತಕಗಳ ಹೆಗ್ಗಳವಾದ ಆಯಾತ ವರ್ಗೀಕರಣ ಪದ್ಧತಿಯ ಮೇಲೂ ಪರಿಣಾಮ ಮಾಡುತ್ತದೆ. ಇದ್ದ ಸಂಗ್ರಹವನ್ನೆಲ್ಲ ಒಮ್ಮೆ ವರ್ಗೀಕರಿಸಿ ಇಟ್ಟಿ ದಾದರೆ ಮುಂದೆ ಬರುವ ಪುಸ್ತಕಗಳು ತಂತಮ್ಮ ನೆರವಿಯಲ್ಲೇ ಸೇರಿಕೊಂಡು ಇದ್ದ ಕ್ರಮವನ್ನು ಅಸ್ತವ್ಯಸ್ತಗೊಳಿಸದೇ ಇರಬೇಕು. ಸುಮ್ಮನೆ ಎಂಟೋ, ಹತ್ತೋ ಮುಖ್ಯ ವಿಭಾಗಗಳನ್ನು ಮಾಡಿ ಅವುಗಳಲ್ಲಿ, ಹೊಸ ಹೊತ್ತಿಗೆಗಳು ಬಂದ ಹಾಗೆಲ್ಲ ಸೇರಿಸಿಕೊಳ್ಳುತ್ತ ಹೋಗುವುದು ಸಣ್ಣ ಪುಸ್ತಕಾಲಯಗಳಿಗೆ ಸರಿಹೋದೀತು. ಆದರೆ ಸದ್ಯ ಸಣ್ಣದಿದೆಯೆಂದು ಅಂಥ ಕ್ರಮವನ್ನನುಸರಿಸಿದರೂ, ಮುಂದೆ ಬರುವ ಪುಸ್ತಕಗಳ ಸಂಖ್ಯೆಯನ್ನು ನಾವು ಗಮನಿಸದೇ ಹೋದರೆ, ಆ ತಾತ್ಕಾಲಿಕ ವ್ಯವಸ್ಥೆ ಮುಂದಕ್ಕೆ, ಹತ್ತು ವರ್ಷಗಳ ಮೇಲಾದರೂ ಕುಸಿದು ಬೀಳದೇ ಇರದು.

## ಓದುಗರು

ಜೀವಂತ ಪುಸ್ತಕಾಲಯದ ಓದುಗರ ಸಂಖ್ಯೆಯೂ ಬೆಳೆಯುತ್ತಲೇ ಇರುತ್ತದೆ; ಅವರಿಗಾಗಿ ಓದುಮನೆ ದೊಡ್ಡದಿರಬೇಕು. ಪುಸ್ತಕಗಳನ್ನು ಕೊಡ-ತಗೊಳ್ಳುವ 'ಕೌಂಟರಿ'ನ ಸುತ್ತ ಸಾಕಷ್ಟು ಜಾಗ ಬೇಕು. ಓದುಗರು ಹೆಚ್ಚಾದ ಹಾಗೆಲ್ಲ, ಯಾರು ಯಾವ ಪುಸ್ತಕ ಒಯ್ದರು, ಎಷ್ಟು ದಿನ ಸುಮ್ಮನೇ ಇಟ್ಟುಕೊಂಡಿದ್ದಾರೆ, ಇದೊಂದೂ ತಿಳಿಯುವುದಿಲ್ಲ. ಅದಕ್ಕಾಗಿ ರಜಿಸ್ಟರಿನಲ್ಲಿ ನಮೂದಿಸುವ ಪದ್ಧತಿ ಬಿಟ್ಟುಕೊಡಬೇಕೆಂದು ಹೇಳಿಯಾಗಿದೆ.

ಓದುಗರು ಹೆಚ್ಚಿದಂತೆ ಪುಸ್ತಕಾಲಯವನ್ನು ತೆರೆದಿರುವ ವೇಳೆಯನ್ನೂ ಹೆಚ್ಚಿಸಬೇಕಾಗುತ್ತದೆ. ಕೆಲವು ಸಲ ವರ್ಷದಲ್ಲಿ ಕೆಲವೊಂದು ಕಾಲ ಮಾತ್ರ ಓದುಗರ ಸಂಖ್ಯೆ ಬೆಳೆಯುವುದುಂಟು. ಆಗೆಲ್ಲ ಹೆಚ್ಚಿನ ಅನುಕೂಲತೆ ಅವರಿಗೆ ದೊರೆಯಬೇಕು. ಕೊನೆಯದಾಗಿ ಇದೊಂದು ಕುಂಟುಪಂಕ್ತಿ. ಓದುಗರ ಸಂಖ್ಯೆಯೊಟ್ಟಿಗೆ. ಪುಸ್ತಕಗಳ ಕಳವೂ ಹೆಚ್ಚಬಹುದು! ಅದಕ್ಕಾಗಿ ಒಂದೇ ನಿರ್ಗಮನ, ಒಂದೇ ಪ್ರವೇಶವಿರಬೇಕು.

## ಸಹಾಯಕ ವರ್ಗ

ಪುಸ್ತಕ, ಓದುಗರ ಬೆಳವಣಿಗೆಯ ಪ್ರಮಾಣದಲ್ಲೇ, ಗ್ರಂಥಾಲಯ ಕೆಲಸಗಾರರ ಸಂಖ್ಯೆ ಏರುವುದೆಂದೇನೂ ಇಲ್ಲವಾದರೂ ಪುಸ್ತಕಾಲಯ ಬೆಳೆದ ಹಾಗೆ ನಿತ್ಯಕ್ರಮದಲ್ಲಿ ಕೆಲಸದ ವಿತರಣೆಯ ವ್ಯವಸ್ಥೆ ಹದಗೆಡಬಾರದು. ಆ ಪ್ರಮಾಣದಲ್ಲಿ ನಿರ್ವಾಹಕರ ಸಂಖ್ಯೆ ಹೆಚ್ಚಿದರೆ, ಸಂದರ್ಭಸೇವೆ, ವೈಯಕ್ತಿಕ ನೆರವು ಸಾಧ್ಯವಾಗುವದಲ್ಲವೆ ? ಆದರೆ ಸುಮ್ಮನೆ ಹೊಸಬರನ್ನು ರಿಕ್ರೂಟ್ ಮಾಡುತ್ತ ಹೋಗುವುದರಲ್ಲಿ ಅರ್ಥವಿಲ್ಲ. ತಮ್ಮ ಕಾರ್ಯಭಾಗದ ನಿರ್ವಹಣೆಯಲ್ಲಿ ಶ್ರದ್ಧೆ ಹಾಗೂ ಬೇಸರವನ್ನರಿಯದ ಶ್ರಮವಿದ್ದರೆಯೇ ಪುಸ್ತಕಾಲಯ ಸೇವೆ ಪರಿಪೂರ್ಣವಾಗಬಲ್ಲದು.

ಪುಸ್ತಕಾಲಯ ಸಂಸ್ಥೆ ಪ್ರಗತಿಪರವಾಗುತ್ತಲಿದೆ ಎಂಬ ಮಾತಿನಲ್ಲಿ ಯಾರಿಗೂ ಸಂಶಯ ಬೇಡ. ಇಂದು ನಮ್ಮಲ್ಲಿ ಸರಕಾರ ಅದರ ಬೀಜಾರೋಪಣ ಮಾಡಿದೆ. ಇತರ ಸಾರ್ವಜನಿಕ ವ್ಯಕ್ತಿಗಳಿಂದ, ಸಂಸ್ಥೆಗಳಿಂದ ಅದಕ್ಕೆ ತಕ್ಕ ಹಾಗೆ ಓದುವವರೂ ಹೆಚ್ಚಿದ್ದಾರಾದ್ದರಿಂದ, ನಾವು ಬೇಡವೆಂದರೂ ಈ ಸಂಸ್ಥೆ ಬೆಳೆಯುವುದು ನಿಲ್ಲುವಂತಿಲ್ಲವಾಗಿದೆ !

# ೨. ಸಂಘಟನೆ



## ೧. ಕಟ್ಟಡ

ಪುಸ್ತಕಾಲಯಗಳಿಗೆಂದೇ ನಿರ್ಮಿತವಾದ ಕಟ್ಟಡ ಒಂದಾದರೂ ನಮ್ಮಲ್ಲಿದೆಯೋ ಎಂದು ಸಂಶಯ. ಸಾವಿರದ ಒಳಹೊರಗಿರುವ ಪುಸ್ತಕ ಸಂಗ್ರಹವನ್ನೊಳಗೊಳ್ಳುವ ನಾಲ್ಕು ಕಪಾಟುಗಳಿಗೆ ಹಾಗೂ ಒಂದಿಷ್ಟು ಕುರ್ಚಿ ಮೇಜುಗಳಿಗೆ ವಿಶಿಷ್ಟ ಕಟ್ಟಡ, ಅದರ ಯೋಜನೆ, ಅಂತರ್ವ್ಯವಸ್ಥೆ ಇವುಗಳ ಮಾತಿನ ಆವಶ್ಯಕತೆಯಾದರೂ ಏನು, ಎನ್ನಬೇಕೆ? ಆದರಿದು ಬಹಳ ದಿನ ನಡೆಯದು. ಪುಸ್ತಕಾಲಯ ಚಳುವಳಿ ನಿತ್ಯನಿತ್ಯವೂ ಬೆಳೆಯುತ್ತಿರುವಾಗ ಪುಸ್ತಕಾಲಯಕ್ಕಾಗಿಯೇ ನಿರ್ಮಿತವಾಗುವ ಕಟ್ಟಡದ ಯೋಜನೆಯ ವಿಚಾರ ತೀರ ಹತ್ತಿರದಲ್ಲಿ ಕಾಣಿಸುವಂತಾಗಿದೆ.

### ಸ್ಥಳ

ಸಾರ್ವಜನಿಕ ಪುಸ್ತಕಾಲಯವು ಒಂದು ಊರಲ್ಲಿ ಎಂಥಲ್ಲಿ ಇರಬೇಕು? ಮೊದಲ ಸೂತ್ರವನ್ನು ನೆನೆದಾಗ ಊರ ಮಧ್ಯದಲ್ಲಿ, ಸಾಧಾರಣತಃ ಎಲ್ಲರಿಗೂ ಬರುವುದಕ್ಕೆ ಸುಲಭಸಾಧ್ಯವಾಗಿರುವಂಥಲ್ಲಿರಬೇಕೆಂದು ನೋಡಿದ್ದೇವೆ. ಹಾಗೆಂದು ಪೇಟೆಯ ಮಧ್ಯದಲ್ಲಿ, ಸಂತೆಯಾಗುವ ಸ್ಥಳದಲ್ಲಿರಬೇಕೆ ? ಅಲ್ಲ. ಸುಲಭ ಸಾಧ್ಯದ ಜೊತೆಗೆ ಶಾಂತತೆಯೂ ಅತ್ಯವಶ್ಯ. ಇವೆರಡೂ ದೊರೆಯಬೇಕಾದರೆ, ಪುಸ್ತಕಾಲಯದ ಜಾಗ ವಿಶಾಲವಿದ್ದು ಮಧ್ಯದಲ್ಲಿ ಅಥವಾ ಬೀದಿಗಿಂತ ತುಸು ಅಂತರದಲ್ಲಿ ಕಟ್ಟಡವಿರಬೇಕು. ಉಳಿದ ಸುತ್ತಲಿನ ಬಯಲಿನಲ್ಲಿ ಸಣ್ಣ ತೋಟಗಾರಿಕೆ ತೊನೆದಾಡಿದರೆ ಒಳ್ಳೆಯದೇ. ಇದರಿಂದಾಗಿ ಸ್ವಚ್ಛ ಗಾಳಿ ಬೆಳಕುಗಳು ದೊರೆಯುವಂತಾಗುತ್ತದೆ. ಮತ್ತು ಬೆಂಕಿಯ ಅನಾಹುತದಿಂದಲೂ ಕಟ್ಟಡ ತುಸು ದೂರ ಉಳಿಯುವುದು ಸಾಧ್ಯವಾಗುತ್ತದೆಯಲ್ಲವೆ? ನಾಲ್ಕಾರು ಮಹತ್ವದ ಬೀದಿಗಳ ಮಧ್ಯವಲ್ಲಿದ್ದೂ, ಹೀಗೆ ಅಂತರದಲ್ಲಿರುವುದ

ರಿಂದ ಉಳಿದ ಬಯಲು ನೆಲದಲ್ಲಿ ಪ್ರಸಂಗ ಬಂದರೆ ಇನ್ನೊಂದು ಕಟ್ಟಡವನ್ನು ಏರಿಸಲಿಕ್ಕೂ ಅನುಕೂಲ. ಈ ದೃಷ್ಟಿಯಿಂದ ನಾವು ೫-೬ ವರ್ಷದ್ದಲ್ಲ, ಐವತ್ತು ವರ್ಷದ ಆಚೆಗೂ ಮುನ್ನೋಡಬೇಕಾಗುತ್ತದೆ.

## ಸ್ವರೂಪ

ನೋಡುವುದಕ್ಕೆ ಕಟ್ಟಡ ಹೇಗಿರಬೇಕು ? ಇಂಗ್ಲಂಡದಲ್ಲಿ ಎಂಥೆಂಥ ಪುಸ್ತಕಾಲಯುಗಳಿದ್ದರೂ, ಅವೆಲ್ಲ ಚರ್ಚಿನ ಹಾಗೆಯೋ, ಅರಮನೆಯ ಹಾಗೆಯೋ ಕಾಣುತ್ತವೆಯೆಂದು ಒಬ್ಬ ಭಂಡಾರಿಗರು ಟೀಕೆಯ ದನಿ ಎಳೆದುದುಂಟು ! ಏನಿದ್ದರೂ ಪುಸ್ತಕಾಲಯ ಪುಸ್ತಕಾಲಯುವ ಹಾಗೆ ಕಾಣಬೇಕು, ಎನ್ನುತ್ತಾರೆ ಅವರು. ಅಂಥ ಕಟ್ಟಡ ಹೀಗೆಯೇ ಇರುತ್ತದೆ ಎಂದು ಹೇಳುವುದು ಮಾತ್ರ ಕಠಿಣ. ನೋಡಿದಾಗ ಆ ಭಾವನೆ ಬರಬೇಕು. ಏನಿದ್ದರೂ ಇದರ ರಚನೆ ಸಾಮಾನ್ಯವಾದುದಾಗಿರುತ್ತದೆ. ಅಲ್ಲಿ ವಿಶೇಷ ಕಲಾಕುಸುರು, ದಟ್ಟನೆಯ ಬಣ್ಣ ಥಳಕುಗಳ ಅಗತ್ಯವಿಲ್ಲ ಎಂಬ ಭಾವನೆ ಈಚೆಗೆ ಬೆಳೆದು ಬಂದಿದೆ.

ಪುಸ್ತಕಾಲಯುವನ್ನು ಕಟ್ಟುವಾಗ ಅದರ ಒಳಸ್ವರೂಪವನ್ನು, ಎಂದರೆ ಒಳಕೋಣೆಗಳೆಷ್ಟು, ಅಟ್ಟಕ್ಕೆ ದಾರಿಯೆಲ್ಲಿ. ಎತ್ತರವೆಷ್ಟು, ಕಿಟಕಿಗಳ ಸ್ವರೂಪ ಮುಂತಾದ ಸಮಸ್ಯೆಗಳಿರುವ ಮೂಲಕ, ಭಂಡಾರಿಗನನ್ನು ಕೇಳದೆಯೇ ಮಾಡಕೂಡದೆಂದು ಹೇಳಲಾಗುತ್ತದೆ. ಏಕೆಂದರೆ ಪುಸ್ತಕಾಲಯುವು ಒಂದು ವಿಶಿಷ್ಟ ಕೆಲಸಕ್ಕಾಗಿ ಇರುವಂಥ ಸಂಸ್ಥೆ. ಒಂದು ಮನೆಯ ಬೇಕು, ಬೇಡಗಳು ಇಂಜಿನಿಯರನಿಗೆ ತಿಳಿದಾವು. ಪುಸ್ತಕಾಲಯುದ ವಿಶಿಷ್ಟ ಸ್ವರೂಪದ ಕಲ್ಪನೆ, ಹೇಳದೆಯೇ ಅವನಿಗೆ ಗೊತ್ತಾಗುವುದಿಲ್ಲ. ಆ ನಂತರದ ಬದಲಾವಣೆಗೆ ಕಷ್ಟಪಡುವದು ತಪ್ಪಬೇಕಿದ್ದರೆ ಇದು ಅಗತ್ಯವಾಗಿದೆ.

## ವಿಭಾಗಗಳು

ಒಂದು ಪುಸ್ತಕಾಲಯುದಲ್ಲಿ ಇರಬೇಕಾದ ವಿಭಾಗಗಳು ಎಷ್ಟೆಂದು ನೋಡುವ.

೧. ಪುಸ್ತಕ ಸಂಗ್ರಹದ ಕೋಣೆ ೨. ಓದಲು ಕೂಡ್ರುವ ಸ್ಥಳ. ೩. ಪತ್ರಿಕೆಗಳಿಗಾಗಿ ಜಾಗ. ೪. ಮಕ್ಕಳ ವಿಭಾಗ. ೫. ಒಂದು ಸಭಾ

ಭವನ. ೬. ಕಚೇರಿ-ಕಾರ್ಯನಿರ್ವಾಹಕರಿಗಾಗಿ. ೭. ಪುಸ್ತಕ ಕೊಡು-ತಗೊಳ್ಳುವ ಜಾಗ.

ಈ ಏಳರಲ್ಲಿ ಎಲ್ಲವೂ ಪ್ರತ್ಯೇಕವಾಗಿ ಇರಬೇಕಾದ ಆಗತ್ಯವಿಲ್ಲದಿದ್ದರೂ, ಒಂದು ಮಾದರಿಯ ಸಾರ್ವಜನಿಕ ಗ್ರಂಥಾಲಯದಲ್ಲಿ ಈ ಏಳು ವಿಭಾಗಗಳು ಎಲ್ಲೆಲ್ಲಿ ಇರಬೇಕು ಎಂಬುದನ್ನು ಹೀಗೆ ತೋರಿಸಬಹುದು:—




## ೨. ಅಂತರ್ವ್ಯವಸ್ಥೆ

ಗ್ರಂಥಾಲಯದ ಅಂತರ್ವ್ಯವಸ್ಥೆಯಲ್ಲಿ ಗಮನಿಸಬೇಕಾದ ಸೂತ್ರವೆಂದರೆ, ಹೆಚ್ಚು ಬಳಕೆಯಲ್ಲಿರುವ ವಿಭಾಗಗಳು ಓದುಗರಿಗೂ ಕಾರ್ಯನಿರ್ವಾಹಕರಿಗೂ ಹತ್ತಿರದಲ್ಲಿರಬೇಕೆಂಬುದು. ಅದರಿಂದ ದಟ್ಟಣೆ ಕಡಿಮೆಯಾಗುತ್ತದೆ. ಪರಿಣಾಮವೇನೆಂದರೆ, ಪುಸ್ತಕ ಕೊಡುವ ವಿಭಾಗವೂ, ಪತ್ರಿಕೆಗಳ

ಮತ್ತು ಪುಸ್ತಕಗಳ ಓದುಮನೆಯೂ ಮುಖ್ಯ ಬಾಗಿಲಿನ ಹತ್ತಿರವೇ ಇರಬೇಕೆಂದಾಯಿತು. ಮಕ್ಕಳ ವಿಭಾಗವೂ ಅಷ್ಟೇ. ಆದರೆ ಅವರಿಗೆ ಬರಹೋಗುವುದಕ್ಕೆ ಬಾಗಿಲು ಬೇರೆ ಇರಬೇಕು. ಇಲ್ಲವಾದರೆ ದೊಡ್ಡವರ ಜಾಗದಲ್ಲೆಲ್ಲ ಬಂದು, ಗಲಾಟೆಗೆ ಕಾರಣವಾಗುವುದು.

ಒಂದು ವೇಳೆ ಕಟ್ಟಡಕ್ಕೆ ಒಂದು ಅಟ್ಟ ಇದ್ದುದಾದರೆ, ಅಟ್ಟದ ಮೇಲೆ ಭಂಡಾರಿಗನ ಕಚೇರಿ, ತಾಂತ್ರಿಕ ವಿಭಾಗ, ಹೆಚ್ಚು ಬಳಕೆಯಿಲ್ಲದ ಪುಸ್ತಕದ ಕಪಾಟುಗಳು, ಸಂಶೋಧನ ವಿದ್ಯಾರ್ಥಿಗಳ ಅಭ್ಯಾಸ ಜಾಗ ಇಷ್ಟನ್ನು ಸ್ಥಳಾಂತರಿಸಬಹುದು.

ಪುಸ್ತಕಸಂಗ್ರಹವು ಮೊದಲೊಂದು ದೊಡ್ಡ ಕೋಣೆಯಲ್ಲಿದ್ದು, ಉಳಿದ ಕಡೆಗೂ ಅಲ್ಲಲ್ಲಿ ಕಪಾಟುಗಳನ್ನು ನಿಲ್ಲಿಸಬಹುದು. ಹೆಚ್ಚು ಬಳಕೆಯ ಪುಸ್ತಕಗಳ ಕಪಾಟುಗಳು ವಿತರಣಕಟ್ಟೆಯ ಹತ್ತಿರಕ್ಕೆ ಇದ್ದಷ್ಟು ಒಳ್ಳೆಯದು. ಈ ಕಪಾಟುಗಳನ್ನು ಗೋಡೆಗುಂಟ ಇಡುವುದು ಒಂದು ಕಡೆಗಾದರೆ, ಮುಖ್ಯ ಸಂಗ್ರಹ ಕೋಣೆಯಲ್ಲಿ ಪ್ರತಿ ಕಪಾಟಿಗೆ ಸ್ವಲ್ಪ ಸ್ವಲ್ಪ ಜಾಗ ಬಿಟ್ಟು ಸಾಲಾಗಿ ಇಡಬಹುದು. ಇನ್ನು ಕೆಲವೆಡೆ ಕಪಾಟುಗಳನ್ನು ವರ್ತುಲಾಕಾರವಾಗಿ ಇಡುವುದುಂಟು. ಪುಸ್ತಕಸಂಗ್ರಹ ಬೆಳೆದ ಹಾಗೆಲ್ಲ, ಅವುಗಳನ್ನಿಡುವುದು ಸಮಸ್ಯೆಯಾಗಿ ಪರಿಣಮಿಸುತ್ತದೆ. ಮತ್ತು ಆಗಾಗ ಬದಲಾವಣೆಯನ್ನು ಮಾಡಬೇಕಾಗಿಯೂ ಬರುತ್ತದೆ.

ಓದುಗರಿಗಾಗಿ ಜಾಗ ಗೊತ್ತುಮಾಡುವಲ್ಲಿಯೂ ತುಸು ದೂರದೃಷ್ಟಿ ಬೇಕು. ಈ ಓದುಗರಲ್ಲಿ ಮೂರು ಬಗೆ. ಆಳ ಹಾಗೂ ದೀರ್ಘ ಅಭ್ಯಾಸ ಮಾಡುವವರಿಗೆ ಶಾಂತವಾದ ಸ್ಥಳ ಬೇಕು. ಆದುದರಿಂದ ಅವರ ಜಾಗ ಅಟ್ಟದ ಮೇಲ್ಗಡೆ, ಇಲ್ಲವೆ ಓಡಾಟದ ಸ್ಥಳದಿಂದ ತುಸು ದೂರದಲ್ಲಿ ಇರಬೇಕು.

ವಿಶ್ವವಿದ್ಯಾಲಯ ಅಥವಾ ಕಾರ್ಪೊರೈಟ್ ಪುಸ್ತಕಾಲಯಗಳಲ್ಲಿ ಅಲ್ಲಿಯೇ ಓದಿಹೋಗುವ ನಿಯಮವಿರುತ್ತದಷ್ಟೆ. ಅವರಿಗಾಗಿ ವಿಶಾಲವಾದ ಸ್ಥಳ ಬೇಕು. ೫೦' × ೪೦' ಜಾಗ ಇರುವ ಒಂದು ಕೋಣೆಯಲ್ಲಿ ಸುಮಾರು ೧೩೦ ಓದುಗರಿಗಾಗಿ ವ್ಯವಸ್ಥೆಯಾಗುತ್ತದೆ. ಮುಕ್ತದ್ವಾರ ಪದ್ಧತಿ ಇದ್ದರೆ ಅಷ್ಟೇ ಜಾಗದಲ್ಲಿ ೧೨೦ ಜನ ಓದುಗರಿಗಾಗಿ ಮಾತ್ರ ಆಸನಗಳನ್ನು ಒದಗಿಸಬೇಕು.

ಪತ್ರಿಕೆಗಳನ್ನು ಓದಲು ಬರುವವರು ಪುರಸೆಯು ಬಗೆಯುವರು.
ಪುಸ್ತಕ ವಾಚಕರಿಗಿಂತ ಇವರು ಬೇಗ ಹೋಗುವವರಾದ್ದರಿಂದ ತುಲನಾತ್ಮಕ
ವಾಗಿ ಇವರ ದಟ್ಟಣೆ ಹೆಚ್ಚು. ಆ ಕಾರಣ ಜಾಗವನ್ನು ತುಸು ಹೆಚ್ಚೇ
ಬಿಡಬೇಕಾಗುತ್ತದೆ. ಅಲ್ಲದೆ ದಿನಪತ್ರಿಕೆಗಳಿಗಾಗಿ ಸ್ಟ್ಯಾಂಡುಗಳಿರುತ್ತವೆ.
ಅಲ್ಲಿ ನಿಂತು ಓದಲಿಕ್ಕೆಂದು ಬರುವವರಿಂದ, ಕುಳಿತು ಮಾಸಪತ್ರಿಕೆಗಳನ್ನು
ಓದುವವರ ವೈಗೆ ವೈ ತಾಗಿ ಹೋಗುವಂತೆ ದಾರಿ ಕಿರಿದಾಗಿರಕೂಡದಲ್ಲವೆ?
ಅಂತೂ ಆಸನಸಾಮಗ್ರಿಯು ಇಲ್ಲಿ ಹೆಚ್ಚು ಜಾಗವನ್ನಾಕ್ರಮಿಸುತ್ತದೆ.

ಮಕ್ಕಳ ವಿಭಾಗ ಮತ್ತು ಒಂದು ಸಭಾಭವನವಿರಬೇಕೆಂಬ ವಿಚಾ
ರವೂ ನಮ್ಮಲ್ಲಿ ಹೊಸತು. ಸಣ್ಣದಿದ್ದರೂ ಚಿಂತೆಯಿಲ್ಲ, ನಮ್ಮ ಸಾರ್ವ
ಜನಿಕ ಪುಸ್ತಕಾಲಯಗಳು ಮಕ್ಕಳ ವಿಭಾಗವನ್ನು ನಡೆಸಲೇಬೇಕೆಂದು
ನಮ್ಮ ಆಗ್ರಹದ ಸೂಚನೆಯಿದೆ. ಸಭಾಭವನವೂ ಹಾಗೆಯೇ ಅಗತ್ಯ.
ಸಭೆ ಇಲ್ಲದ ಉಳಿದ ವೇಳೆಯಲ್ಲಿ ಗ್ರಂಥಾಲಯ ಕಮಿಟಿಯ ಸಭೆಗಳೋ,
ಪುಸ್ತಕಾಲಯ ವರ್ಗಗಳೋ ನಡೆಯಬಹುದು. ಪ್ರತ್ಯೇಕವಾದ ಇಂಥ
ಕೋಣೆ ಸಾಧ್ಯವಿಲ್ಲದಿದ್ದರೆ, ಓದುಮನೆಗಳಲ್ಲೇ ಅದಕ್ಕೆ ಅನುಕೂಲ ಒದಗಿಸ
ಬಹುದು. ಆದರೆ ಸಭಾಜನರಿಗಾಗಿ ಕುರ್ಚಿ ಮೇಜುಗಳನ್ನು ತೆಗೆದು ಮತ್ತೆ
ಸರಿಯಾಗಿರಿಸುವ ಕೆಲಸ ವಿಶೇಷ ತೊಂದರೆಯದಾಗಿರಕೂಡದು.

ಕಟ್ಟಡದ ರಚನಾ ಸಾಧನಗಳ ಕುರಿತೂ ಒಂದೆರಡು ಮಾತು ಹೇಳ
ಬೇಕು. ಒಟ್ಟಿನ ಕಟ್ಟಡದಲ್ಲಿ ವಿಭಜನಾಭಾಗಗಳು ತೀರ ಕಡಿಮೆಯಾಗಿರ
ಬೇಕು. ಪುಸ್ತಕಾಲಯವು ನಿತ್ಯ ಬೆಳೆಯುವ ಸಂಸ್ಥೆಯಾದುದರಿಂದ ಇಂಥ
ವಿಭಜನಾ ಭಾಗಗಳು ಶೀಘ್ರದಲ್ಲೇ ವಿಶೇಷ ತೊಂದರೆಯಿಲ್ಲದೆ ಮಾರ್ಪಡಿ
ಸಲು ಸಾಧ್ಯವಾಗಿರುವಂಥವಾಗಿರಬೇಕಾಗುವುದು. ಅದರಲ್ಲೂ ಕಟ್ಟಿಗೆಗಿಂತ
ಗ್ಲೇಜುಕಾಜಿನ ಅಂತರ್ವಿಭಜನೆ ಹೆಚ್ಚು ಸೂಕ್ತ. ಅದರಿಂದ ಬೆಳಕು ಚೆನ್ನಾಗಿ
ತೂರಿ ಬರುತ್ತದೆ. ಇತ್ತ ಕಾರ್ಯನಿರ್ವಾಹಕರು ಕುಳಿತಲ್ಲಿಯೇ ಬರಹೋಗು
ವವರ ಸಹಜ ಪರಿಶೀಲನೆಯನ್ನೂ ಮಾಡಬಹುದು. ಕೊನೆಯದಾಗಿ, ಕಟ್ಟ
ಡದ ಒಳಭಾಗದ ಸಾಧನಗಳು ಅಗ್ನಿವಿರೋಧಿಗಳಾಗಿರಬೇಕು. ನೆಲಹಾಸು
ಗಳು ಧ್ವನಿವಿರೋಧಿ ಇರಬೇಕು. ಅದಕ್ಕಾಗಿ 'ಎಕ್ಸಾಲ್ವಿಂಕೋ' ಎಂಬ
ಚೌಕನ್ನ ನೆಲದ ಹೆಂಚುಗಳು ದೊರೆಯುತ್ತವೆ. ರಬ್ಬರಿನ ನೆಲಹಾಸು

ಸಹಿತ ಇವೆ. ಆದರೆ ಕೆಲದಿನದ ನಂತರ ಅವು ಹೊಲಸು ಕಾಣುತ್ತವೆ, ಮತ್ತು ಅವು ಸಾಕಷ್ಟು ತಾಳಿಕೆಯವಲ್ಲ.

## ಗಾಳಿ–ಬೆಳಕು

ಹತ್ತಾರು ಜನ ನಿತ್ಯವೂ ಬರಹೋಗುವ ಸ್ಥಳದಲ್ಲಿ ಸ್ವಚ್ಛವಾದ ಗಾಳಿ, ಬೆಳಕು ಅಗತ್ಯವಾಗಿ ಇರಬೇಕೆಂಬ ಮಾತನ್ನು ಹೆಚ್ಚು ಬಿಂಬಿಸಲಿಕ್ಕಿದೆಯೆ ? ಪರಿಶುದ್ಧವಾದ ಗಾಳಿ, ಬೆಳಕು ಇದ್ದರೆ ಮನಸ್ಸಿನ ನೈರ್ಮಲ್ಯ ಉಳಿಯುತ್ತದೆ. ಓದುವುದಕ್ಕೆ, ಕೆಲಸ ಮಾಡುವುದಕ್ಕೆ ಸಹಜ ಉತ್ಸಾಹ ಉಂಟಾಗುತ್ತದೆ.

ಸ್ವಚ್ಛನ್ನ ಗಾಳಿ, ಬೆಳಕುಗಳಿಗೆ ಕಿಟಕಿಗಳೇ ಮುಖ್ಯ ಸಾಧನವಷ್ಟೆ. ಕಿಟಕಿಯ ಬಾಗಿಲುಗಳನ್ನು ತೆರೆದಾಗ, ಮಧ್ಯಾಹ್ನ ಬೆಳಕಿಗಿಂತ ಬಿಸಿಲೇ ಒಳ ಬರುತ್ತದೆ! ಹೊರಗಿನ ಗಲಾಟೆಯಂತೂ ಸರಿಯೆ. ಮತ್ತು ಧೂಳಿಯ ಕಣ ಗಳಿಗೂ ಕೊರತೆಯಿಲ್ಲ. ಹೀಗಾಗಿ ಎಷ್ಟೋ ವೇಳೆ, ಕಿಟಕಿಗಳನ್ನು ಪೂರ್ತಿವೋ, ಅರ್ಧವೋ ಮುಚ್ಚಬೇಕಾದೀತು. ಆಗ ಫ್ಯಾನುಗಳನ್ನು ಉಪಯೋಗಿಸಿ ಸ್ವಚ್ಛ ಹವೆಯನ್ನು ಉಸಿರಾಡಿಸುವುದಕ್ಕೂ, ಇತರ ತಾಂತ್ರಿಕ ಸಾಧನಗಳಿಂದ ಅಶುದ್ಧ ಹವೆಯನ್ನು ಹೊರಗೆ ಹಾಕುವುದಕ್ಕೂ, ಕಟ್ಟಡ ಕಟ್ಟುವಾಗಿಯೇ ಯೋಜಿಸಿಕೊಳ್ಳಬೇಕಾಗುತ್ತದೆ.

ಪುಸ್ತಕಾಲಯದಲ್ಲಿ ನಡೆಯುವ ಮಹತ್ವದ ಕೆಲಸವೆಂದರೆ ಓದುವುದು! ಓದುವುದಕ್ಕೆ ಎಷ್ಟು ನೈಸರ್ಗಿಕವಾದ ಬೆಳಕು ಬರುವುದೋ ಅಷ್ಟು ಒಳ್ಳೆಯ ದಲ್ಲವೆ? ಅದಕ್ಕಾಗಿ ಪಾಶ್ಚಾತ್ಯ ದೇಶಗಳಲ್ಲಿ, ಕಟ್ಟಡ ನಿಲ್ಲಲು ಎಷ್ಟು ಬೇಕೋ ಅಷ್ಟೆ ಸಿಮೆಂಟು ಮತ್ತು ಇಟ್ಟಿಗೆಗಳನ್ನು ಉಪಯೋಗಿಸಿ, ಗೋಡೆಯೆಲ್ಲ ಕಾಜಿನದೇ ಮಾಡಿರುತ್ತಾರೆ. ಕೊನೆಯ ಪಕ್ಷ, ನೆಲದಿಂದ ನಾಲ್ಕು ಫೂಟಿನ ಮೇಲಿನ ಭಾಗವೆಲ್ಲ ಕಾಜಿನ ಕಿಟಕಿಯಿಂದ ತುಂಬಿಕೊಂಡಿರುತ್ತದೆ. ಹೀಗೆ ಸಹಜ ಬೆಳಕು ಬರುವುದರೊಟ್ಟಿಗೆ ಕೃತ್ರಿಮ ಬೆಳಕಿಗಾಗಿ ವಿದ್ಯುತ್ತಿನ ಖರ್ಚೂ ಕಡಿಮೆಯಾಗುವುದು.

ಕೆಲವು ಕಾಜಿನ ಹೆಂಚುಗಳನ್ನು ಹಾಕಿ ಮೇಲಿನಿಂದಲೇ ಸಹಜ ಬೆಳ ಕನ್ನು ಒದಗಿಸಿಕೊಳ್ಳುವ ಕ್ರಮವೂ ಒಂದಿದೆ. ಆದರೆ ಅವು ಅಷ್ಟು ಯೋಗ್ಯ ವಾದುವಲ್ಲ. ಮಳೆ ಹನಿಯಿಂದ ಅವುಗಳಿಗೆ ಕಲೆಯಾಗುತ್ತವೆ. ಇತ್ತ ಬಿಸಿಲು ದಿನಗಳಲ್ಲಿ ಸೂರ್ಯನ ಕಿರಣಗಳನ್ನು ಪ್ರಖರವಾಗಿ ಒಳಗೆ ಬಿಂಬಿಸುತ್ತವೆ;

ಮತ್ತು ಕಟ್ಟಡವನ್ನು ಮೇಲ್ಕೆ ಬೆಳೆಸುವ ಹೊತ್ತು ಬಂದರೆ ಸಾಧ್ಯವಾಗುವುದಿಲ್ಲ.

ನೈಸರ್ಗಿಕ ಬೆಳಕು ಇಷ್ಟವಾದುದಾದರೂ ಯಾವಾಗಲೂ ಇದು ಸಾಧ್ಯವಿಲ್ಲ ತಾನೆ. ಆಗೆಲ್ಲ ಕೃತ್ರಿಮ ಬೆಳಕಿಗೆ ನಾವು ಶರಣುಹೋಗದೆ ಗತಿಯಿಲ್ಲ. ಇಲ್ಲಿ ಕಷ್ಟವೇನೆಂದರೆ, ಒಂದು ವಿಭಾಗಕ್ಕೆ ಸೂಕ್ತವಾದ ಕೃತ್ರಿಮ ಬೆಳಕಿನ ವ್ಯವಸ್ಥೆ, ಇನ್ನೊಂದು ವಿಭಾಗಕ್ಕೆ ಸರಿ ಹೊಂದುವುದಿಲ್ಲ. ಅದಕ್ಕಾಗಿ ಕೃತ್ರಿಮ ಬೆಳಕಿನ ವ್ಯವಸ್ಥೆ ಮಾಡುವಲ್ಲಿ ಎರಡು ಪ್ರಕಾರವುಂಟು. ಒಂದು ಸಾಮಾನ್ಯ ವ್ಯವಸ್ಥೆ, ಇನ್ನೊಂದು ಸ್ಥಳಿಕವಾದುದು.

ಮನೆಮನೆಗಳಲ್ಲಿ ಕೋಣೆಗಳ ಮಧ್ಯೆ ಎತ್ತರವಾಗಿ ದೀಪಗಳನ್ನು ತೂರಿಬಿಡುವರಲ್ಲ, ಆ ಮಾದರಿಯ ಬೆಳಕಿಗೆ ಸಾಮಾನ್ಯ ವ್ಯವಸ್ಥೆ ಎನ್ನಬಹುದು. ಹಾಗೆ ಪುಸ್ತಕಾಲಯದಲ್ಲಿ ಸಾಗೀತೇ ? ಇಲ್ಲ. ಏಕೆಂದರೆ ಹಾಗೆ ಮೇಲಿನಿಂದ ವಿದ್ಯುದ್ದೀಪವು ಬೆಳಕನ್ನು ಕೊಡುತ್ತಿದ್ದರೆ, ಪುಸ್ತಕಗಳ ಕಪಾಟುಗಳ ಕೆಳಗಿನ ಖಾನೆಗೆ ಆ ಬೆಳಕು ಸಾಲುವುದಿಲ್ಲ. ತುಸು ದೂರದಲ್ಲಿ ಓದಲು ಕುಳಿತವರಿಗೆ ಬೆಳಕು ಕಡಿಮೆಯಾಗುತ್ತದೆ. ಆದ್ದರಿಂದ ಪ್ರತ್ಯೇಕವಾದ, ಅರ್ಥಾತ್ ಅಗತ್ಯವಿದ್ದಲ್ಲಿ ಸ್ಥಳಿಕವಾದ ವ್ಯವಸ್ಥೆಯನ್ನೂ ಮಾಡಿಕೊಳ್ಳಲೇಬೇಕಾಗುತ್ತದೆ.

ಈ ಸ್ಥಳಿಕ ವ್ಯವಸ್ಥೆ ಸಾಮಾನ್ಯವಾಗಿ, ಪುಸ್ತಕಗಳ ಕಪಾಟುಗಳಿದ್ದಲ್ಲಿ, ಓದಲು ಕೂಡ್ರುವ ಮೇಜುಗಳಿದ್ದಲ್ಲಿ, ಕೆಟಲಾಗುಗಳಿರುವಲ್ಲಿ ಅಗತ್ಯ ಬೀಳುತ್ತದೆ. ಅಂತೂ ಗ್ರಂಥಾಲಯದ ಒಂದು ವಿಭಾಗದಲ್ಲಿ, ಓಡಾಟಕ್ಕೆ ಸಾಮಾನ್ಯ ಬೆಳಕೊಂದಕ್ಕೆ ವ್ಯವಸ್ಥೆ ಮಾಡಿ, ಓದುವುದು, ಮತ್ತು ತುಸು ಹೆಚ್ಚು ಗಮನವಿಟ್ಟು ನೋಡಬೇಕಾದ ಸ್ಥಳಗಳಲ್ಲಿ ಸ್ಥಳಿಕ ದೀಪದ ವ್ಯವಸ್ಥೆಯಾಗಬೇಕೆನ್ನುವುದು ಒಟ್ಟಿನಲ್ಲಿ ಹೇಳಬೇಕಾದ ತಾತ್ಪರ್ಯ.

ಆದರೂ ಪತ್ರಿಕೆಗಳ ವಿಭಾಗ, ವಾಚನ ವಿಭಾಗಗಳಲ್ಲಿ ಇದು ತುಸು ಬದಲಾವಣೆಯನ್ನು ಅಪೇಕ್ಷಿಸುತ್ತದೆ. ಪತ್ರಿಕೆಗಳ ವಾಚನಾಲಯದಲ್ಲಿ ಓಡಾಟ ಹೆಚ್ಚು. ಅಲ್ಲಿ ಮೇಲುದೀಪ ದೊಡ್ಡದಾಗಿರಬೇಕಾಗುತ್ತದೆ. ಓಡಾಡುವವರ ನೆರಳು ಇತರರು ಓದುವುದಕ್ಕೆ ಅಡ್ಡಿ ಮಾಡದಂತಿರಬೇಕು. ಆ ಕಾರಣ ಸಾಮಾನ್ಯವಾಗಿ ತೂಗುಬಿಡುವಂತಹ ದೀಪದ ವ್ಯವಸ್ಥೆ ಇರದೆ, ಟ್ಯೂಬ್ ದೀಪ ಇಲ್ಲವೆ ಪ್ರತಿಬಿಂಬದ ಮುಖಾಂತರ ಬೆಳಕು ಬರುವ ಹಾಗೆ ವ್ಯವಸ್ಥೆ

ಇರಬೇಕು. ಎಂದರೆ ಅಲ್ಲಿ ಬಲ್ಬಿನಿಂದ ನೇರವಾಗಿ ಬೆಳಕು ಬರದೇ ಅದರ ಗಾಜಿನ ಹೊದಿಕೆಯಿಂದ ಬೆಳಕು ಚಿಮ್ಮುವುದು.

ಸ್ಥಳಿಕ ವ್ಯವಸ್ಥೆಯಲ್ಲಿ ಅಲ್ಲಲ್ಲಿಗೆ ದೀಪಗಳಿದ್ದು, ಕೆಲಸ ಮುಗಿದೊಡನೆ ಅಲ್ಲಿಯೇ ದೀಪವಾರಿಸುವ ಅನುಕೂಲತೆ ಇರುತ್ತದೆ. ಆದರೆ ಓದುಗರು ಹಾಗೆ ಆರಿಸಲು ಮರೆತರೆ? ಅದಕ್ಕಾಗಿ ಗೋಡೆಗೆ, ಸುಮಾರು ಎಂಟು ಫೂಟು ಎತ್ತರದ ಮೇಲೆ ದೀಪದ ವ್ಯವಸ್ಥೆ ಇರುವುದುಂಟು. ಇದರಿಂದ ಮೇಜುಗಳ ಸ್ಥಾನವನ್ನು ಆಗಾಗ ಬದಲಾಯಿಸಿದರೂ ಬಾಧಕವಿಲ್ಲ. ಈ ದಿಸೆಯಲ್ಲಿ ಇನ್ನೂ ಅನೇಕ ಸಾಧನೆಗಳನ್ನು ಕಂಡುಹಿಡಿದಿದ್ದಾರೆ. ಉದಾಹರಣೆಗೆ ಹೇಳುವುದಾದರೆ, ಕಪಾಟುಗಳ ಹತ್ತಿರ ದೀಪದ ವ್ಯವಸ್ಥೆ ಇರುವುದಲ್ಲ, ನಾವದನ್ನು ತುಸು ಎತ್ತಿ ಹಿಡಿದಾಗ ಮಾತ್ರ ದೀಪ ಹತ್ತುತ್ತದೆ. ಕೈಬಿಟ್ಟರೆಂದರೆ ತಂತಾನೆ ಆರಿಕೊಳ್ಳುತ್ತದೆ! ಪ್ರತಿ ಮೇಜಿಗೆ ಸಹಿತ ಎಂಥ ದೀಪವಿರಬೇಕೆಂಬುದರಲ್ಲಿಯೂ ನಾಗರಿಕ ಸಾಧನಗಳನ್ನು ಉಪಯೋಗಿಸಿಕೊಂಡದ್ದಾಗಿದೆ. 'ಲಂಡನ್ ಸ್ಕೂಲ್ ಆಫ್ ಎಕಾನಾಮಿಕ್ಸ' ಗ್ರಂಥಾಲಯದಲ್ಲಿ ಒಂದು ದೊಡ್ಡ ಮೇಜಿನ ನಡುವೆ ದೀಪವನ್ನು ನಿಲ್ಲಿಸಿ ಅದಕ್ಕೆ ಎರಡೂ ಬದಿಗೆ ಸಮನಾಗಿ, ಕಣ್ಣಿಗೆ ತ್ರಾಸವಾಗದಂತೆ ಗಾಜಿನ ಮರೆಮಾಡಿದ ದೀಪದ ವ್ಯವಸ್ಥೆ ಉಂಟು. ಇಷ್ಟೆಲ್ಲ ವಿವರದಲ್ಲಿ ಸಹಿತ ದೀಪಯೋಜನೆ ಮಾಡಿದಾಗಲೂ, ಒಟ್ಟಿನಲ್ಲಿ ಅತ್ಯಂತ ಸಮರ್ಪಕವಾದ ಒಂದು ಸರ್ವಮಾನ್ಯ ವ್ಯವಸ್ಥೆ ಸಾಧ್ಯವಿಲ್ಲವಲ್ಲ ಎಂಬ ಮಿಡುಕು ಭಂಡಾರಿಗರಿಗೆ ಇದೆ!

## ಆಸನ ಸಾಮಗ್ರಿ

ಪುಸ್ತಕಗಳನ್ನಿಡುವುದಕ್ಕೆ ಕಪಾಟುಗಳು, ಓದುವುದಕ್ಕೆ ಕುರ್ಚಿಮೇಜುಗಳಲ್ಲದೇ, ಇನ್ನೂ ಬಗೆಬಗೆಯ ಆಸನಸಾಮಗ್ರಿ ಪುಸ್ತಕಾಲಯದಲ್ಲಿ ಬೇಕಾಗುತ್ತದೆ. ಅವಾವುವೆಂಬುದನ್ನು ನೋಡುವ ಮುನ್ನ ಯಾವ ಬಗೆಯ ಆಸನ ಸಾಮಗ್ರಿ ಉಪಯೋಗಿಸಬೇಕು ಎಂದು ಕೇಳಬೇಕಾಗಿ ಬಂದಿದೆ: ಕಟ್ಟಿಗೆಯದೆ? ಕಬ್ಬಿಣದ್ದೆ?

ಕಟ್ಟಿಗೆಯ ಕಪಾಟುಗಳನ್ನೂ, ಇತರ ಸಾಧನಗಳನ್ನೂ ಉಪಯೋಗಿಸಿದಲ್ಲಿ ಪುಸ್ತಕಾಲಯಕ್ಕೆ ಒಂದು ಬಗೆಯ ಕಳೆ ಬರುತ್ತದೆ. ಕಣ್ಣಿಗೆ ಸಂತೋಷ ಕೊಡುತ್ತದೆ. ಅಲ್ಲದೆ ಪುಸ್ತಕಗಳ ಕಪ್ಪರುಗಳ ಮೂಲೆಗೆ ಕಬ್ಬಿಣ ಕಪಾಟು

ಇದ್ದರೆ ಬಾಧೆ ಹೆಚ್ಚು; ಇಲ್ಲಿ ಹಾಗಿಲ್ಲ. ಮತ್ತೆ, ಬೇಕೆಂದರೆ ಕಟ್ಟಿಗೆ ಸಾಮಗ್ರಿಗಳಲ್ಲಿ ಬದಲಾವಣೆ ಹೆಚ್ಚು ಸುಲಭ.

ಹೀಗಿದ್ದರೂ ಗ್ರಂಥಾಲಯಗಳಲ್ಲಿ ಕಬ್ಬಿಣದ ಕಪಾಟುಗಳನ್ನೇ ಉಪಯೋಗಿಸುವುದೊಳಿತು. ಏಕೆಂದರೆ ಇದರ ಬೆಲೆ ಕಡಿಮೆ. ಧೂಳನ್ನು ಕಟ್ಟಿಗೆಯದರಕ್ಕಿಂತ ಇಲ್ಲಿ ಸುಲಭದಲ್ಲಿ ಒರೆಸಿ ತೆಗೆಯಬಹುದು. ಎಲ್ಲಕ್ಕೂ ಹೆಚ್ಚು ಮಹತ್ವದ್ದೆಂದರೆ ಅಗ್ನಿರಾಕ್ಷಸನಿಂದ ಪುಸ್ತಕಗಳ ರಕ್ಷಣೆಯಾಗುತ್ತದೆ. ದೊಡ್ಡ ಗ್ರಂಥಾಲಯಗಳಲ್ಲಿ ಸ್ಥಳದ ಉಳಿತಾಯ ಸಮಸ್ಯೆಯಲ್ಲೂ ಇದು ಆಸರೆಯನ್ನು ಕೊಡುವಂತಹದು. ನಮ್ಮ ನಾಡಿನಂತಹ ಸಮಶೀತೋಷ್ಣ ಪ್ರದೇಶದಲ್ಲಿ ಗೆದ್ದಲು, ಇತರ ಹುಳಗಳಿಂದ ರಕ್ಷಿಸಲು ಕಬ್ಬಿಣದ ಪೆಟ್ಟಿಗೆಗಳೇ ಒಳ್ಳೆಯವೆನ್ನಬೇಕು. ಇನ್ನು ಕಬ್ಬಿಣ ಸಾಮಗ್ರಿ ಅಷ್ಟು ಚೆಂದಲ್ಲವೆಂದು ತೋರಿದರೆ, ಅವುಗಳಿಗೆ ಬಣ್ಣ ಹಚ್ಚಿಕೊಂಡು ಉಪಯೋಗಿಸುವ ಅನುಕೂಲ ಕಟ್ಟಿಗೆಗಿಂತ ಹೆಚ್ಚೇ ಉಂಟಲ್ಲವೆ.

ಈ ಕಪಾಟುಗಳ ಫಲಕಗಳು ಹೆಚ್ಚುಕಡಿಮೆ ಮಾಡಲು ಬರುವಂತಿರಬೇಕು. ಎಂದರೆ ದೊಡ್ಡ ಆಕಾರದ ಪುಸ್ತಕಗಳನ್ನು ಉಳಿದವುಗಳೊಟ್ಟಿಗೇ ಇಡಲು ಬರುವುದು; ಮತ್ತು ಇವಕ್ಕೆ ಬಾಗಿಲುಗಳೇನೂ ಇರದೆ, ಎರಡೂ ಮಗ್ಗುಲಿಗೆ ತೆರೆದುವಾಗಿರಬೇಕು. ಕಪಾಟುಗಳು ಸ್ಟೂಲು, ನಿಚ್ಚಣಿಕೆಯ ಸಹಾಯವಿಲ್ಲದೇನೇ ಓದುಗರಿಗೆ ನಿಲುಕುವಷ್ಟರಕ್ಕಿಂತ ಹೆಚ್ಚಿಗೆ ಎತ್ತರವಿರಕೂಡದು. ಕಪಾಟುಗಳನ್ನು ಇಡುವಾಗ ಮತ್ತು ಇಟ್ಟ ಮೇಲೆ ನೆಲಗಟ್ಟು ಕೆಡದಂತೆ ನೋಡಿಕೊಳ್ಳಬೇಕು. ಸಾಮಾನ್ಯವಾಗಿ ನೆಲದಿಂದ ೧೨ ಫೂಟು ಎತ್ತರವಿರಬೇಕೆಂದು ಹೇಳಬಹುದು. ಕಪಾಟುಗಳನ್ನು ಹೊಂದಿಸುವಲ್ಲಿ, ದಾರಿಗಾಗಿ ೩ ಫೂಟು ಜಾಗ ಬಿಡಬೇಕು. ಸ್ಥಳದ ಉಳಿತಾಯ ಸಮಸ್ಯೆ ಬಂದಾಗ, ಇದನ್ನು ೨॥ ಫೂಟಿಗೂ ಇಳಿಸಬೇಕಾಗಿ ಬರುವುದು.

ಈ ಉಳಿತಾಯ ಸಮಸ್ಯೆ ಪುಸ್ತಕ ಕಪಾಟುಗಳನ್ನಿಡುವ ವಿಧಾನದಲ್ಲಿ ವಿಶಿಷ್ಟವಾದ ಸುಧಾರಣೆಗಳನ್ನು ತರಲಿಕ್ಕೆ ಕಾರಣವಾಗಿದೆ. ಅವುಗಳಲ್ಲಿ ಈಚಿನದೆಂದರೆ, ಎಲ್ಲ ಕಪಾಟುಗಳನ್ನು ಗೋಡೆಗೆ ಹತ್ತಿ ಒಂದಕ್ಕೊಂದು ಹೊಂದಿಸಿಯೇ ಇಡುವುದು. ಬದಿಗೆ ಇರುವ ಸೂಚಿಕೆಯನ್ನು ನೋಡಿಕೊಂಡು ನಮಗೆ ಬೇಕಾದ ಕಪಾಟನ್ನು, ಅದಕ್ಕೆ ಸಣ್ಣ ಗಾಲಿಗಳಿರುವುದರಿಂದ, ಎಳೆದು

ಕೊಂಡು ಪುಸ್ತಕ ನೋಡಬಹುದು. ಗ್ಲಾಸ್‌ಗೋದ ಮಿಚೆಲ್ ಗ್ರಂಥ ಭಾಂಡಾರದಲ್ಲಿ ಇಂಥ ವ್ಯವಸ್ಥೆ ಇದೆ. ಆದರೆ ಮುಕ್ತದ್ವಾರ ಪದ್ಧತಿ ಇರುವ ಲೈಬ್ರರಿಗಳಲ್ಲಿ ಇದು ಅಷ್ಟು ಒಳ್ಳೆಯದಲ್ಲ.

ಇನ್ನೊಂದು ಮಹತ್ವದ ಉಪಸ್ಕಾರವೆಂದರೆ ಕಾರ್ಡಿನ ಸೂಚಿಯ ಪೆಟ್ಟಿಗೆಗಳು. ಅವುಗಳ ಪಾತ್ರಕಗಳನ್ನು ಬಿಗಿಯಾಗಿ ಕೂಡಿಸಿದ್ದಿರಬೇಕು. ಇಲ್ಲವಾದರೆ ಎಳೆದೊಡನೆ ಪೂರ್ಣ ಹೊರಬರುವಂತಾಗುತ್ತದೆ. ಇದನ್ನು ಉಪಯೋಗಿಸಲು ಹೆಚ್ಚು ಜನ ಬರುವುದರಿಂದ, ಒಬ್ಬರು ಒಂದು ಪಾತ್ರಕವನ್ನು ಎಳೆದಾಗ ಅದರ ಬುಡದೊಳಗಿನ ಅಥವಾ ಮೇಲಿನ ಪಾತ್ರಕಗಳನ್ನು ಇತರರು ನೋಡುವುದು ಸಾಧ್ಯವಾಗುವುದಿಲ್ಲ. ಆದಕಾರಣ ಜಾಗ ಹೆಚ್ಚು ಇದ್ದು, ಸಮಾನಾಂತರವಾಗಿಯೇ ಪಾತ್ರಕಗಳು ಹೆಚ್ಚು ಸಂಖ್ಯೆಯಲ್ಲಿದ್ದರೆ ಒಳ್ಳೆಯದು. ಮೇಲಿನಿಂದ ಬುಡಕ್ಕೆ ಪಾತ್ರಕಗಳು ಸಾಧ್ಯವಾದಷ್ಟು ಕಡಿಮೆಯಾಗಿರಬೇಕು.

ಇವೆರಡು ಮಹತ್ವದ ಸಾಮಗ್ರಿಗಳನ್ನು ಬಿಟ್ಟರೆ, ಇನ್ನು ಕೆಲ ಉಪಸ್ಕಾರಗಳ ಅಗತ್ಯವಿದೆ. ಅವುಗಳಲ್ಲಿ ಪತ್ರಿಕೆಗಳನ್ನು ಹಾಕಿ ಇಡುವ ಸ್ಟ್ಯಾಂಡಿನ ಮಾದರಿಯ ಒಂದು ಶೆಲ್ಫು ಇದೆ. ಇದರಲ್ಲಿ ನಾಲ್ಕಾರು ವಿವಿಧ ಆಕಾರದ ಖಾನೆಗಳು ಇರುತ್ತವೆ. ಮತ್ತೆ, ಪುಸ್ತಕಗಳನ್ನು ಅಲ್ಲಲ್ಲಿ ಪ್ರದರ್ಶಿಸಲು ಕೆಲವು ಶೆಲ್ಫುಗಳು ಬೇಕಾಗುತ್ತವೆ. ಪುಸ್ತಕಗಳನ್ನುಳಿದು, ಪುಸ್ತಿಕೆ, ಚಿತ್ರಗಳು, ನಕ್ಷೆಗಳು ಮುಂತಾದವುಗಳನ್ನು ಹಾಕಿಡಲು ಅನುಕೂಲವಿರುವ ಪೆಟ್ಟಿಗೆಗಳು ಬೇಕಾಗುತ್ತವೆ.

## ೩. ಆರ್ಥಿಕ ಹಿನ್ನೆಲೆ.

ಗ್ರಂಥಾಲಯಗಳ ಸರಿಯಾದ ಬೆಳವಣಿಗೆಗೆ ದುಡ್ಡಿನ ಬೆನ್ನೆಲುಬು ಗಟ್ಟಿಯಾಗಿರಬೇಕು. ದುಡ್ಡು ಸಾಕಷ್ಟು ಇಲ್ಲದೆಯೇ, ಬರಿಗೈಯಿಂದ ಇಂದು ಮೊಳ ಹಾಕುತ್ತಿದ್ದೇವೆಂದೇ ನಮ್ಮ ಗ್ರಂಥಾಲಯಗಳ ಸೇವೆ ಸ್ಥಗಿತಗೊಂಡಿದೆ.

ಹಾಗಾದರೆ ಈ ದುಡ್ಡನ್ನು ದೊರಕಿಸುವ ಬಗೆ ಹೇಗೆ? ನಮಗೆ ತಿಳಿದ ಹಾಗೆ ಇಂದು ವಂತಿಗೆ ಮತ್ತು ದಾನಗಳಿಂದ ಮಾತ್ರ ಹಣ ಒದಗಿ ಬಂದು, ಪುಸ್ತಕಾಲಯವು ಒಂದು ಧರ್ಮಾರ್ಥ ಕೆಲಸವೆನ್ನುವ ಸ್ಥಿತಿಗೆ ಇಳಿದಿದೆ. ವಂತಿಗೆ ಮತ್ತು ದಾನಗಳೇ ಇರಲಿ; ಎಲ್ಲರಿಗೂ ಪುಸ್ತಕಾಲಯ ಸೇವೆ ಸಲ್ಲ

ಬೇಕೆಂದಾಗ ವಂತಿಕೆ ಕೊಟ್ಟವರಿಗಷ್ಟೇ ಓದಿನ ಅಧಿಕಾರ ಎನ್ನುವುದು ಇನ್ನೂ ಎಷ್ಟು ದಿನ ಉಳಿಯಬೇಕು ? ಸ್ಥಿತಿವಂತರ ಕೊಡುಗೆಗಾದರೂ ಸ್ಥಿರ ವ್ಯವಸ್ಥೆ ಇದೆಯೆ ? ಬಂದರೆ ಬರುತ್ತದೆ ಇಲ್ಲವಾದರಿಲ್ಲ. ಇನ್ನು ಸರಕಾರದ ಕಾಣಿಕೆ ಗಳಿಂದ ಪುಸ್ತಕಾಲಯಗಳು ಚೆನ್ನಾಗಿ ನಡೆಯಬಹುದು. ಆದರದು ಎಷ್ಟರ ಮಟ್ಟಿಗೆ ? ಬರಿ ಸರಕಾರವೊಂದೇ ಹಣವನ್ನು ಹಾಕುವುದಾದರೆ ಜನತೆಯ ಆಸ್ಥೆ ಮತ್ತು ಹಕ್ಕು ಆಮೂಲಾಗ್ರವಾಗಿ ಉಳಿದಾವೆಯೆ ?

ಯಾವುದೇ ಪಶ್ಚಿಮ ದಿಕ್ಕಿನ ಪರನಾಡನ್ನು ತೆಗೆದುಕೊಳ್ಳಲಿ, ಅಲ್ಲಿ ಜನತೆಯ ಮೇಲೆ 'ಪುಸ್ತಕಾಲಯ ಕರ'ವೆಂಬುದು ಬಹು ಕಡೆಗೆ ಇದ್ದೇ ಇದೆ. ಮಾರಾಟದ ಕರ, ಉತ್ಪನ್ನ ಕರ, ಅಬಕಾರಿ ತೆರಿಗೆ ಇದ್ದ ಹಾಗೆ ಇದೂ ಒಂದು ಕರವನ್ನು ಜನತೆಯ ಮೇಲೆ ಹಾಕುವುದಾದರೆ ನಮ್ಮಲ್ಲೇಳಬಹುದಾದ ಹಾಹಾ ಕಾರ ಅಷ್ಟಿಷ್ಟಲ್ಲ ಎನ್ನುವಿರ ? ಯಾವ ದೇಶದಲ್ಲಿ ಹಾಗೆ ಮೊದಲಿಗೆ ವಿರೋಧ ಏಳಲಿಲ್ಲ ? ಇಷ್ಟೇ, ಓದು ಬಾರದ ಅಸಂಖ್ಯರು ಪ್ರಚಂಡ ಬಹುಮತದಿಂದ ನಮ್ಮಲ್ಲಿರುವಾಗ ಸದ್ಯದ ಮಟ್ಟಿಗೆ ಮಾತ್ರ ಈ ಪುಸ್ತಕಾಲಯ ಕರ ವ್ಯವ ಹಾರ್‍ಯವಾಗಲಿಕ್ಕಿಲ್ಲವೆನ್ನೋಣ. ಆದರೂ ಆ ಕಾಲದಿಂದಲೇ ನಮ್ಮ ಪುಸ್ತಕಾ ಲಯಗಳ ನಿಜವಾದ ಬೆಳವಣಿಗೆಯಾಗುತ್ತದೆಂದು ಹೇಳಬಹುದು.

ಈ ಪುಸ್ತಕಾಲಯ ಕರದ ಅವಸ್ಥೆ ಏನೆಂದು ಸ್ವಲ್ಪ ನೋಡುವ. ೧೯೧೯ ರಲ್ಲಿ ಆಚರಣೆಗೆ ಬಂದ ಇಂಗ್ಲಂಡಿನ ಒಂದು ಕಾನೂನಿನ ಪ್ರಕಾರ, ಸಾಮಾನ್ಯ ತೆರಿಗೆಯನ್ನು ಕೊಡುವವರೆಲ್ಲರಿಂದ, ಒಂದು ಪೌಂಡಿನಲ್ಲಿ ಒಂದು ಪೆನ್ಸ ಅಥವಾ ಅದಕ್ಕಿಂತ ಹೆಚ್ಚು ಹಣವನ್ನು ಪುಸ್ತಕಾಲಯ ಕರವೆಂದು ವಸೂಲು ಮಾಡ ಲಾಗುತ್ತದೆ. ಅಮೇರಿಕೆಯಲ್ಲಿ ಈ ವಸೂಲಿಯ ಕ್ರಮ ತುಸು ಬೇರೆ. ಅಲ್ಲಿ ಒಬ್ಬ ವ್ಯಕ್ತಿಯ ಒಟ್ಟು ಆಸ್ತಿ ಮತ್ತು ಗಳಿಕೆಯನ್ನು ಲೆಕ್ಕಕ್ಕೆ ತೆಗೆದುಕೊಂಡು, ಅದರ ಮೇರೆಗೆ ಒಂದು ಡಾಲರಿನಲ್ಲಿ ಇಂತಿಷ್ಟು ಮಿಲ್ಲುಗಳೆಂಬ ಪ್ರಮಾಣದಲ್ಲಿ ಪುಸ್ತಕಾಲಯ ಕರವನ್ನು ತೆಗೆದುಕೊಳ್ಳುತ್ತಾರೆ.

ಪುಸ್ತಕಾಲಯದ ಆದಾಯದಲ್ಲಿ ಇದು ಮುಖ್ಯ ಮೊತ್ತವಾದರೂ ನಮ್ಮಲ್ಲಿ ಸದ್ಯಕ್ಕೆ ಸರಕಾರದ ಅಥವಾ ಸ್ಥಾನಿಕ ಸಂಸ್ಥೆಯ ಕಾಣಿಕೆಯೇ ಮುಖ್ಯವಾದ ಆದಾಯವೆಂದು ಇಟ್ಟುಕೊಳ್ಳಬಹುದು. ಆನಂತರ ವಂತಿಕೆ

ಬರುವುದು. ಇತರ ಖಾಸಗೀ ವ್ಯಕ್ತಿಗಳ ದಾನಗಳಂತೂ ಸರಿಯೇ. ಹಳೆಯ ವೃತ್ತಪತ್ರಿಕೆಗಳ ಮಾರಾಟ, ದಂಡ ವಸೂಲಿ ಇವೆಲ್ಲ ತೀರ ಅಲ್ಪ ಆದಾಯಗಳು.

ಬಂದಷ್ಟು ಹಣವನ್ನು ಯಾವ ಯಾವ ಪ್ರಮಾಣದಲ್ಲಿ ಉಪಯೋಗಿಸಬೇಕು ಎಂಬುದನ್ನು ಈಗ ನೋಡುವ. ಒಂದು ಸಾವಿರ ರೂಪಾಯಿ ಉತ್ಪನ್ನವಿರುವ ಪುಸ್ತಕಾಲಯದ ವೆಚ್ಚವನ್ನು ಹೀಗೆ ವಿಭಾಗಿಸಬಹುದು :—

| | | | |
|---|---|---|---|
| ಪುಸ್ತಕಗಳು | ರೂ. | ೩೦೦-೦-೦ | (೩೦ %) |
| ಪತ್ರಿಕೆಗಳು | ರೂ. | ೮೦-೦-೦ | (೮ %) |
| ಸಂಬಳ | ರೂ. | ೩೦೦-೦-೦ | (೩೦ %) |
| ಬೈಂಡಿಂಗ್ | ರೂ. | ೨೦-೦-೦ | (೨ %) |
| ಬಾಡಿಗೆ ಮತ್ತಿತರ ಖರ್ಚು | ರೂ. | ೩೫೦-೦-೦ | (೩೫ %) |

ಸಾಮಾನ್ಯವಾಗಿ ಒಟ್ಟು ಆದಾಯದ ಮೂರರಲ್ಲೊಂದು ಪಾಲು ಪುಸ್ತಕಗಳಿಗೆ ವೆಚ್ಚವಾಗಲೇಬೇಕು. ಅದರಲ್ಲಿ ಅರ್ಧ ಹಣ ಕತೆ ಕಾದಂಬರಿಗಳಿಗೂ ಇನ್ನರ್ಧ ಇತರ ಪುಸ್ತಕಗಳಿಗೂ ವಿನಿಯೋಗವಾಗಬೇಕೆಂದು ಸ್ಥೂಲದಲ್ಲಿ ಹೇಳಬಹುದು. ಪತ್ರಿಕೆಗಳಿಗೆ ನೂರಕ್ಕೆ ೫ರಷ್ಟು ಎಂದು ಎಣಿಸಬೇಕಾದರೂ, ಪತ್ರಿಕೆಗಳಿಂದ ಓದುವ ವೃತ್ತಿ ನಮ್ಮಲ್ಲಿ ಬೆಳೆಯಲಿರುವುದರಿಂದ ಆ ಮಟ್ಟಿಗೆ ತುಸು ಹೆಚ್ಚು ಹಣ ವೆಚ್ಚಮಾಡುವುದಗತ್ಯ. ಸಂಬಳವನ್ನು ಕೊಡುವುದು ದೊಡ್ಡ ಗ್ರಂಥಾಲಯಗಳಲ್ಲಿ ನೂರಕ್ಕೆ ೪೫ರಷ್ಟು ಇದೆ. ನಮ್ಮಲ್ಲಿ ಮೂವತ್ತರ ಪ್ರಮಾಣ ಸದ್ಯ ಸಾಕಾದೀತು. ಇದು ಅಲ್ಲದೆ, ಆದಾಯ ಹೆಚ್ಚಿದ ಹಾಗೆ ಸಂಬಳ ಅದೇ ಪ್ರಮಾಣದಲ್ಲೇನು ಏರುವುದಿಲ್ಲ. ಬೈಂಡಿಂಗಿನ ಮೋಜು ಏನೆಂದರೆ, ಸದ್ಯ ನಮ್ಮಲ್ಲಿ ಪ್ರಕಟವಾಗುವ ಪುಸ್ತಕಗಳ ಕಟ್ಟು, ಕಾಗದ ನೋಡಿದರೆ, ಪುಸ್ತಕವಷ್ಟೇ ಹಣ ಬೈಂಡಿಂಗಿಗೂ ಖರ್ಚುಮಾಡಬೇಕಾಗುತ್ತದೆ! ಅಂತೆಯೇ ಲೈಬ್ರರಿ ಆವೃತ್ತಿಗಳನ್ನು ಕೊಂಡುಕೊಳ್ಳಬೇಕು. ಬಾಡಿಗೆ, ಇತರ ವೆಚ್ಚ ಎಂದಿತಲ್ಲ, ಅದರಲ್ಲಿ ದೀಪದ ವೆಚ್ಚ, ಮುದ್ರಣ, ಸಾರ್ವಜನಿಕ ಉತ್ಸವ ಇವೆಲ್ಲ ಸಮಾವೇಶವಾಗುತ್ತವೆ.

——

# ೩. ಆಡಳಿತ



ಇದು ವರೆಗೆ ಪುಸ್ತಕಾಲಯವು ಒಂದು ಸಂಸ್ಥೆ ಎಂಬ ಮಾತನ್ನು ಕಣ್ಣೆದುರಿಟ್ಟುಕೊಂಡು, ಅದರ ಬಾಹ್ಯಸ್ವರೂಪ ಹಾಗೂ ವ್ಯವಸ್ಥೆಯನ್ನು ಕುರಿತು ನೋಡಿಯಾಗಿದೆ. ಈಗ ಅದರ ಅಂತರಾಡಳಿತೆಯನ್ನು ಕುರಿತು ಯೋಚಿಸುವ. ಹಾಗೆ ನೋಡಿದರೆ, ಒಂದು ಗ್ರಂಥಾಲಯವು ವ್ಯವಸ್ಥಿತ ಹಾಗೂ ಪರಿಪೂರ್ಣ ಸೇವೆಯನ್ನು ನೀಡುವ ಹೊಣೆಯಲ್ಲಿ ಏನೆಲ್ಲ ಕೈಂಕರ್ಯವಾಗ ಬೇಕೋ ಅದೆಲ್ಲವನ್ನೂ ಇದರಲ್ಲಿ ಹೇಳಬೇಕಾದೀತು. ಆದರೆ ಇಲ್ಲಿ ನಾವು ಅದರ ದೈನಂದಿನ ಕೆಲಸ, ಇಡಬೇಕಾದ ದಾಖಲೆಗಳು ಹಾಗೂ ವಾರ್ಷಿಕ ಕಾರ್ಯ ಇವುಗಳ ಕುರಿತು ಮಾತ್ರ ಈಗ ವಿವೇಚಿಸಬಹುದು.

ಗ್ರಂಥಾಲಯದ ಆಡಳಿತೆಯು ಬಗೆಗೆ, ಹೀಗೇ ಅದು ಇರಬೇಕೆಂದು ನಿರ್ದಿಷ್ಟಪಡಿಸುವುದು ಸಾಧ್ಯವೂ ಅಲ್ಲ, ಸಮ್ಮತವೂ ಅಲ್ಲ. ಪ್ರತಿ ಪುಸ್ತಕಾಲಯದ ಸ್ವರೂಪ, ಅದರ ವಿಶಿಷ್ಟ ಉದ್ದೇಶ, ಬರುವ ಜನ ಇವುಗಳ ಮೇಲೆ ಅವಲಂಬಿಸಿ ಆಡಳಿತದ ಚಕ್ರವು ತಿರುಗುತ್ತದೆ. ಆಡಳಿತದ ರೂಪರೇಷೆಗಳನ್ನು ಮಾತ್ರ ಇಲ್ಲಿ ಕೊಡಬಯಸಿದೆ. ಇಷ್ಟೇ, ಒಂದು ಕ್ರಮವನ್ನು ಅನುಸರಿಸುವ ಮುಂಚೆ ಅದರ ಸಮಂಜಸತೆಯನ್ನು ಚೆನ್ನಾಗಿ ಪರಿಶೀಲಿಸಿಯೆ ಅದನ್ನು ಸ್ವೀಕರಿಸಬೇಕು. ಒಮ್ಮೆ ಸ್ವೀಕರಿಸಿಯಾದ ನಂತರ, ಮೇಲಿಂದ ಮೇಲೆ ಬದಲು ಮಾಡುವ ಗೋಜಿಗೆ ಹೋಗುವುದು ಸರಿಯಾಗಲಿಕ್ಕಿಲ್ಲ. ಈಗ, ಕಪಾಟುಗಳಲ್ಲಿ ಪುಸ್ತಕಗಳಿಟ್ಟ ಒಂದು ಕ್ರಮ; ನಾವದನ್ನು ಮೇಲಿಂದ ಮೇಲೆ ಬದಲಿಸುತ್ತಿದ್ದರೆ ಬಂದ ಓದುಗ ತಬ್ಬಿಬ್ಬಾಗುವನು. ಅದರಂತೆಯೇ ಪುಸ್ತಕಗಳ ವರ್ಗೀಕರಣ ಪದ್ಧತಿ ಹಾಗೂ ಸೂಚಿಯ ವಿಷಯವೂ ಇದೆ.

## ೧. ನಿತ್ಯಕ್ರಮ

ಪುಸ್ತಕಾಲಯದಲ್ಲಿ ನಿತ್ಯ ಕೆಲಸಗಳೆಲ್ಲ ಒಂದು ಸೂತ್ರದ ಅನುಸಾರ ರೂಪುಗೊಂಡಿವೆಯೆನ್ನಬೇಕು. ಅದೆಂದರೆ ಪುಸ್ತಕವೊಂದು ಗ್ರಂಥಾಲಯಕ್ಕೆ

ಬಂದು, ಅದು ಓದುಗರ ಕೈಸೇರುವಂತಾಗುವುದು. ಪುಸ್ತಕವನ್ನು ಆರಿಸು ವುದರಿಂದ ಹಿಡಿದು, ಅದು ಓದುಗನೊಬ್ಬನಿಗೆ ಕೊಡಲ್ಪಟ್ಟು ಅವನಿಂದ ಮರಳಿ ಬರುವವರೆಗೂ ಒಂದೊಂದು ಹಂತವಿದೆ. ಮೊದಲಿಗೆ ಪುಸ್ತಕವನ್ನು ಆರಿಸಬೇಕು. ಅದನ್ನು ಕೊಂಡು ತರಿಸಿಕೊಳ್ಳಬೇಕು. ಗ್ರಂಥಾಲಯಕ್ಕೆ ಪ್ರತಿ ಬಂತೆಂದೊಡನೆ, ಅದು ಸರಿ ಉಂಟೆ ಎಂದು ಪರಿಶೀಲಿಸಿ, ಮುದ್ರೆಯನ್ನು ಹೊಡೆದು ಆರೋಹಣ ದಾಖಲೆಯಲ್ಲಿ ನೋಂದಿಸಬೇಕು. ಆ ಮೇಲೆ ಅದರ ವರ್ಗೀಕರಣ ಮತ್ತು ಸೂಚಿಯ ಸಿದ್ಧತೆ; ಆನಂತರ ಓದುಗನಿಗೆ ಅದನ್ನು ಕೊಡುವ ಕ್ರಮ; ಅದು ಮರಳಿ ಬರುವಲ್ಲಿ ತಡವಾದರೆ ಕೈಕೊಳ್ಳಬೇಕಾದ ಕ್ರಮ—ಇಂತಿದು ಈ ನಿತ್ಯ ಕೆಲಸದ ಒಂದು ರೂಪರೇಷೆ.

## ಗ್ರಂಥಸಂಗ್ರಹ

ಯಾವ ಪುಸ್ತಕಗಳನ್ನು ಗ್ರಂಥಾಲಯಕ್ಕೆ ತರಿಸಬೇಕೆಂಬ ಪ್ರಶ್ನೆ ಯಿಂದ ದೈನಂದಿನ ಕೆಲಸ ಆರಂಭವಾಗುತ್ತದೆ. ಈ ಬಗ್ಗೆ ಮೆಲ್‌ವಿಲ್ ಡ್ಯೂಯಿ ಒಂದು ಮಹತ್ವದ ಮಾತನ್ನು ಹೇಳಿದ್ದಾನೆ: ಒಂದು ಪುಸ್ತಕಾ ಲಯದ ಗ್ರಂಥಸಂಗ್ರಹವು ತೀರ ಕಡಿಮೆಯ ಬೆಲೆಯದಿರಬೇಕು, ಅತಿ ಹೆಚ್ಚು ಜನ ಓದುಗರಿಗಾಗಿರಬೇಕು, ಮತ್ತು ಅತ್ಯುತ್ತಮ ವಾಚನವೆನ್ನಿಸಿಕೊಳ್ಳ ಬೇಕಂತೆ! ಈ ಮೂರನ್ನೂ ಸಾಧ್ಯವಾದಷ್ಟು ಸಾಧಿಸಿಕೊಂಡ ಗ್ರಂಥಸಂಗ್ರಹ ನಮ್ಮೆದುರು ಮಾದರಿಯದಾಗಿರಬೇಕು.

ಪುಸ್ತಕಾಲಯವು ಬೆಳೆಯುತ್ತಿರುವ ಸಂಸ್ಥೆಯಿದ್ದಂತೆಯೆ ಅದು ಜೀವಂತ ಸಂಸ್ಥೆಯಾಗಿರುತ್ತದೆ. ಆ ಕಾರಣ ಅನಗತ್ಯವಾದುದನ್ನೂ, ಕೊಳೆ ಕಸವೆಲ್ಲವನ್ನೂ ತುಂಬಕೂಡದು. ಜ್ಞಾನ ಹಾಗೂ ಮನರಂಜನೆ ಇವೆರಡೂ ಒದಗುವಂತೆ ನಮ್ಮ ಸಂಗ್ರಹವು ಪ್ರಮಾಣಬದ್ಧವಾಗಿರಬೇಕು. ಮೇಲೆ ಅತ್ಯುತ್ತಮ ಪುಸ್ತಕಗಳೆಂದೇನೊ ಹೇಳಿದೆಯಷ್ಟೆ. ಇವೇ ಅತ್ಯುತ್ತಮವೆಂದು ಹೇಳುವುದು ಕಷ್ಟಕರವಾಗುತ್ತದೆ. ಆದರೂ ವಿಷಯದ ಸತ್ಯಾಂಶ, ವಿವರಣೆ ಯಲ್ಲಿಯ ಸ್ಪಷ್ಟತೆ, ಬರೆವಣಿಗೆಯ ರುಚಿಶುದ್ಧಿ ಮತ್ತು ಸಾಹಿತ್ಯಿಕ ಗುಣ ಇವುಗಳು ನಮಗೆ, ಒಂದು ಪುಸ್ತಕದ ಯೋಗ್ಯತಾ ನಿರ್ಣಯದ ಸಾಮಾನ್ಯ ಅಳತೆಗೋಲಾಗಿರಲಿ.

ಪ್ರಮಾಣಬದ್ಧ ಸಂಗ್ರಹ ಎಂದಿತಷ್ಟೆ, ಅದನ್ನು ಬಹುಮಟ್ಟಿಗೆ ನಿರ್ದೇಶಿಸುವ ಹೊಣೆ ಜನತೆಯದಾಗಿರುತ್ತದೆ. ಪುಸ್ತಕಾಲಯಕ್ಕೆ ಎಂಥ ಜನರು ಬರುತ್ತಾರೆ? ಅವರ ಅಭಿರುಚಿಯೇನು, ಬೇಕು ಬೇಡಗಳೇನು, ವ್ಯವಸಾಯ ಯಾವ ಯಾವ ಬಗೆಯದು, ಇದನ್ನೆಲ್ಲ ತುಸು ಗಮನಿಸಬೇಕು. ಅಂತೂ ಓದುಗರ ಬೇಡಿಕೆಯ ಬೆಲೆ, ಪ್ರಮಾಣ ಹಾಗೂ ವೈವಿಧ್ಯ ಇವುಗಳನ್ನು ಗಮನಿಸಿ ಪುಸ್ತಕಗಳನ್ನು ತರಿಸಬೇಕು.

ಈ ಕೆಲಸವನ್ನು ಮಾಡುವ ಭಂಡಾರಿಗನು ಸಾಹಿತ್ಯ ಹಾಗೂ ಶಾಸ್ತ್ರಗಳಲ್ಲಿ ಈಜಿದವನಾಗಿರಬೇಕು. ಅವನಿಗೆ ಜನತೆಯ ಸಂಪರ್ಕವಿರಬೇಕು. ಮತ್ತು ತಾತ್ಕಾಲಿಕ ಅಗತ್ಯವೆಂದಾಗಿ ಪುಸ್ತಕಸಂಗ್ರಹದ ಮಾಹಿತಿ ಎಲ್ಲಿ ಮತ್ತು ಹೇಗೆ ದೊರೆಯುವುದೆಂಬುದನ್ನೂ ಅರಿತವನಾಗಿರಬೇಕು.

## ಗ್ರಂಥಸಂಗ್ರಹದ ಪ್ರಮಾಣ

ಹಾಗಿದ್ದರೆ ಪುಸ್ತಕಭಂಡಾರವೊಂದರ ಗ್ರಂಥಸಂಗ್ರಹದಲ್ಲಿ, ಯಾವ ಪ್ರಮಾಣದಲ್ಲಿ ವಿವಿಧ ವಿಷಯದ ಪುಸ್ತಕಗಳಿರಬೇಕು ಎಂಬುದು ಒಂದು ಪ್ರಶ್ನೆ. ಇದು, ನಮ್ಮಲ್ಲಿ ಪ್ರಕಟವಾಗುತ್ತಿರುವ ಪುಸ್ತಕಗಳ ಸ್ವರೂಪವನ್ನು ಅವಲಂಬಿಸಿದೆ. ಸಾಹಿತ್ಯಿಕ ಪುಸ್ತಕಗಳೇ ನಮ್ಮಲ್ಲಿ ಹೆಚ್ಚಿರುವುದರಿಂದ, ಇತರ ಯಾವುದೇ ವಿಷಯದ ಮೇಲೆ ಪುಸ್ತಕ ಪ್ರಕಟವಾದೊಡನೆ ಅದನ್ನು ನಾವು ಕೊಳ್ಳಲೇಬೇಕಾಗಿರುವ ಸ್ಥಿತಿ ಇದೆ. ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು ಗ್ರಂಥ ಸಂಗ್ರಹದ ಪ್ರಮಾಣವನ್ನು ಸ್ಥೂಲವಾಗಿ ಈ ರೀತಿ ಹೇಳಬಹುದು.

| ವಿಷಯ | ಕನ್ನಡ % | ಇಂಗ್ಲೀಷ % |
|---|---|---|
| ಸಾಮಾನ್ಯ ಪುಸ್ತಕಗಳು | ೩ | ೩ |
| ವೇದಾಂತ, ಧರ್ಮ | ೧೦ | ೯ |
| ಸಮಾಜಶಾಸ್ತ್ರ | ೮ | ೭ |
| ಭಾಷಾಶಾಸ್ತ್ರ | ೧ | ೪ |
| ವಿಜ್ಞಾನ | ೫ | ೯ |
| ಉಪಯುಕ್ತ ಕಲೆಗಳು | ೧ | ೬ |
| ಲಲಿತಕಲೆಗಳು | ೨ | ೭ |

| | | |
|---|---|---|
| ಸಾಹಿತ್ಯ | ೬೦ | ೨೮ |
| ಇತಿಹಾಸ, ಚರಿತ್ರೆ | ೧೦ | ೨೪ |

ಕನ್ನಡದಲ್ಲಿ ಧಾರ್ಮಿಕ ಪುಸ್ತಕಗಳು, ಚರಿತ್ರೆಗಳು ತಕ್ಕಮಟ್ಟಿಗೆ ಇವೆಯಾದ್ದರಿಂದ ಅವಕ್ಕೆ ಸಾಕಷ್ಟು ಇಂಬುಗೊಡಲಾಗಿದೆ. ಆದರೆ ಭಾಷಾ ಶಾಸ್ತ್ರ, ಉಪಯುಕ್ತ ಕಲೆಗಳು ಎಂದು ಹೇಳಿದ ವಿಭಾಗಗಳಲ್ಲಿ ಬೆರಳಿನ ಮೇಲೆಣಿಸುವಷ್ಟು ಮಾತ್ರ ನಮ್ಮಲ್ಲಿ ಗ್ರಂಥಗಳಿರುವಾಗ ಅವುಗಳಿಗೆ ಹಾಕಿರುವ ಅಲ್ಪಪ್ರಮಾಣ ಅನಿವಾರ್ಯವೆನ್ನೋಣವೆ?

## ೨. ಗ್ರಂಥಸಂಗ್ರಹದ ಆಕರಗಳು

ಹೊಸದಾಗಿ ಪ್ರಕಟವಾದ ಪುಸ್ತಕಗಳ ಬಗ್ಗೆ ಮಾಹಿತಿ ದೊರೆಯುವುದು ಅಗತ್ಯವಷ್ಟೆ. ಈ ಮಾಹಿತಿಯನ್ನು ಒದಗಿಸುವ ಆಕರಗಳ ವಿಚಾರವಾಗಿ ಇಂಗ್ಲಿಷಿನಲ್ಲಿದ್ದಷ್ಟು ನಮ್ಮಲ್ಲಿ ಆ ತೊಡಕಿಲ್ಲ. ಎಂದರೆ ಇಂಗ್ಲಿಷಿನಲ್ಲಿ ಅವು ಹೇರಳವಾಗಿದ್ದು ಅವುಗಳಲ್ಲಿ ಯಾವುದು ಗ್ರಾಹ್ಯವೆಂದು ತಿಳಿಯುವುದು ಕಷ್ಟ. ನಮ್ಮಲ್ಲಿ ಈ ಆಕರಗಳೆಂಬುದೇ ಇಲ್ಲ, ಇನ್ನು ತೊಡಕಿನ ಮಾತು ದೂರವೇ ಉಳಿಯಿತು! ಅದನ್ನುಳಿದು, ಪುಸ್ತಕಗಳ ಬಗ್ಗೆ ವಿವರಗಳನ್ನು ಒದಗಿಸುವ ಮುಖ್ಯ ಸಾಧನಗಳು ಯಾವುವೆಂದರೆ:—

೧. ಪತ್ರಿಕೆಗಳಲ್ಲಿ ಬರುವ ಸಾದರ ಸ್ವೀಕಾರ ಹಾಗೂ ಪುಸ್ತಕ ಪರಿಚಯಗಳು. ಇವುಗಳಿಂದ ಹೊಸ ಪುಸ್ತಕಗಳ ಹೆಸರು, ಲೇಖಕರು, ಹೀಗೆ ಬಾಹ್ಯಪರಿಚಯವನ್ನು ಮಾತ್ರ ಮಾಡಿಕೊಂಡಿರಬೇಕಲ್ಲದೆ, ಅವರು ಕೊಡುವ ಅಭಿಪ್ರಾಯವನ್ನು ಸಂಪೂರ್ಣ ಗಮನಿಸಬೇಕಿಲ್ಲ. ಏಕೆಂದರೆ ಶುದ್ಧ ಸಾಹಿತ್ಯಿಕ ಮಾನದಂಡದಿಂದ, ನಿಷ್ಪಕ್ಷಪಾತವಾಗಿ ಎಷ್ಟು ಮಾಸಪತ್ರಿಕೆಗಳು ಪುಸ್ತಕ ಪರಿಚಯ ಮಾಡಿಕೊಡುತ್ತವೆ? ಹೊಸ ಪುಸ್ತಕವೊಂದು ಪ್ರಕಟವಾಯಿತೆಂದೊಡನೆ, ಅದೂ ಒಂದು ಸುದ್ದಿ ಎನ್ನುವ ಹಾಗೆ ಎಷ್ಟು ಸಾಪ್ತಾಹಿಕಗಳು ಗಣಿಸುತ್ತವೆ? ಇತ್ತ ಮಾಡಿರುವ ವಿಮರ್ಶೆ ಆಳವಾದುದಾಗಿದ್ದರೂ, ಪುಸ್ತಕ ಸಂಗ್ರಹದ ನಮ್ಮ ಕೆಲಸಕ್ಕೆ ಅದರ ಅಗತ್ಯವಾದರೂ ಏನು?

೨. ಕಾಲಕಾಲಕ್ಕೆ ಪ್ರಕಾಶಕರು ತಮ್ಮ ಪುಸ್ತಕಗಳು ಹೊರ ಬಂದೊಡನೆ ಅದರ ಬಗ್ಗೆ ಪ್ರಕಟನೆ ಕೊಡುವುದುಂಟು; ಬೆಲೆಪಟ್ಟಿಗಳನ್ನು ಹೊರಡಿಸುವುದುಂಟು. ಇವುಗಳಿಂದಲೂ ನಮಗೆ ಹೊಸ ಸಾರಸ್ವತದ ಪರಿಚಯವಾಗುತ್ತದೆ. ವಿದೇಶಗಳಲ್ಲಿ ಇಂಥ ಪ್ರಕಟನೆಗಳಿಗಾಗಿಯೇ ಹೊರಟ ಪತ್ರಿಕೆಗಳಿವೆ. ಅಲ್ಲದೆ 'ತಿಂಗಳ ಪುಸ್ತಕಗಳು' 'ಬರಲಿರುವ ಪುಸ್ತಕಗಳು', 'ಚಳಿಗಾಲ ಪುಸ್ತಕಗಳು'—ಎಂದೆಲ್ಲ ಈ ಪ್ರಕಟನೆಗಳು ಬರುವುದುಂಟು.

೩. ಕೆಲ್ಲವು ಸಲ ಓದುಗರೇ ತಮಗಿಂಥ ಪುಸ್ತಕ ಬೇಕು ಎಂದು ಭಂಡಾರಿಗನಿಗೆ ತಿಳಿಸುತ್ತಾರೆ. ಆಗ ಆ ಪುಸ್ತಕ ನಮ್ಮಲ್ಲಿಲ್ಲದಿದ್ದರೆ, ಅದರ ಆಗತ್ಯ ಎನಿಸಿದರೆ ತರಿಸಬೇಕು; ಮತ್ತು ಅದರ ಪ್ರಥಮ ಉಪಯೋಗದ ಹಕ್ಕನ್ನು ಸಾಮಾನ್ಯವಾಗಿ ಆ ಓದುಗನಿಗೆ ಕೊಡಬೇಕು. ಇದಕ್ಕಾಗಿ 'ಓದುಗರ ಸೂಚನಾ ಪುಸ್ತಕ'ವನ್ನು ಮಾಡಿರಬೇಕಾಗುತ್ತದೆ.

ಇದು ಹೊಸ ಪುಸ್ತಕಗಳ ವಿಚಾರವಾಯಿತು. ಹೊಸತಾಗಿಯೆ ಒಂದು ಪುಸ್ತಕಭಂಡಾರವನ್ನು ಸ್ಥಾಪಿಸುವುದಾದರೆ, ಯಾವ ಪುಸ್ತಕಗಳು ಬೇಕಾದಾವೆಂಬ ವಿವರ ದೊರಕಿಸುವುದೆಂತು? ಮತ್ತೆ ಪಶ್ಚಿಮದ ಕಡೆ ತಿರುಗಿದರೆ ಇದಕ್ಕಾಗಿ ಹೇರಳವಾಗಿ ಆಕರಗಳು ದೊರೆಯುತ್ತವೆ. ಅಮೇರಿಕೆಯಲ್ಲಿ, 'ಕ್ಯುಮುಲೇಟಿವ್ ಬುಕ್ ಇಂಡೆಕ್ಸ್' ಎಂಬ ಸಾವಿರಗಟ್ಟಲೆ ಪುಟಗಳುಳ್ಳ ಒಂದು ಗ್ರಂಥವಿದೆ. ಮತ್ತಲ್ಲದೆ ವಿಶಿಷ್ಟ ವಿಷಯ ಅಥವಾ ಶಾಸ್ತ್ರವೊಂದರ ಮೇಲೆಯೇ ಪುಸ್ತಕಗಳನ್ನೆಲ್ಲ ಸರಿಯಾಗಿ ವರ್ಗೀಕರಿಸಿರುವ ಗ್ರಂಥಸೂಚಿಗಳೂ ವೆಗ್ಗಳವಾಗಿ ಸಿಕ್ಕುತ್ತವೆ. ಇದಲ್ಲದೇ ದೊಡ್ಡ ಗ್ರಂಥಾಲಯಗಳ ಸೂಚಿಗಳೂ ಹೆಚ್ಚು ಉಪಯೋಗ ಕೊಡುತ್ತವೆ.

## ಸಂಗ್ರಹ ಕಾರ್ಯ

ಅಂತೂ ಇಂಥ ಸಾಧನಗಳಿಂದ ಪುಸ್ತಕಗಳ ಬಗ್ಗೆ ವಿವರಗಳನ್ನು ಕಲೆಹಾಕಿ ಅವುಗಳನ್ನು ವ್ಯವಸ್ಥಿತವಾಗಿ ಇಟ್ಟುಕೊಳ್ಳಬೇಕಾಗುವುದು. ಎಂದರೆ ಇಂಥ ಪುಸ್ತಕಗಳ ಒಂದು ಪಟ್ಟಿಯನ್ನು ಸಿದ್ಧಗೊಳಿಸಬೇಕು. ದೊಡ್ಡ ಪುಸ್ತಕಾಲಯಗಳಲ್ಲಿ ಇವಕ್ಕಾಗಿ ಕಾರ್ಡುಗಳನ್ನೇ ಉಪಯೋಗಿಸುತ್ತಾರೆ. ಮತ್ತು ಪುಸ್ತಕ ಪರಿಚಯದ ಮೂಲ ಮಾಹಿತಿಯನ್ನು ಕೆಲ ಸಲ ಆ ಕಾರ್ಡಿನ ಹಿಂದೆ ಅಂಟಿಸುವುದೂ ಉಂಟು.

ಈ ಪಟ್ಟಿ ಸಿದ್ಧವಾಯಿತೆಂದರೆ, ಅದರ 'ಚೆಕಿಂಗ್' ಆಗಬೇಕು. ಆ ಪುಸ್ತಕ ಈಗಾಗಲೇ ನಮ್ಮಲ್ಲಿದ್ದರೆ? ಅಥವಾ ಬೇರೊಂದು ಸಂಸ್ಕರಣ ವಿದ್ದಿರಲೂಬಹುದು? ಮತ್ತೆ ಪುಸ್ತಕ ಅಷ್ಟು ಪ್ರಯೋಜಕವಲ್ಲವೆಂದೂ ಕಂಡುಬರಬಹುದು. ಹೀಗೆ ತುಸು ಸೋಸಿದ ಮೇಲೆ, ಇನ್ನೊಂದು ಪಟ್ಟಿಯನ್ನು ಸಿದ್ಧಗೊಳಿಸಿ, ಪುಸ್ತಕಸಂಗ್ರಹ ಕಮಿಟಿಯೆದುರು ಇಡಬೇಕು. ಕಮಿಟಿ ಇಲ್ಲದಿದ್ದರೆ ಕೊನೆಯ ನಿರ್ಣಯ ಕೈಕೊಳ್ಳುವವನು ಭಂಡಾರಿಗನೇ ತಾನೆ!

ಜೊತೆಗೆ ದುಡ್ಡನ್ನೊಂದು ನೋಡಿಕೊಳ್ಳಬೇಕು. ಅದಕ್ಕಾಗಿ ಖರ್ಚು ಮಾಡಲು ಉಂಟೇ, ಅಥವಾ ಇದ್ದರೆ ಅದಕ್ಕಿಂತ ಬೇರೆಯ ಪುಸ್ತಕಕ್ಕೆ ಹಣ ವಿನಿಯೋಗಿಸುವುದು ಹೆಚ್ಚು ಆಗತ್ಯವಾದೀತೇ ಎಂಬುದಾಗಿಯೂ ನೋಡಬೇಕು.

## ಪೂರೈಕೆಗಾರ

ಅಂತೂ ಒಮ್ಮೆ ಆರಿಸುವಿಕೆಯು ಮುಗಿದು ಪುಸ್ತಕ ತರಿಸುವುದೆಂದು ಗೊತ್ತಾದ ಮೇಲೆ ಯೋಗ್ಯ ಪುಸ್ತಕ ಪೂರೈಕೆಗಾರನನ್ನು ಹಿಡಿಯಬೇಕು. ಒಬ್ಬನೇ ಮಾರಾಟಗಾರನನ್ನು ಯಾವಾಗಲೂ ಅವಲಂಬಿಸಬೇಕಾಗಿಲ್ಲ. ಕೆಲ ಸಲ ಬಹಳ ಅಗತ್ಯವಾಗಿ ಪುಸ್ತಕವೊಂದು ಬೇಕಾಗುತ್ತದೆ. ಅಥವಾ ನೇರವಾಗಿ ಬೇರೊಂದೆಡೆಯಿಂದ ತುಸು ಹಣವೂ ಉಳಿಯುವಂತಿದ್ದರೆ ಅಲ್ಲಿಂದ ಪಡೆಯಬಹುದು. ಅಂತೂ ಪುಸ್ತಕ ಪೂರೈಕೆಗಾರನನ್ನು ಗೊತ್ತುಮಾಡುವಾಗ ಎರಡು ಮಾತುಗಳನ್ನು ಲಕ್ಷ್ಯದಲ್ಲಿಡಬೇಕು. ಒಂದು, ಅವನ ವ್ಯವಹಾರ ಸರಳತೆ, ಎರಡನೆಯದು ಅವನು ಕೊಡುವ ಕಮಿಶನ್. ಪ್ರಸಂಗ ಬಂದರೆ, ಎರಡನೆಯದಕ್ಕಿಂತ ವ್ಯವಹಾರದ ಚೊಕ್ಕಟತನಕ್ಕೆಯೇ ಹೆಚ್ಚು ಮಹತ್ವ ಕೊಡಬೇಕಾಗಿ ಬರುವುದು.

ವಿದೇಶದಿಂದ ಪುಸ್ತಕಗಳನ್ನು ತರಿಸುವ ಪ್ರಸಂಗ ಬಂದಲ್ಲಿ ಕನ್ನಡ ಪುಸ್ತಕಗಳ ಸ್ಥಳೀಯ ಪೂರೈಕೆಗಾರನು ಎಷ್ಟರಮಟ್ಟಿಗೆ ಪ್ರಯೋಜನಕಾರಿಯಾಗಾನೆಂಬುದು ಸ್ಪಷ್ಟವೇ ಇದೆ. ನೇರವಾಗಿ ನಾವು ತರಿಸುವುದೆಂದಾದರೆ ಪತ್ರವ್ಯವಹಾರದಲ್ಲಿಯೇ ವೇಳೆ ಹೋದೀತು. ಆ ಕಾರಣ ಬೇರೊಂದು ದೊಡ್ಡ ಮಾರಾಟದ ಸಂಸ್ಥೆಯ ಮುಖಾಂತರ ತರಿಸಬೇಕಾಗುತ್ತದೆ. ಇಂಥ ಎಜೆನ್ಸಿಯ

ಕೆಲಸವೆನ್ನು ಯುನೆಸ್ಕೋದವರೂ ತಮ್ಮ ಕೂಪನ್ನಿನ ಪದ್ಧತಿಯಿಂದ ಮಾಡು ವುದುಂಟು.

## ಆರ್ಡರಿನ ನಮೂನೆ

ಇದೀಗ ಪುಸ್ತಕಗಳಿಗಾಗಿ ನಿಜವಾದ ಆರ್ಡರೊಂದನ್ನು ಕೊಡುವ ಸ್ಥಿತಿಗೆ ಬಂದೆವೆನ್ನಬೇಕು. ಈ ಆರ್ಡರಿನ ನಮೂನೆಯೊಂದನ್ನು ಕೆಳಗೆ ಕೊಡಲಾಗಿದೆ:—

| |
|---|
| ಈ ಆರ್ಡರಿನ ನಂ. ಮತ್ತು ತಾ/ನ್ನು ಉತ್ತರದಲ್ಲಿ ನಮೂದಿಸಿರಿ. |

——ಗ್ರಂಥಾಲಯ,——

ನಂ............... ತಾ...............

ವ್ಯವಸ್ಥಾಪಕರು,

—ಅವರಿಗೆ

ಮಾನ್ಯರೇ,

ದಯವಿಟ್ಟು ಈ ಕೆಳಗಿನ ಪುಸ್ತಕಗಳನ್ನು ಕೂಡಲೇ ನಮಗೆ ಕಳಿಸಿ ಕೊಡಬೇಕೆಂದು ಬಿನ್ನಹ. ಪ್ರತಿಯೊಂದು ಪುಸ್ತಕದ ಬೆಲೆಯನ್ನೂ, ಒಟ್ಟಿನ ರಿಯಾಯ್ತಿಯನ್ನೂ ನಮೂದಿಸುವುದು. ನಿಮ್ಮಲ್ಲಿರದ ಪುಸ್ತಕಗಳನ್ನು ನಮಗಾಗಿ ತರಿಸಿಕೊಂಡು ಕಳಿಸಬೇಕು. ಎರಡು ವಾರದೊಳಗಾಗಿ ಪುಸ್ತಕಗಳನ್ನು ಕಳಿಸಲಾಗದಿದ್ದರೆ ಇದು ರದ್ದಾಗಿದೆಯೆಂದು ತಿಳಿಯುವುದು.

ಇತಿ, ವಂದನೆಗಳೊಡನೆ,

ಭಂಡಾರಿಗ

### ಪುಸ್ತಕಗಳ ವಿವರ

| ನಂ | ಲೇಖಕ | ಪುಸ್ತಕ | ಪ್ರಕಾಶಕ | ವರ್ಷ | ಬೆಲೆ | ಪ್ರತಿಗಳು | ಶರಾ |
|---|---|---|---|---|---|---|---|
| ೧ | | | | | | | |
| ೨ | | | | | | | |

ಯಾವಾಗಲೂ ಈ ಆರ್ಡರಿನ ಎರಡು ಪ್ರತಿಗಳನ್ನು ಮಾಡಬೇಕು. ಒಂದು ಪ್ರತಿ ಪೂರೈಕೆಗಾರನಿಗೆ ಹೋಗುವುದಷ್ಟೆ. ಪುಸ್ತಕಗಳು ಬಂದ ಮೇಲೆ ಕಳಿಸಿದ ಪುಸ್ತಕಗಳು ಸರಿಯಾಗಿವೆಯೇ, ಎಲ್ಲ ಪುಸ್ತಕಗಳು ಬಂದಿವೆಯೇ ಎಂದು ನೋಡಿಕೊಳ್ಳುವುದಕ್ಕಾಗಿ ಆ ಇನ್ನೊಂದು ಪ್ರತಿಯನ್ನು ಫಾಯಿಲಿನಲ್ಲಿ ಇರಿಸಬೇಕಾಗುತ್ತದೆ.

ಆದರೆ ಇದರ ಜೊತೆಗೆ ಈ ಚೆಕಿಂಗಿಗಾಗಿಯೂ, ಇತರ ಕೆಲಸಕ್ಕಾಗಿಯೂ ಪ್ರತಿಪುಸ್ತಕಕ್ಕೆ ಒಂದೊಂದು ಪತ್ರಕವನ್ನೇ ಮಾಡಿದರೆ ತುಂಬ ಅನುಕೂಲವಾಗುವುದು. ಏಕೆಂದರೆ ಈ ಆರ್ಡರ ಕಾರ್ಡಿನ ಮೇಲೆಯೇ ಮುಂದಿನ ಎಲ್ಲ ಕೆಲಸಗಳು ವ್ಯವಸ್ಥಿತವಾಗಿ ನೆರವೇರಬಹುದು. ಮೊದಲ ಪಟ್ಟಿಗೆ ಆ ಪುಸ್ತಕದ ಲೇಖಕ, ಪ್ರಕಾಶಕ, ಬೆಲೆ, ಪುಟಸಂಖ್ಯೆ ಇವು ಗಳಲ್ಲದೆ ಈ ಮಾಹಿತಿ ದೊರೆತುದೆಲ್ಲಿಂದ ಎಂಬೆಲ್ಲ ವಿವರಗಳು ಅದರಲ್ಲಿರುತ್ತವೆ ಯಲ್ಲದೆ, ಸೂಚಿಗೆ ಆ ಪುಸ್ತಕ ಹೋಗುವವರೆಗೂ ಇರುವ ಹಂತಗಳೆಲ್ಲ ಕ್ರಮ ವಾಗಿ ಅನುಸರಿಸಲ್ಪಟ್ಟವೆ ಎಂದೂ ಖಚಿತಮಾಡಿಕೊಳ್ಳಲಿಕ್ಕಾಗುತ್ತದೆ.

## ಆರ್ಡರಿನ ತಡಿಕೆ

ಈ ಎಲ್ಲ ಪತ್ರಗಳನ್ನು ಒಂದು ಕಟ್ಟಿಗೆಯ ಚೌಕನ್ನ ತಡಿಕೆಯಲ್ಲಿ ಹಾಕಿಡ ಬೇಕು. ಅವುಗಳಲ್ಲಿ ಕೆಲವಕ್ಕೆ ನಾವು ಆರ್ಡರನ್ನು ಕೊಡುವುದಿಲ್ಲವಷ್ಟೆ. ಅಂಥವು ಗಳನ್ನು ಹಿಂಬದಿಗೆ ತೆಗೆದಿಡಬೇಕು. ಹೀಗೆ ಆರ್ಡರು ಕೊಡುವ ಕೆಲಸ ಮುಂದು ವರಿದ ಹಾಗೆಲ್ಲ ಈ ಪತ್ರಗಳನ್ನೂ 'ಸರಿಗೊಳಿಸಿಡಬೇಕಾಗುತ್ತದೆ. ಆರ್ಡರು ಕೊಟ್ಟ ಪುಸ್ತಕಗಳು ಬಂದಮೇಲೆ, ಕೊಟ್ಟ ಆರ್ಡರಿನ ಪ್ರಕಾರ ಯಾವವು ಬಂದಿಲ್ಲವಾಗಿ ಮತ್ತೆ ಬೇರೆ ತೆಗೆಯಬೇಕು. ಇತ್ತ ಬಂದ ಪುಸ್ತಕದ ಕಾರ್ಡು ಆ ಹೊಸ ಪುಸ್ತಕವು ವರ್ಗೀಕರಣ ನಂಬರನ್ನು ಪಡೆದು ಕಪಾಟನ್ನು ಸೇರುವ ವರೆಗೆ ಪುಸ್ತಕದ ಜೊತೆಗೇ ಉಳಿಯುತ್ತದೆ ಹೀಗೆ ಪುಸ್ತಕವನ್ನು ಓದುಗ ರಿಗೆ ಸಿದ್ಧಗೊಳಿಸುವಾಗ ಈ ಪತ್ರಕದ ಅಗತ್ಯ ಅಷ್ಟಿಷ್ಟಲ್ಲ. ಈ ಮೊದಲು ಹೇಳಿದಂತೆ ಪ್ರತಿ ಹಂತಕ್ಕೂ ಕೆಲಸವು ಸರಿಯಾಗಿ ನಡೆದ ಉಲ್ಲೇಖವು ಅದರಲ್ಲಿ ಸಿಗುತ್ತದೆ. ಎಂತಲೇ ಈ 'ಆರ್ಡರ ಕಾರ್ಡಿ'ನ ವಿವರಗಳನ್ನು ಕೊಟ್ಟಿದೆ. ಒಂದು ಬದಿಯ ವಿವರಗಳು ಆರ್ಡರ ಕೊಡುವುದಕ್ಕೆ ಮುಂಚೆ

ಬರೆಯಲಾಗಿರುತ್ತವೆ. ಇನ್ನೊಂದು ಬದಿಯವು ಪುಸ್ತಕದ 'ಸಿದ್ಧತೆ' ನಡೆದಾಗ.

ಮುಂಬದಿ

| | | |
|---|---|---|
| ಪ್ರಾಥಮಿಕ ನಂ.<br>ಕೊಡುಗೆ ನಂ.<br>ವರ್ಗೀ. ನಂ. | ಲೇಖಕ | ತಲೆಬರೆಹ<br><br>ಪ್ರಕಾಶಕ ಪ್ರಕಟನ ವರ್ಷ<br>ಆಕಾರ, ನೇ ಆವೃತ್ತಿ. ಬೆಲೆ<br>(ಪುಸ್ತಕ ಮಾಹಿತಿಯ ಆಕರ) |

ಹಿಂಬದಿ

| | | | | | |
|---|---|---|---|---|---|
| ಪೂರೈಕೆಗಾರ | | | | | |
| ಆರ್ಡರ ನಂ | | ಪಾವತಿ ನಂ | | ಹಣ. ರೂ — | |
| | ತಾ. | ಅಂಕಿತ | | ತಾ. | ಅಂಕಿತ |
| ಆರ್ಡರ ಕೊಟ್ಟದ್ದು | | | ವರ್ಗೀಕರಣ | | |
| ಬಂದದ್ದು | | | ನಾಮಾವಲಿ | | |
| ಸಿದ್ಧತೆ | | | ಕಪಾಟನಲ್ಲಿಟ್ಟ ದಿನ | | |

## ಪುಸ್ತಕ ಸಿದ್ಧತೆ

ಗ್ರಂಥಾಲಯಕ್ಕೆ ಪುಸ್ತಕ ಬಂದ ಗಳಿಗೆಯಿಂದ ಕಪಾಟಿಗೆ ಅದು ಹೋಗುವ ವರೆಗಿನ ಕೆಲಸವೇ ಈ ಪುಸ್ತಕ ಸಿದ್ಧತೆ; ಎಂದರೆ ಬಂದ ಪುಸ್ತಕದ ಬಾಹ್ಯಪರೀಕ್ಷೆ ಮಾಡುವುದು, ಮುದ್ರೆ ಹೊಡೆಯುವುದು, ಲೇಬಲ್ ಅಂಟಿಸು ವುದು, ನಂಬರು ಹಾಕುವುದು, ವರ್ಗೀಕರಣ, ಸೂಚಿಯ ಕಾರ್ಡುಗಳನ್ನು ಬರೆಯುವುದು, ದಾಖಲೆಗಳಲ್ಲಿ ಉಲ್ಲೇಖ ಇವೆಲ್ಲ ಬರುತ್ತವೆ. ಮೊದಲಿಗೆ ಎಲ್ಲ ಪುಸ್ತಕಗಳು ನಮಗೆ ಬೇಕಾದ ಆವೃತ್ತಿಯಲ್ಲಿ ಸರಿಯಾಗಿ ಬಂದಿವೆಯೇ ಎಂದು ನಮ್ಮಲ್ಲಿರುವ ಆರ್ಡರ ಪ್ರತಿಗೆ ಹೋಲಿಸಿ ನೋಡಬೇಕು. ಎಷ್ಟೋ ಸಲ ಪುಟಗಳು ತಿರುವುಮುರುವು ಬಿದ್ದಿರುತ್ತವೆ. ಹೊಲಿಯುವಾಗ ಒಂದು ಫಾರ್ಮು ಬಿಟ್ಟು ಹೋಗಿರುತ್ತದೆ. ಕೆಲ ಪುಟಗಳ ಮುದ್ರಣವೇ ಕೆಟ್ಟಿರುತ್ತದೆ. ನೀವು ಕ್ಯಾಲಿಕೋ ಕೇಳಿರುತ್ತೀರಿ, ಅವರು ಸಾದಾ ಕಳಿಸಿರುತ್ತಾರೆ. ಇನ್ನು ಕೆಲವಕ್ಕೆ ಹೊಲಿಗೆ ಅಧ್ರವಾಗಿರುತ್ತವೆ. ಇವೇ ಮೊದಲಾದ ಕುಂದುಗಳಿದ್ದರೆ ಪೂರೈಕೆಗಾರನ ಗಮನಕ್ಕೆ ತಂದು ಹೆಚ್ಚಿನ ಸಂದರ್ಭಗಳಲ್ಲಿ ಪುಸ್ತಕವನ್ನು ತಿರುಗಿ ಬಿಡಬೇಕು; ಮತ್ತು ಮೇಲೆ ಹೇಳಿದ ಆರ್ಡರ ತಡಿಕೆಯಲ್ಲಿ ಅಂಥವು ಗಳನ್ನು ಪ್ರತ್ಯೇಕಿಸಿ ಇಡಬೇಕು.

ಈ ಒರೆಯಿಂದ ಪಾರಾಗಿ ಬಂದ ಮೇಲೆ, ಪುಟಗಳನ್ನು ಬಿಡಿಸಿರದೇ ಇಡಿಯ ಫಾರ್ಮಿನ ಮಡಿಕೆಯಲ್ಲೇ ಪುಸ್ತಕ ಉಳಿದುಕೊಂಡಿರುವಾಗ ಅವು ಗಳನ್ನು ಜಾಗರೂಕದಿಂದ ಬಿಡಿಸಬೇಕು. ಗ್ರಂಥಾಲಯದ ಮುದ್ರೆಯನ್ನು ಒತ್ತ ಬೇಕು. ಹೆಚ್ಚು ಮಸಿ ಮೂಡದಂತೆ, ಮುದ್ರಿತ ಅಕ್ಷರ ಮರೆಯಾಗದಂತೆ, ಪುಸ್ತಕದ ಅಂದ ಕೆಡದಂತೆ ಈ ಕೆಲಸ ಚೊಕ್ಕಟವಾಗಿರಬೇಕೆಂದು ಹೇಳು ವುದು ಸಣ್ಣ ಮಾತಾದರೂ ಅಗತ್ಯವಾದುದಾಗಿದೆ. ಸಾಮಾನ್ಯತಃ ಮುಖ ಪತ್ರದ ಹಿಂಬದಿಯಲ್ಲಿ ಕೆಳಗಡೆ, ಪ್ರಥಮ ಪ್ರಕರಣದ ಮೇಲ್ಗಡೆ, ಮತ್ತು ೨೧, ೫೧, ೧೦೧ ಇಂಥ ಒಂದು ವಿಶಿಷ್ಟ ಗುರುತಿನ ಪುಟದ ಕೆಳಗಡೆ ಹಾಗೂ ಪುಸ್ತಕದ ಕೊನೆಗೆ— ಇವಿಷ್ಟು ಮುದ್ರೆ ಹೊಡೆಯಬೇಕಾದ ಸ್ಥಳಗಳೆನ್ನ ಬಹುದು. ಇವಲ್ಲದೆ ಚಿತ್ರಗಳು, ನಕಾಶಗಳು ಇವುಗಳ ಹಿಂಬದಿಯಲ್ಲಿ ಸಹಿತ ಮುದ್ರೆ ಇರಬೇಕು.

ಇನ್ನು ಲೇಬಲ್ಲಿನ ಕೆಲಸ. ಕೆಲವು ದೊಡ್ಡ ಗ್ರಂಥಾಲಯಗಳಲ್ಲಿ ಕನ್ನರಿನ ಹಿಂಬದಿಗೆ ತಮ್ಮ ಸಂಜ್ಞಾಚಿಹ್ನೆಯುಳ್ಳ ಲೇಬಲ್ಲನ್ನು ಹಚ್ಚುವುದುಂಟು. ಇವಲ್ಲದೆ ಗ್ರಂಥಾಲಯದ ಕೆಲ ಸೌಕರ್ಯಗಳು, ನಿಯಮಗಳುಳ್ಳ ಕಾಗದ ವೊಂದನ್ನು ಅಲ್ಲೇ ಅಂಟಿಸುವುದುಂಟು. ಪುಸ್ತಕವನ್ನು ಒಳ್ಳೆಯ ರೀತಿಯಿಂದ ಉಪಯೋಗಿಸಬೇಕೆಂಬ ಬಗ್ಗೆ ಇದೇ ಹೊದಿಕೆಯ ಹಿಂಬದಿಗೆ ಚಿತ್ರವೊಂದನ್ನು ಮುಂಬಯಿಯ ರಾಯಲ್ ಏಶಿಯಾಟಿಕ್ ಸೊಸೈಟಿಯ ಗ್ರಂಥಾಲಯದವರು ಅಂಟಿಸಿದುದು ಇನ್ನೊಂದು ಮಾದರಿ. ಇಷ್ಟಲ್ಲದೆ ಪುಸ್ತಕದ ನಂಬರನ್ನು ಬರೆಯಲು ಮುಖಪುಟದ ಕೆಳಗಿನ ಎಡಬದಿಗೆ ಬುಡದಿಂದ ೧೩ ಇಂಚು ಮೇಲ್ಗಡೆ ವರ್ಗೀಕರಣ ನಂಬರನ್ನು ಬರೆಯಲು ಒಂದು ಚೀಟಿಯನ್ನು ಅಂಟಿಸುವುದೂ ಇದೆ. ಇದಕ್ಕಾಗಿಯೇ ವಿಶಿಷ್ಟ ಚೀಟಿಗಳು ಪೇಟೆಯಲ್ಲಿ ದೊರೆಯುತ್ತವೆ.

ಅಂಟಿಸುವ ಕೆಲಸ ಇಲ್ಲಿಗೇ ಮುಗಿಯಲಿಲ್ಲ. ಕನ್ನರಿನ ಮೂರನೆಯ ಪುಟದಲ್ಲಿ ಕಾರ್ಡಿಗಾಗಿ ಒಂದು 'ಕಿಸೆ' ಯನ್ನು ಅಣಿಗೊಳಿಸಿ, ಹಚ್ಚಬೇಕು. ಅದರಲ್ಲಿ ಆ ಪುಸ್ತಕದ ಹೆಸರುಳ್ಳ ಕಾರ್ಡೊಂದು ಇರುತ್ತದೆ. ಮುಂದೆ ಯಾರಾದರೂ ಅದನ್ನು ಓದಲು ಭಂಡಾರದಿಂದ ಒಯ್ದರೆ ಆ ಕಾರ್ಡಿನಲ್ಲಿ ಅವರ ನಂಬರನ್ನು ಬರೆದು ಬೇರೆಡೆ ತೆಗೆದಿರಿಸುತ್ತಾರೆ. ಪುಸ್ತಕ ಬಂತೆಂದೊಡನೆ ಆ ಕಾರ್ಡು ಪುನಃ ತನ್ನ ಒರೆಯನ್ನು ಸೇರುವುದು. ಈ ನಮೂನೆಯ ಪುಸ್ತಕವಿತರಣ ಕಾರ್ಯಕ್ಕಾಗಿ, ಅದರ ಮಗ್ಗಲಿನ ಪುಟದಲ್ಲಿ ದಿನಾಂಕವನ್ನು ಸೂಚಿಸಲು ಇನ್ನೂ ಒಂದು ಕಾಗದವನ್ನು ಅಂಟಿಸಬೇಕು.

ಲೇಬಲ್ಲಿನ ಈ ಕೆಲಸ ಮುಗಿದೊಡನೆ, ಆ ಕಿಸೆಯಲ್ಲಿ ಇಡುವುದಕ್ಕಾಗಿ 'ಪುಸ್ತಕ ಕಾರ್ಡು' ಸಿದ್ಧವಾಗಬೇಕಾಗುತ್ತದೆ. ಈ ಕಾರ್ಡೆಂದರೆ ಪುಸ್ತಕದ ಪ್ರತಿನಿಧಿ ಇದ್ದ ಹಾಗೆ. ಪುಸ್ತಕ ಎಲ್ಲಿ ಹೋಗಿದೆ, ಎಂದು ಬರುವುದು ಎಂಬ ವರದಿಯನ್ನು ಒಪ್ಪಿಸುತ್ತದೆ. ಈ ಕಾರ್ಡು ದಪ್ಪನ್ನ ಕಾಗದವಾಗಿರಬಹುದು, ಇಲ್ಲವೆ ಸಿಲೊಲಾಯಿಡಿನದಾದರೂ ಆದೀತು. *

ಇಷ್ಟಾದ ಮೇಲೆ ಪುಸ್ತಕ ವರ್ಗೀಕರಣವಾಗಬೇಕು. ವರ್ಗೀಕರಣ ನಂಬರು ಬಂದಿತೆಂದರೆ ಪ್ರಾಥಮಿಕ ದಾಖಲೆಯಲ್ಲಿ ಅದರ ನಮೂದಾಗಬೇಕು.

---

* ನಮೂನೆಗೆ ಪು. ೨೦೪ ನೋಡಿರಿ.

‘ ಪುಸ್ತಕ ಕಾರ್ಡು ’

| ಪ್ರಾ. ನಂ. | | ವರ್ಗೀ. ನಂ. | |
|---|---|---|---|
| ಲೇಖಕ — | | | |
| ಹೆಸರು — | | | |
| ನಂ. | ತಾ. | ನಂ. | ತಾ. |
| | | | |

ಇವೆರಡೂ ನಂಬರು ದೊರೆತ ಮೇಲೆ, ಅವುಗಳನ್ನು ಪುಸ್ತಕದಲ್ಲಿ ಚೊಕ್ಕವಾಗಿ ಬರೆಯಬೇಕಾಗುವುದು. ಈ ಬರವಣಿಗೆ ಹೆಚ್ಚು ಕಾಲ ನಿಲ್ಲಲೆಂದು ಬರೆಯುವ ವಿಧಾನದಲ್ಲಿ ಈಚೆಗೆ ಸುಧಾರಣೆಗಳಾಗಿವೆ. ಸಾದಾ ಕಾಗದದ ಮೇಲೆ ಮಸಿಯಿಂದ ಬರೆಯುವುದು ಸಾಮಾನ್ಯ ಕ್ರಮ. ಆದರೆ ಪುಸ್ತಕದ ಬಳಕೆ ಸಾಕಷ್ಟಾದ ನಂತರ ಕಾಗದ ಹರಿಯುತ್ತದೆ, ಮಾಸಿ ಕೆಡುತ್ತದೆ. ಅದಕ್ಕಾಗಿ ಒಳ್ಳೆಯ ಕ್ಯಾಲಿಕೊ ಕಾಗದ ಉಪಯೋಗಿಸುವುದೊಳಿತು. ಇದಲ್ಲದೆ ವಿದ್ಯುತ್ತಿನಿಂದ ನಡೆಯಿಸಲ್ಪಡುವ ಒಂದು ಹೊಸ ನಮೂನೆಯ ಲೆಕ್ಕಣಿಕೆ ಇದಕ್ಕೆಂದೇ ನಿರ್ಮಿತವಾಗಿದೆ. ನೋಡುವುದಕ್ಕೆ ದಿಪ್ಪನ್ನ ಪೆನ್ಸಿಲ್ಲಿನ ಹಾಗೇ ಇರುತ್ತದೆ. ಅದರ ತುದಿ ಧಾತುವಿನಿಂದ ಮಾಡಿದುದು, ಅದರ ಹಿಂಭಾಗ ವಿದ್ಯುತ್ತಿನ ತಂತಿಗೆ ಹೊಂದಿಸಲ್ಪಟ್ಟಿರುತ್ತದೆ. ಎಲ್ಲಿ ನಂಬರನ್ನು ಹಾಕಬೇಕೋ ಅಲ್ಲೊಂದು ‘ಬಣ್ಣದ ಸುನೇರಿ ಕಾಗದ’ ವಿಟ್ಟು ಅದರ ಮೇಲೆ ಈ ಲೇಖನಿಯಿಂದ ಬರೆಯಬೇಕು. ಹೀಗೆ ಬರೆದ ಅಕ್ಷರ ಬೇಗನೆ ಮಾಸು ವುದಿಲ್ಲ. ಈ ಕಂಠಲೇಖನಿಗೆ ‘ ಸ್ಟೈಲೋಗ್ರಾಫಿಕ್ ಪೆನ್ ’ ಎಂದು ಹೆಸರು.

ಇದರಲ್ಲಿಯು ಒಂದೊಂದು ಕ್ರಮ ಮುಗಿದ ಹಾಗೆಲ್ಲ ಆರ್ಡರ ಕಾರ್ಡಿನ ಹಿಂಬದಿಯಲ್ಲಿ ಸಂಬಂಧಪಟ್ಟವನ್ನು ತನ್ನ ಅಂಕಿತವನ್ನು ಹಾಕುತ್ತ ಹೋಗ ಬೇಕು. ಮತ್ತು ಪುಸ್ತಕ ಸಿದ್ಧತೆಯಲ್ಲಿ ಒಂದೇ ಪುಸ್ತಕಕ್ಕೆ ಎಲ್ಲ ಕ್ರಮ ಗಳನ್ನು ಒಮ್ಮೆಲೇ ಮಾಡದೇ, ಒಂದೊಂದು ಕ್ರಮವನ್ನು ಮಾತ್ರ ಹತ್ತಾರು ಪುಸ್ತಕಗಳಿಗೆ ಒಂದೊಂದು ಸಾರೆ ಕೈಕೊಳ್ಳುವುದು ಹೆಚ್ಚು ಸೂಕ್ತವಾದುದು.

ಕೊನೆಯ ಒಂದು ಮಾತಿದೆ. ಅದೆಂದರೆ ಪುಸ್ತಕಾಲಯ ದಾಖಲೆಗಳ ವಿಶಿಷ್ಟವಾದ ಬರವಣಿಗೆ. ಮುದ್ರಿತ ಅಕ್ಷರಗಳ ಹಾಗೇ ಯಾವಾಗಲೂ ಬರೆಯ ಬೇಕೆಂದಲ್ಲವಾದರೂ ಅಕ್ಷರಗಳು ಮತ್ತು ಸಂಖ್ಯೆಗಳು ಬಿಡಿಬಿಡಿಯಾಗಿ ಇರ ಬೇಕು. ತೀರ ಚಿಕ್ಕವಾಗಿರಕೂಡದು. ಒಂದು ಅಕ್ಷರ ಸಣ್ಣದು, ಇನ್ನೊಂದು ದೊಡ್ಡದು ಹೀಗಾಗಕೂಡದು. ತಲೆಕಟ್ಟನ್ನು ಮೊನಚು ಮಾಡದೆಯೇ ಅದು ಅಕ್ಷರದ ಆಕಾರಕ್ಕೆ ಪ್ರಮಾಣಬದ್ಧವಾಗಿರಬೇಕು.

## ೨. ದಾಖಲೆಗಳು

ಮೇಲೆ ಹೇಳಿದ ದೈನಂದಿನ ಕ್ರಮವನ್ನು ಪರಿಷ್ಕಾರವಾಗಿ ನಡಸಿಕೊಂಡು ಹೋಗುವುದಕ್ಕೆಂದು ಇಟ್ಟಿರಬೇಕಾದ ದಾಖಲೆಗಳ ಕುರಿತು ತುಸು ವಿವರದಲ್ಲಿ ಹೇಳಬೇಕಾಗಿದೆ. ಆದರೆ ಒಂದು ಕಚೇರಿ ನಡೆಯಬೇಕಾದರೆ ಇರಬೇಕಾದ ಇತರ ಸಾಮಾನ್ಯ ದಾಖಲೆಗಳನ್ನೂ ಕ್ರಮವನ್ನೂ ವಿವರಿಸುವುದು ಇಲ್ಲಿಯ ಉದ್ದೇಶವಲ್ಲ. ಪುಸ್ತಕಾಲಯ ಸೇವೆಗೆ ವಿಶಿಷ್ಟವಾಗಿ ಬೇಕಾಗುವಷ್ಟನ್ನು ಈ ಕೆಳಗೆ ಕೊಡಬಯಸಿದೆ.

### ಆರೋಹಣ ದಾಖಲೆ

ಇಂದು ನಮ್ಮಲ್ಲಿ, ಯಾವುದೊಂದು ಪುಸ್ತಕ ಬಂದೊಡನೆ ಅದನ್ನು ಕೆಟಲಾಗಿನಲ್ಲಿ ಬರೆಯುವುದೊಂದು ಮಾತ್ರ ಪದ್ಧತಿ ಇದೆಯಷ್ಟೆ. ಆದರೆ ಅದು ಸಾಲದು. ಒಂದು ಪುಸ್ತಕದ ಪೂರ್ವೋತ್ತರ, ಪುಸ್ತಕಾಲಯದಲ್ಲಿ ಅದರ ಬಾಳುವೆ, ಕೊನೆ—ಎಲ್ಲವನ್ನೂ ತೋರಿಸುವ ಒಂದು ಪ್ರಾಥಮಿಕ ನಮೂದನೆ ಇರಲೇಬೇಕು: ಅದುವೆ ಈ ಆರೋಹಣ ಅಥವಾ ಪ್ರಾಥಮಿಕ ದಾಖಲೆ. ಪುಸ್ತಕವು ಬಂದ ಗಳಿಗೆಯಿಂದ ಅದರ ಕೊನೆಯ ವರೆಗಿನ ಇತಿಹಾಸವನ್ನೆಲ್ಲ ಇದು ಕೊಡಬೇಕೆಂದು ಆಶಿಸಲಾಗಿದೆ. ಅಂತೆಯೇ ಅದರ ಅಂಕಣಗಳು ಹೀಗಿವೆ:—

ಇನ್ನೂ ಕೆಲ ವಿಷಯಗಳನ್ನು ಇದರಲ್ಲಿ ಬಿಟ್ಟಿದೆಯಾದರೂ, ಪ್ರಾಥಮಿಕ ದಾಖಲೆಯು ಇನ್ನೂ ಸುಲಭಗೊಳ್ಳಬೇಕು, ಇಷ್ಟೆಲ್ಲ ಏತಕ್ಕೆ ಎನ್ನುವ ಸೌಲಭ್ಯವಾದಿಗಳೂ ಇದ್ದಾರೆ. ಇದರ ಕೆಲವು ವಿವರಗಳನ್ನು ಸೂಚಿಯಲ್ಲಿ ಕೊಡಬಹುದು ಎಂದು ಅವರ ಮತ. ಕೆಲವರು ಪುಸ್ತಕಕ್ಕೆ ಕೊಟ್ಟ ಆರ್ಡರಿನ ಫಾರ್ಮಿನ ಮೇಲೆಯೇ ಒಂದು ಕ್ರಮಾಂಕವನ್ನು ಹಾಕುತ್ತ ಬಗೆಹರಿಸಬಹುದು ಎಂದೂ ಅನ್ನುತ್ತಾರೆ. ಆದರೂ ಇದೊಂದು ಮಹತ್ವದ ದಾಖಲೆ, ಪುಸ್ತಕಗಳ ಬಗ್ಗೆ ಅಮುಖ್ಯ ಮಾಹಿತಿಯನ್ನು ಹೇಳಬೇಕಿಲ್ಲದಿದ್ದರೂ ಅವುಗಳ ಬಗ್ಗೆ ಈ ಕೆಳಗಿನ ಪ್ರಶ್ನೆಗಳಿಗೆ ಇದು ಉತ್ತರ ಕೊಡುವಂತಾದರೆ ಸಾಕೆನ್ನಬಹುದು:—

೧. ಪುಸ್ತಕ ನಮಗೆ ಬಂದುದು ಎಂದು ? ಎಲ್ಲಿಂದ ?

೨. ಎಷ್ಟು ಬೆಲೆ ಬಂದಿದೆ ? ಮತ್ತು

೩. ಒಟ್ಟು ಎಷ್ಟು ಪುಸ್ತಕಗಳಿವೆಯೆಂದು ಥಟ್ಟನೆ ಹೇಳಬರುವುದೆ ?

ಪುಸ್ತಕಗಳು ಬಂದ ಕ್ರಮದಲ್ಲಿ ಇದರಲ್ಲಿ ನಮೂದಿಸುತ್ತ ಹೋದಹಾಗೆಲ್ಲ ಅಲ್ಲಲ್ಲಿ ಸಂದೇಹಗಳು ಬರುವುದುಂಟು. ಉದಾಹರಣೆಗೆ, ಒಂದೇ ಪುಸ್ತಕ ಎರಡು ಭಾಗಗಳಲ್ಲಿ ಬಂದರೆ ಹೇಗೆ ಬರೆಯಬೇಕು ಎಂಬುದು. ಆಗ ಪ್ರತಿ ಸಂಪುಟವನ್ನೂ ಬೇರೆಯಾಗಿ ಗಣಿಸಿ ಬೇರೆ ಬೇರೆ ನಂಬರನ್ನು ಕೊಡಬೇಕು. ಕಡಿಮೆ ಪುಟಗಳ ಸಣ್ಣ ಪುಸ್ತಿಕೆಯೊಂದು ಬರಬಹುದು. ಸಾಮಾನ್ಯವಾಗಿ ಅವುಗಳನ್ನು ಈ ದಾಖಲೆಯಲ್ಲಿ ಬರೆಯಕೂಡದು. ಇಂಥವು ನಾಲ್ಕಾರು ಬಂದು, ಒಂದು ಸಂಪುಟವಾದರೆ ಅದನ್ನು ನಮೂದಿಸಬೇಕು. ಈ ಮಾತು ಪತ್ರಿಕೆಗಳಿಗೂ ಅನ್ವಯಿಸುತ್ತದೆ.

ಹೀಗೆ ಒಂದು ಪುಸ್ತಕಕ್ಕೆ ಇದರಲ್ಲಿಂದ ಕೊಡುತ್ತಿರುವ ಕ್ರಮಾಂಕದಿಂದ ಏನೆಲ್ಲ ಸೌಕರ್ಯಗಳುಂಟು. ಒಂದು, ಅದರ ನಿರ್ದಿಷ್ಟ ಸ್ಥಾನ ನಮಗೆ ಗೊತ್ತಾಗುತ್ತದೆ. ತೀರ ಕೊನೆಯ ಅಂಕಿಯನ್ನು ನೋಡಿದಾಗ ನಮ್ಮ ಗ್ರಂಥ ಸಂಗ್ರಹ ಇಷ್ಟಿದೆ ಎಂದು ಥಟ್ಟನೆ ಹೇಳುವುದು ಸಾಧ್ಯವಾಗುತ್ತದೆ. ಯಾವದೊಂದು ಪುಸ್ತಕದ ಬಗ್ಗೆ ಏನಾದರೂ ಮಾಹಿತಿ ಬೇಕಾದಾಗ, ಈ ಕ್ರಮಾಂಕದ ಸಹಾಯದಿಂದ ಪ್ರಾಥಮಿಕ ದಾಖಲೆಯಲ್ಲಿ ಅದನ್ನು ಬೇಗ ಕಂಡುಕೊಳ್ಳಬಹುದು. ಪುಸ್ತಕ ಕಳೆದಾಗ ಅದರ ಬೆಲೆ ಎಷ್ಟೆಂದು ಕಳೆದವನಿಗೆ ಹೇಳ

ಬಹುದು. ಹೀಗೆ ಈ ನಮೂದನೆ ಒಂದು ಪುಸ್ತಕವನ್ನು ವೈಯಕ್ತೀಕರಿಸಿ ಪುಸ್ತಕಾಲಯದಲ್ಲಿ ಅದರ ಸ್ಥಾನವನ್ನು ನಿರ್ದಿಷ್ಟಗೊಳಿಸುತ್ತದೆ.

ಈ ದಾಖಲೆಯನ್ನು ಮುಖ್ಯವಾಗಿ ಎರಡು ಬಗೆಯಲ್ಲಿ ಇಡಬಹುದು. ಒಂದು, ೪೦೦-೫೦೦ ಪುಟಗಳ ಲೆದರ ಬೈಂಡಿನ ಪುಸ್ತಕರೂಪದಲ್ಲಿ; ಇನ್ನೊಂದು ಕಾರ್ಡುಗಳಲ್ಲಿ. ಮೊದಲನೆಯ ರೂಪದಲ್ಲಿದ್ದರೆ ಅದು ಭದ್ರ ವಾಗುಳಿಯುವುದು. ಮತ್ತಲ್ಲದೆ ತಿದ್ದುಪಡಿ ಅಥವಾ ಬದಲಾವಣೆಗೆ ಹೆಚ್ಚಿನ ಆಸ್ಪದವಿರುವುದಿಲ್ಲ. ಇತ್ತ ಕಾರ್ಡನ್ನು ಅಪೇಕ್ಷಿಸುವುದು ಈ ಬದಲಾವಣೆಯ ಸಾಧ್ಯತೆಗಾಗಿಯೇ. ಆದರೆ ಈ ಪ್ರಾಥಮಿಕ ದಾಖಲೆಯಲ್ಲಿ ವಿಶೇಷ ಮಾರ್ಪಾಟು ಮಾಡುವ ಅಗತ್ಯವೂ ಬೀಳುವುದಿಲ್ಲ; ಮತ್ತು ಕಾರ್ಡು ಕಳಚಿ ಬೀಳುವ ಸಂಭವವೂ ಇರುವುದರಿಂದ ಪುಸ್ತಕರೂಪದ ದಾಖಲೆಯೇ ಗ್ರಾಹ್ಯ ವೆನ್ನಬೇಕು.

ಇನ್ನೊಂದು ಸಮಸ್ಯೆ ಇದೆ; ಯಾವುದೊಂದು ಪುಸ್ತಕ ಕಳೆದುಹೋದರೆ, ಅಥವಾ ಹಳೆಯದಾಯಿತೆಂದೋ ಹರಿಯಿತೆಂದೋ ಅದನ್ನು ಉಪಯೋಗದಿಂದ ತೆಗೆದಿರಿಸಿದರೆ ಆಗೇನು ಮಾಡುವುದು ? ಪ್ರಾಥಮಿಕ ದಾಖಲೆಯ ಕೊನೆಯ ಅಂಕಣದಲ್ಲಿ ಹಾಗೆಂದು ಕಾಣಿಸಬಹುದು. ಆದರೆ ಮುಂದೆ ಆ ನಂಬರು ಖಾಲಿಯುಳಿಯುವುದಕ್ಕೇನು ಮಾಡುವುದು ? ಆಗ ಇನ್ನೊಂದು ಪುಸ್ತಕ ವನ್ನು ಭರತಿ ಮಾಡುವುದೆ ? ಇಲ್ಲಿ ಅಭಿಪ್ರಾಯ ಭಿನ್ನತೆಯಿದೆ. ಯಾವ ದೊಂದು ಪುಸ್ತಕ ಕಳೆದುಹೋಯಿತೆಂದರೆ, ಆ ಮುಂದೆ ಅದರ ಬೆಲೆ, ಪುಟ ಇವುಗಳ ಅಗತ್ಯ ಏನು ಎಂದು ವಿರುದ್ಧವಾದಿಗಳ ಕೇಳಿಕೆ. ವ್ಯಾವಹಾರಿಕವಾಗಿ ನೋಡಿದರೆ ಕಳೆದುಹೋದ ಪುಸ್ತಕದ ಇತರ ವಿವರಗಳನ್ನು ಅಳಿಸಿ, ಅದರಲ್ಲಿ ಇನ್ನೊಂದನ್ನು ತುಂಬುವುದೇನು ಅಗತ್ಯ ಕಾಣುವುದಿಲ್ಲ.

## ಪ್ರತ್ಯಾವರ್ತನ ದಾಖಲೆ

ಆದರೂ ಕಳೆದುಹೋದ ಹಾಗೂ ಈ ದಾಖಲೆಯಿಂದ ಹಿಂತೆಗೆಯಲಾದ ಪುಸ್ತಕಗಳ ಸಲುವಾಗಿ ಬೇರೊಂದು ದಾಖಲೆಯನ್ನು ಇಡಬೇಕು. ಇದರಿಂದ ವಾರ್ಷಿಕ ಕಾರ್ಯದಲ್ಲಿ ಸಂಗ್ರಹಸಂಖ್ಯೆಯನ್ನು ನಿರ್ದಿಷ್ಟಗೊಳಿಸಲು ಸಾಧ್ಯ ವಾಗುವುದು ಅದರ ನಮೂನೆ ಹೀಗೆ:—

ಇದರಲ್ಲಿಯ ಕ್ರಮಾಂಕವನ್ನು ಪ್ರಾಥಮಿಕ ದಾಖಲೆಯ 'ಶರಾ' ಅಂಕಣ ದಲ್ಲಿ ನಮೂದಿಸಬೇಕು. ಮತ್ತು ಕೆಟಲಾಗಿನ ಕಾರ್ಡುಗಳನ್ನು ಮರೆಯದೆ ತೆಗೆಯಬೇಕು.

## ದಾನಗ್ರಂಥಗಳ ದಾಖಲೆ

ಗ್ರಂಥಾಲಯಕ್ಕೆ ದಾನವಾಗಿ ಬರುವ ಪುಸ್ತಕಗಳ ಸಂಖ್ಯೆ ಹೆಚ್ಚಿದ್ದರೆ, ಅವುಗಳ ದಾಖಲೆಯನ್ನು ಬೇರೆಯಾಗಿ ಇಡಬೇಕಾದುದು ಅಗತ್ಯವಾಗುತ್ತದೆ. ಕೆಲ ಉದಾರಿಗಳು ತಮ್ಮಲ್ಲಿರುವ ಇಡೀ ಸಂಗ್ರಹವನ್ನು ದಾನವಾಗಿ ಕೊಟ್ಟು ಅವುಗಳನ್ನು ಬೇರೆಯಾಗಿ ತಮ್ಮ ಹೆಸರಲ್ಲಿರಿಸಬೇಕೆಂದು ಕೇಳಿಕೊಳ್ಳುವು ದುಂಟು. ಆಗ ಈ ದಾಖಲೆಯನ್ನು ಪ್ರತ್ಯೇಕವಾಗಿಡುವುದರ ಅಗತ್ಯ ಅನಿಸ ದಿರದು. ಒಂದು ವೇಳೆ ಪ್ರಾಥಮಿಕ ದಾಖಲೆಯಲ್ಲಿಯ 'ಯಾರಿಂದ ಬಂದಿತು' ಎಂಬ ಅಂಕಣದಲ್ಲಿ ದಾನ ಕೊಟ್ಟವರ ಹೆಸರನ್ನು ಕಾಣಿಸಲಾಗುವುದಾದರೂ, ಬೇರೆಯಾಗಿ ಇಂಥ ರಜಿಸ್ಟರನ್ನು ಇಡುವುದೂ ಒಳ್ಳೆಯದೇ. ದಾನವಾಗಿ ಬಂದ ಪುಸ್ತಕವು ಪ್ರಾಥಮಿಕ ದಾಖಲೆಯಲ್ಲಲ್ಲದೆ, ಈ ದಾಖಲೆಯಲ್ಲಿಯೂ ನಮೂ ದನ್ನು ಪಡೆಯುವುದು. ಇದರ ಅಂಕಣಗಳು ಹೆಚ್ಚುಕಡಿಮೆ ಪ್ರಾಥಮಿಕ ದಾಖಲೆಯಂತೆಯೇ ಇರುತ್ತವೆ.

## ಬೈಂಡಿಂಗ್ ರಜಿಸ್ಟರ

ಪುಸ್ತಕಗಳನ್ನು ಬೈಂಡಿಗೆ ಮೇಲಿಂದಮೇಲೆ ಕೊಡುವ ಪ್ರಸಂಗ ಬರುವು ದಷ್ಟೆ. ಇದಕ್ಕೆ ಸಂಬಂಧಪಟ್ಟ ವಿವರಗಳನ್ನು ನಮೂದಿಸುವುದು ಅನಿವಾರ್ಯ ವಾದುದು. ಈ ದಾಖಲೆಯ ನಮೂನೆಯನ್ನು ಕೊಟ್ಟಿದೆ. (ಪು. ೨೧೧)

ಮೊತ್ತವಾಗಿಯೂ, ಅತಿ ಹೆಚ್ಚು ಸಂಖ್ಯೆಯಲ್ಲಿಯೂ ಬೈಂಡಿಗೆ ಕೊಡುವು ದಿದ್ದರೆ ಮೇಲೆ ಹೇಳಿದ ಅಂಕಣಗಳೊಂದಿಗೆ ಬಿಡಿ ಹಾಳೆಗಳನ್ನು ಮುದ್ರಿಸಿ, ವಿವರಗಳನ್ನು ತುಂಬಿ, ಫೈಲಿನಲ್ಲಿ ಈ ದಾಖಲೆಯನ್ನು ಇಡಬಹುದು. ಪುಸ್ತಕ

# ಬೈಂಡಿಗ್ ರಜಿಸ್ಟರ

ಬೈಂಡರನ ಹೆಸರು, ವಿಳಾಸ.

| ಅ.ನಂ. | ಲೇಖಕ | ಹೆಸರು | ವರ್ಗೀ. ನಂ. | ಕೊಟ್ಟ ತಾ. | ಸೂಚನೆಗಳು | ಹಣ | ತಿರುಗಿ ಬಂದ ದಿನ | ಶರಾ |
|---|---|---|---|---|---|---|---|---|
| | | | | | | | | |

ಕೊಡುವಾಗ ಇದರ ದ್ವಿಪ್ರತಿ ತೆಗೆದು ಬೈಂಡರನಿಗೆ ಕೊಟ್ಟು, ಮೂಲಪ್ರತಿಯ ಮೇಲೆ ಅವನ ಸಹಿ ತೆಗೆದುಕೊಳ್ಳಬೇಕು. ಕೊಡುವಾಗ ಇಂತಿಷ್ಟು ದಿನಗಳಲ್ಲಿ ತಂದುಕೊಡಬೇಕೆಂಬುದನ್ನೂ, ಪ್ರತಿ ಪುಸ್ತಕಕ್ಕೆ ಯಾವ ನಮೂನೆಯ ಬೈಂಡು ಬೇಕು ಎಂಬುದನ್ನೂ ತಿಳಿಸಲು ಮತ್ತು ರಜಿಸ್ಟರಿನಲ್ಲಿ ನಮೂದಿಸಲು ಮರೆಯ ಬಾರದು.

## ಓದುಗರ ಸೂಚನಾ ಪುಸ್ತಕ

ಯಾವದೊಂದು ಪುಸ್ತಕ ತರಿಸುವಲ್ಲಿ ಓದುಗರೂ ಆಗಾಗ ಇಂಥ ಪುಸ್ತಕ ತರಿಸಬೇಕು ಎಂದು ಸೂಚನೆಗಳನ್ನು ಕೊಡಲಿಕ್ಕಿರುತ್ತದೆ ಎಂದು ಹಿಂದೆ ಹೇಳಿದೆಯಷ್ಟೆ. ಇದಕ್ಕೆಂದು ಒಂದು ವಹಿಯನ್ನಾಗಲೀ, ಬಿಡಿ ಕಾಗದಗಳನ್ನಾಗಲೀ ಕಟ್ಟೆಯ ಹತ್ತಿರವೇ ಇಟ್ಟಿರಬೇಕು. ವಹಿಯಿದ್ದರೂ ಓದುಗರಿಂದಲೇ ವಿವರಗಳನ್ನು ಬರೆಸುವ ಒಂದು ಕ್ರಮವಲ್ಲದೇ, ಬೇರೆ ಬಿಡಿ ಕಾಗದದಲ್ಲಿ ಬರೆದುಬಂದದ್ದಾದರೆ ಆನಂತರ ಇಂಥ ವಹಿಯಲ್ಲಿ ಕಾಣಿಸುವುದೂ ಇದೆ. ಅದರ ಅಂಕಣಗಳು ಇಂತು:(ಪು. ೨೧೩).

ಒಬ್ಬ ಓದುಗ ಇದರ ವಿವರಗಳನ್ನು ಹೀಗೆ ಬರೆದುಕೊಟ್ಟನೆಂದರೆ, ಆ ಪುಸ್ತಕ ಈಗಾಗಲೇ ಇದೆಯೇ, ಅಥವಾ ಅದೇ ವಿಷಯದ ಮೇಲೆ ಇನ್ನೊಂದು ಪುಸ್ತಕವಿದ್ದು, ಇದರ ಅಗತ್ಯ ಅಷ್ಟಿದೆಯೇ ಎಂದು ಮೊದಲು ನೋಡಿಕೊಳ್ಳ ಬೇಕು. ಆನಂತರ ಅದಕ್ಕೊಂದು ಕಾರ್ಡನ್ನು ಸಿದ್ಧಗೊಳಿಸಿ ಇತರ ಆರ್ಡರ ಕಾರ್ಡುಗಳೊಟ್ಟಿಗೆ ತಡಿಕೆಯಲ್ಲಿ ಇಡಬೇಕು. ಕಮಿಟಿಯ ನಿರ್ಣಯ ಅಥವಾ ಬೇರೊಂದು ಕಾರಣದಿಂದಾಗಿ ಆ ಪುಸ್ತಕವನ್ನು ತರಿಸಲಾಗದಿದ್ದರೆ, ಆ ಓದುಗ ನಿಗೆ ಅವನು ಕೊಟ್ಟ ವಿಳಾಸಕ್ಕೆ ಕೂಡಲೇ ಪತ್ರಮುಖೇನ ತಿಳಿಸುವುದೇ ಚೆಂದ. ಒಂದು ವೇಳೆ ಪುಸ್ತಕ ಅವನ ಸಲಹೆಯಂತೆ ತರಿಸಿಯಾಯಿತೆಂದರೆ, ಅದರ ಪ್ರಥಮ ಉಪಯೋಗದ ಹಕ್ಕು ಅವನಿಗಿದೆ. ಕೆಲವು ದೊಡ್ಡ ಗ್ರಂಥಾ ಲಯಗಳಲ್ಲಿ, ಆ ಪುಸ್ತಕ ಕತೆ-ಕಾದಂಬರಿಯಾಗಿದ್ದರೆ, ಆ ಹಕ್ಕು ನಡೆಯುವು ದಿಲ್ಲ! ಅಂತೂ ಈ ಸಲಹಾಪುಸ್ತಕದ ಗ್ರಾಹ್ಯ ಸೂಚನೆಗಳಿಗೆ ಅಗತ್ಯವಾಗಿ ಗಮನ ಕೊಟ್ಟಲ್ಲಿ ಓದುಗರಿಗೆ ನಮ್ಮ ಸೇವೆ ಹೆಚ್ಚು ಆತ್ಮೀಯವೆನಿಸುವಂತಾಗು ತ್ತದೆ.

# ಓದುಗರ ಸೂಚನಾಪುಸ್ತಕ

| ಅ.ನಂ. | ತಾ. | ಲೇಖಕ | ಪುಸ್ತಕ | ಪ್ರಕಾಶಕ | ಬೆಲೆ | ಓದುಗರ ಹೆಸರು | ವಿಳಾಸ | ತರಿಸಿದ ದಿನ | ಶರಾ |
|---|---|---|---|---|---|---|---|---|---|
| | | | | | | | | | |

## ಪತ್ರಿಕೆಗಳ ದಾಖಲೆಯು

ಪುಸ್ತಕಾಲಯಕ್ಕೆ ಬರುವ ಪತ್ರಿಕೆಗಳ ಯೋಗಕ್ಷೇಮವನ್ನು ಪ್ರತ್ಯೇಕವಾಗಿಯೇ ಒಬ್ಬರು ನೋಡಿಕೊಳ್ಳಬೇಕಾಗುತ್ತದೆ. ಯಾವುದೊಂದು ಪುಸ್ತಕವನ್ನು ದುಡ್ಡು ಕೊಟ್ಟು ಒನ್ಮೆ ಕೊಂಡಾದಮೇಲೆ, ಕಪಾಟಿಗೆ ಸೇರಿಸಿಯಾಯಿತೆಂದರೆ ಅದರ ಸಿದ್ಧತೆಯ ಕೆಲಸ ಅಲ್ಲಿಗೆ ಮುಗಿದಂತೆಯೇ. ಪತ್ರಿಕೆಗಳ ವಿಚಾರ ಹಾಗೆಲ್ಲಿದೆ ? ಅವು ನಿಯತವಾಗಿ ಬರುವವುಗಳಾದ್ದರಿಂದ, ಸರಿಯಾಗಿ ಬರುತ್ತಿವೆಯೇ ಎಂದು ನೋಡುವುದಕ್ಕೆ ಸುಲಭವಾದ ಒಂದು ಕ್ರಮವಿರಬೇಕಲ್ಲವೆ. ಅಷ್ಟಲ್ಲದೆ ಯಾವುದರ ಚಂದಾಹಣ ಎಷ್ಟು ಸಂದಿದೆ, ಎಲ್ಲಿಗದು ಮುಗಿಯುತ್ತದೆ ಎಂಬುದೂ, ಆ ಆ ವೇಳೆಗೆ ನಮ್ಮ ಗಮನಕ್ಕೆ ಬರಬೇಕಾದ ಮಾತಾಗುತ್ತದೆ.

ಯಾವ ಪತ್ರಿಕೆಗಳನ್ನು ತರಿಸಬೇಕೆಂಬುದೂ ಮಹತ್ವದ ಅಂಶವೇ, ಪತ್ರಿಕೆಗಳಿಗಾಗಿ ಇಂತಿಷ್ಟು ಹಣ ವೆಚ್ಚಮಾಡಬೇಕೆಂಬುದು ನಿಶ್ಚಿತವಾಯಿತೆಂದರೆ, ಯಾವ ಬಗೆಯ ಓದುಗರಿದ್ದಾರೆ ಎಂಬುದನ್ನು ನಾವಿಲ್ಲಿ ಗಮನಿಸಬೇಕು. ಪತ್ರಿಕೆಗಳಲ್ಲಿ ಮುಖ್ಯವಾಗಿ ಮೂರು ಬಗೆ: ದಿನಪತ್ರಿಕೆ, ವಾರಪತ್ರಿಕೆ ಮತ್ತು ಮಾಸಿಕಗಳು. ಇವುಗಳಲ್ಲಿ ಒಂದೆರಡು ದಿನಪತ್ರಿಕೆಗಳಂತೂ ಆಗತ್ಯವೇ. ಕೆಳದರ್ಜೆಯ ದಿನಪತ್ರಿಕೆಗಳನ್ನು ಬಿಡಬಹುದು. ಒಂದು ದಿನಪತ್ರಿಕೆ ತರಿಸುವಲ್ಲಿ ನಾಲ್ಕು ವಾರಪತ್ರಿಕೆಗಳೂ, ೧೬ ಮಾಸಿಕಗಳೂ ಬೇಕು ಎಂದು ಸ್ಥೂಲವಾಗಿ ಹೇಳಬಹುದು. ಈ ಸಾಪ್ತಾಹಿಕ ಹಾಗೂ ಮಾಸಪತ್ರಿಕೆಗಳಲ್ಲಿ ಯಾವವುಗಳಿಗೆ ಜನಸಾಮಾನ್ಯದಲ್ಲಿ ಸಾಕಷ್ಟು ಬೇಡಿಕೆಯಿದೆಯೋ, ಮತ್ತು ಬಹಳ ದಿನಗಳಿಂದ ನಡೆದುಕೊಂಡು ಬಂದು ಪತ್ರಿಕಾಪ್ರಪಂಚದಲ್ಲಿ ನೆಲೆಗೊಂಡಿವೆಯೋ, ಹಾಗೂ ಯಾವವು ತಮ್ಮ ಪ್ರಕಟನೆಯಲ್ಲಿ ಅನಿಯತವಲ್ಲವೋ ಅಂಥ ಪತ್ರಿಕೆಗಳಿಗೆ ಮಾತ್ರ ನಮ್ಮಲ್ಲಿ ಸ್ವಾಗತವಿರಬೇಕು.

ಪತ್ರಿಕೆಗಳು ೧೦-೧೫ ಇರುವಾಗ ಅವುಗಳ ದಾಖಲೆಯನ್ನಿಡುವ ಕ್ರಮ ನಮಗೆ ಗೊತ್ತು; ಒಂದು ಪುಸ್ತಕದಲ್ಲಿ ಪ್ರತಿ ಪತ್ರಿಕೆಗೆ ಒಂದೊಂದು ಪುಟವನ್ನಿಟ್ಟು ಅದರಲ್ಲಿ ಕಾಣಿಸುತ್ತ ಹೋಗುವುದು. ಅದರಿದು ವ್ಯವಸ್ಥಿತ ಕೆಲಸವೆನ್ನಿಸಿಕೊಳ್ಳುವುದಿಲ್ಲ, ಕಡೆತನಕ ಪೂರೈಸುವಂಥದೂ ಅಲ್ಲ. ಆದುದರಿಂದ

ಇಲ್ಲಿಯೂ ಕಾರ್ಡುಗಳನ್ನು ಉಪಯೋಗಿಸುವುದೇ ಒಳ್ಳೆಯದು; ಮತ್ತು ನಾವು ಉಪಯೋಗಿಸಿದ ದಾಖಲೆಯು ಈ ಕೆಳಗಿನ ವಿಚಾರದಲ್ಲಿ ಸಮಾಧಾನ ಹೇಳುವಂತಿರಬೇಕು:—

೧. ಪತ್ರಿಕೆಗಳು ಬಂದೊಡನೆ ಶೀಘ್ರದಲ್ಲಿ ಗುರುತು ಹಾಕಲು ಬರುವಂತಿರಬೇಕು.

೨. ಬಾರದಿದ್ದ ಪತ್ರಿಕೆಗಳು ಕೂಡಲೇ ಗೊತ್ತಾಗಬೇಕು.

೩. ಒಟ್ಟು ಪತ್ರಿಕೆಗಳ ಸಂಖ್ಯೆಯು ತಿಳಿಯಬೇಕು. ಮತ್ತು ಇನ್ನೊಮ್ಮೆ ಆರ್ಡರ ಕೊಡುವುದಕ್ಕೆ ಅನುಕೂಲಿಸುವ ಮಾಹಿತಿಯೂ ಅದರಲ್ಲಿರಬೇಕು.

ಪತ್ರಿಕೆಗಳಲ್ಲಿ ಮುಖ್ಯವಾಗಿ ಮೂರು ಪ್ರಕಾರವೆಂದಿತಷ್ಟೆ. ಮೂರಕ್ಕೂ ಒಂದೇ ನಮೂನೆಯ ಪತ್ರಕವನ್ನು ಉಪಯೋಗಿಸುವುದು ಸಾಧ್ಯವಿದೆ. ೮" × ೫" ಆಕಾರದ ಕಾರ್ಡಿನಲ್ಲಿ ಮೇಲೆ ಒಂದು ಇಂಚು ಜಾಗ ಬಿಟ್ಟು, ಕೆಳಗೆ ೨೭ ಗೆರೆಗಳೂ, ಉದ್ದವಾಗಿ ೧೪ ಅಂಕಣಗಳ ಗೆರೆಗಳೂ ಇರುವ ಕಾರ್ಡನ್ನು ಸಿದ್ಧಗೊಳಿಸಬೇಕು. ಇಂಥ ಕಾರ್ಡಿನ ಮೇಲ್ಭಾಗದಲ್ಲಿ ಪತ್ರಿಕೆಯ ಹೆಸರು, ಚಂದಾ ತೀರುವ ದಿನ ಮತ್ತು ಸಾಮಾನ್ಯವಾಗಿ ಬರುವ ದಿನ ಇವುಗಳನ್ನು ಬರೆಯಲು ಜಾಗವಿದ್ದು ಈ ಅಂಕಣಗಳಿದ್ದರೆ ಸಾಕು.

( ಪುಟ ೨೧೬, ೨೧೭, ೨೧೮ ನೋಡಿರಿ. )

* * * *

ಇಂಥ ಕಾರ್ಡುಗಳ ಹಿಂದುಗಡೆ ಈ ಕೆಳಗಿನ ವಿಷಯ ಅಚ್ಚಾಗಿದ್ದಿರಬೇಕು:

( ಪುಟ ೨೧೯ ನೋಡಿರಿ. )

* * * *

ಈ ರೀತಿಯಾಗಿ ಮಾಡಿದ ಒಂದು ಕಾರ್ಡು ಒಂದು ದಿನಪತ್ರಿಕೆಗೆ ಒಂದು ವರ್ಷ, ಸಾಪ್ತಾಹಿಕಕ್ಕೆ ೭ ವರ್ಷ ಹಾಗೂ ಮಾಸಪತ್ರಿಕೆಗೆ ೧೪ ವರ್ಷ ಸಾಲುವುದು ! ಪತ್ರಿಕೆ ಬಂತೆಂದೊಡನೆ ಸಣ್ಣ ಗುರುತೊಂದನ್ನು ಹಾಕುವುದೊಂದೇ ಕೆಲಸ. ಉಳಿದೆಲ್ಲ ಸಿದ್ಧತೆ ಮೊದಲೇ ಆಗಿರುತ್ತದೆ.

## ದಿನಪತ್ರಿಕೆಯ ಕಾರ್ಡು

೫"

| | | | | |
|---|---|---|---|---|
| ಹೆಸರು | | | | ದಿನಪತ್ರಿಕೆ |
| ಚಂದಾ ಮುಗಿತ | | | | ಬರುವ ವೇಳೆ |
| | | ೧೯೫೩ | | |
| ಜನೆ. ೧ | ಜನೆ. ೨೮ | ಫೆಬ್ರು. ೨೪ | ಮಾ. ೨೨ | → ಒಟ್ಟು ೧೪ ಅಂಕಣಗಳು |
| ೨ | ೨೯ | | | ↕ ಒಟ್ಟು ೨೭ ಅಂಕಣಗಳು |
| ೩ | ೩೦ | | | |
| ೪ | ೩೧ | | | |
| ೫ | ಫೆಬ್ರು. ೧ | | | |
| ೬ | | | | |
| ೭ | | | | |
| ೮ | | | | |
| ೯ | | | | |
| | | | | |

← ೮"

## ವಾರಪತ್ರಿಕೆಯ ಕಾರ್ಡು

೫"

೬"

| ಹೆಸರು<br>ಚಂದಾ ಮುಗಿತ | | | | ವಾರಪತ್ರಿಕೆ<br>ಬರುವ ವಾರ |
|---|---|---|---|---|
| ೧೯೫೩ | | ೧೯೫೪ | | |
| ಜನೆ ೨ | | | | |
| ೯ | | | | |
| ೧೬ | | | | |
| ೨೩ | | | | |

## ಕಾರ್ಡಿನ ಹಿಂಬದಿ

| ಕಳಿಸುವವನ ಹೆಸರು, ವಿಳಾಸ | | | | | |
|---|---|---|---|---|---|
| ವರ್ಷ & ಸಂಪುಟ | ಚಂದಾ ಮುಗಿದ ದಿನ | ಕೊಟ್ಟ ಚಂದಾ ಹಣ | ರಸೀದಿ ನಂ. | ಮುಂದಿನ ಏರ್ಪಾಡು | ಶರಾ |
| | | | | | |

## ೩. ಪುಸ್ತಕಗಳ ವಿತರಣೆ

ಓದುಗರಿಗೆ ಪುಸ್ತಕಗಳನ್ನು ಓದಲಿಕ್ಕೆ ಕೊಡುವ ಮತ್ತು ಹಿಂತೆಗೆದು ಕೊಳ್ಳುವ ಕೆಲಸಕ್ಕೆಯೇ ಹೆಚ್ಚಾಗಿ ಈ ಹಿಂದೆ ಹೇಳಿದ ಎಲ್ಲ ಸಿದ್ಧತೆ ನಡೆಯಬೇಕಾಗಿದೆಯೆಂದರೆ ತಪ್ಪಲ್ಲ. ಓದುಗರಿಗಾಗಿ ನಡೆಯುವ ಪುಸ್ತಕ ವಿತರಣೆ ಪುಸ್ತಕಾಲಯದ ನಿಜವಾದ ಮತ್ತು ಎದ್ದು ಕಾಣುವಂತಹ ಸೇವೆ.

### ಸದ್ಯದ ನಿರುಪಯೋಗಿ ಕ್ರಮ

ಪುಸ್ತಕ ವಿತರಣದ ಕಾರ್ಯದಲ್ಲಿ ಒಂದು ಮಹತ್ವದ ಅಂಶವೆಂದರೆ, ಓದುಗರ ವೇಳೆಯನ್ನು ಉಳಿಸುವುದು. ಪುಸ್ತಕಾಲಯಕ್ಕೆ ಬರುವವರು ಓದಬೇಕೆಂಬ ಚಟವನ್ನು ಕ್ರಮೇಣ ಬೆಳೆಸಿಕೊಳ್ಳುತ್ತಿರುವಾಗ, ಅವರನ್ನು ಕಾಯಿಸದೇನೆ ಬೇಗ ಅವರಿಗೆ ಪುಸ್ತಕಗಳನ್ನು ಕೊಟ್ಟು ಕಳಿಸುವಂತಾಗಬೇಕಲ್ಲವೆ ? ಅಲ್ಲದೆ ನಾಲ್ಕನೆಯ ಸೂತ್ರದಿಂದ ನಾವು ತಿಳಿದುಕೊಂಡಿರುವಂತೆ, ಅದರಿಂದ ನಮ್ಮ ಕಾರ್ಯದಲ್ಲಿಯೂ ವೇಳೆ ಉಳಿಯುವುದು. ಆದರೆ ಈಗ ಸದ್ಯ ನಾವು ಒಂದು ದೊಡ್ಡ ಪುಸ್ತಕದಲ್ಲಿ ಅವರವರ ಪುಟದಲ್ಲಿ, ಒಯ್ದ ಪುಸ್ತಕಗಳ ನಂಬರು, ಹೆಸರು, ತಾರೀಖು, ಆಮೇಲೆ ಅವರ ಸಹಿ ಹೀಗೆಲ್ಲ ಬರೆದು ಕೊಳ್ಳುವ ಯಾಂತ್ರಿಕ ಕೆಲಸದ ವೇಳೆಯನ್ನು ಇನ್ನಾವುದಕ್ಕಾದರೂ ಭಂಡಾರಿಗೆ ಉಪಯೋಗಿಸುವಂತಾದರೆ ಎಷ್ಟು ಚೆನ್ನು! ಎಂಬುದನ್ನು ವಿಚಾರಿಸಬೇಕಾಗಿದೆ.

ಇಷ್ಟಕ್ಕೂ ನಮ್ಮ ಭಂಡಾರಗಳಲ್ಲಿರುವ ಪುಸ್ತಕ ಕೊಡು–ತಗೊಳ್ಳುವ ಕ್ರಮದಿಂದ ಆವಶ್ಯಕ ಪ್ರಯೋಜನವೂ ಏನಿಲ್ಲ. ಏಕೆಂದರೆ ಪುಸ್ತಕ ಚಲಾವಣೆಯ ಪದ್ಧತಿ ಯಾವುದಿದ್ದರೂ ಅದರಿಂದ ಈ ಕೆಳಗಿನ ಸಂಗತಿಗಳಿಗೆ ನಮಗೆ ಉತ್ತರ ದೊರೆಯುವಂತಿರಬೇಕು :—

೧. ಪ್ರತಿದಿವಸ ಯಾವ ಯಾವ ಮತ್ತು ಎಷ್ಟು ಪುಸ್ತಕಗಳನ್ನು ಕೊಡಲಾಗಿದೆ ?

೨. ಯಾರಿಗೆ ಅವನ್ನು ಕೊಟ್ಟಿದೆ ?

೩. ಯಾವ ತಾರೀಖಿಗೆ ಅವು ಮರಳಿ ಬರಬೇಕಾಗಿದೆ ?

೪. ಯಾವದೊಂದು ಪುಸ್ತಕ ಯಾರಲ್ಲಿದೆ ?

೫. ಯಾವ ಯಾವ ಪುಸ್ತಕಗಳು ಮರಳಿ ಬರುವುದಕ್ಕೆ ತಡವಾಗಿವೆ?

೬. ಇಂಥ ಒಂದು ಪುಸ್ತಕವನ್ನು ಎಷ್ಟು ಜನ ಓದಿದ್ದಾರೆ?

೭. ಇಂಥ ಒಬ್ಬ ಓದುಗರು ಎಷ್ಟು ಪುಸ್ತಕ ಒಯ್ದಿದ್ದಾರೆ? ಅವರಲ್ಲಿ ಈಗ ಯಾವುವಿವೆ?

ಇವರಲ್ಲಿ ಕೊನೆಯ ಒಂದು ಪ್ರಶ್ನೆಯನ್ನು ಬಿಟ್ಟರೆ ಉಳಿದಾವುದಕ್ಕೂ ನಮಗೆ ಕೂಡಲೇ ಉತ್ತರ ದೊರೆಯುವುದಿಲ್ಲ. ಇಂಥ ಕಿಗ್ಗಳದ ಕ್ರಮವನ್ನು ನಾವು ಬಿಟ್ಟಷ್ಟು, ಅದರಿಂದ ಓದುಗರಿಗೂ ನಮಗೂ ಕೂಡಿಯೇ ಒಳ್ಳೆಯದು.

ವಿಶೇಷತಃ ಸಾರ್ವಜನಿಕ ಗ್ರಂಥಾಲಯಗಳಲ್ಲಿ ಪುಸ್ತಕಗಳು ಯಾವ ದಿನಕ್ಕೆ ಮರಳಿ ಬರಬೇಕು, ಹಾಗೆ ಬಾರದಿದ್ದರೆ ಅವರಿಗೆ ನೆನಪೋಲೆ ಬರೆಯಬೇಕಾದದ್ದಿದೆ ಎಂಬುದು ಗಮನದಲ್ಲಿರುವುದು ಅಗತ್ಯ. ಪುಸ್ತಕ ಯಾರು ಒಯ್ದರೇನಂತೆ? ಸದ್ಯದ ಪದ್ಧತಿಯಿಂದ ನಾವು ಈ ಕೊನೆಯ ಅಂಶಕ್ಕೇ ಪ್ರಾಶಸ್ತ್ಯ ಕೊಟ್ಟು ಅದಕ್ಕೊಂದು ಹೊರೆ ವೇಳೆಯನ್ನು ಹಾಳುಮಾಡಿ, ಇಷ್ಟು ಸಾಲದೆ, ನಮ್ಮ ಓದುಗರಲ್ಲಿ ವಿಶ್ವಾಸವಿಲ್ಲವೆನ್ನುವಂತೆ, ಅವರಿಂದ ಸಹಿಯನ್ನೂ ಗೀರಿಸಿಕೊಳ್ಳುವುದು ಎಂದಿಗೂ ಸರಿಯಲ್ಲ ಎಂದು ಒತ್ತಿ ಹೇಳಬೇಕಾಗಿದೆ.

## ಕಾರ್ಡಿನ ಪದ್ಧತಿ

ನಂ.......

ಕುಲಕರ್ಣಿ, ಪ್ರಲ್ಹಾದ ಹನುಮಂತ,
ಮಾಳಮಡ್ಡಿ, ಧಾರವಾಡ.

ದಯವಿಟ್ಟು ಈ ಕಾರ್ಡನ್ನು ಮಡಿಸಕೂಡದು.

ಇದನ್ನು ತೊಡೆದು ಹಾಕುವುದಕ್ಕೆ ಹೊಸ ಮಾರ್ಗವೆಂದರೆ ಮತ್ತೆ ಕಾರ್ಡಿನ ಪದ್ಧತಿಯನ್ನೇ ಆಚರಣೆಗೆ ತರುವುದು. ಈ ಪದ್ಧತಿಯ ಅನುಸರಣೆಗೆ ಪೂರ್ವಭಾವಿಯಾಗಿ ಕೆಲ ಸಿದ್ಧತೆಗಳು ನಡೆಯಬೇಕಾಗುತ್ತದೆ. ಅವೆಂದರೆ ಪ್ರತಿಯೊಬ್ಬ ಓದುಗರಿಗೆ ಅವರ 'ಗುರುತಿನ ಪತ್ರಕ' ಇರಬೇಕು. ಈ ಪತ್ರಕವು ಒಂದು ಕಾಗದ ಚೀಲದ ಹಾಗೆ ಇದ್ದು, ಒಳಗೆ ಇದಕ್ಕೂ ಸ್ವಲ್ಪ ಸಣ್ಣದಾದ, ಆದರೆ ಉದ್ದವಾದ

ಕಾರ್ಡುಗಳು ಹಿಡಿಯುವಂತಿರಬೇಕು. ಮತ್ತೆ, ಒಂದಕ್ಕಿಂತ ಹೆಚ್ಚು ಪುಸ್ತಕ ವನ್ನು ಕೊಡದೇ, ಒಂದು ಕಾರ್ಡನ್ನೇ ಉಪಯೋಗಿಸಬಹುದು.

| ಪ್ರಾ. ನಂ. ವರ್ಗೀ. ನಂ...... ಮಾಸ್ತಿ, ವೆಂಕಟೇಶ ಅಯ್ಯಂಗಾರ್. ಚೆನ್ನಬಸವ ನಾಯಕ. | | | |
|---|---|---|---|
| ತಾ. | ಸಹಿ | ತಾ. | ಸಹಿ |
| | | | |

ಎರಡನೆಯದಾಗಿ, ಪ್ರತಿ ಪುಸ್ತಕದ ಹೊದಿಕೆಯ ಒಳಗಿನ ಪುಟದಲ್ಲಿ ಒಂದು ಸಣ್ಣ ಜೇಬು ಇರಬೇಕು. ಇದರಲ್ಲಿ, ಪುಸ್ತಕದ ಗುರುತಿನ ಪತ್ರಕವನ್ನು ಇಡಲಾಗುತ್ತದೆ. ಪ್ರತಿ ಪುಸ್ತಕಕ್ಕೂ ಇಂಥ ಒಂದು ಪತ್ರಕವು ಸಿದ್ಧವಾಗಬೇಕು. ಕೊನೆಯದಾಗಿ, ಪ್ರತಿ ಪುಸ್ತಕದಲ್ಲಿ, ಆ ಸಣ್ಣ ಜೇಬಿನ ಎದುರು ಪುಟದಲ್ಲಿ ತಾರೀಖನ್ನು ಬರೆಯಲು ಅನುಕೂಲವಾಗುವಂತೆ ಬಿಳಿ ಕಾಗದವೊಂದನ್ನು ಆ ಪುಸ್ತಕಕ್ಕೆ ಅಂಟಿಸಬೇಕಾಗುವುದು.

ಇದರಲ್ಲಿ ವಿತರಣ ಕ್ರಮವು ಮಾತ್ರ ಸುಲಭವಾದುದು. ಮುಕ್ತದ್ವಾರ ಪದ್ಧತಿ ಇದ್ದರೆ, ಓದುಗ ತನಗೆ ಬೇಕಾದ ಪುಸ್ತಕವನ್ನು ತಂದು ವಿತರಣ ಕಟ್ಟೆಯಲ್ಲಿ ಕೊಡುವನು. ಅದು ಇಲ್ಲದಿದ್ದರೆ ಸಹಾಯಕನು ತರುತ್ತಾನೆ. ಜೊತೆಗೆ ಓದುಗನ ಕೈಯಲ್ಲಿ ಅವನ ಗುರುತಿನ ಪತ್ರಕವಿರುತ್ತದೆ. ಆಗ ಪುಸ್ತಕಗಳ ಕಾರ್ಡುಗಳನ್ನು ಅವುಗಳ ಜೇಬುಗಳಿಂದ ಹೊರತೆಗೆದು ಓದುಗನ ಪತ್ರಕದಲ್ಲಿ ಸೇರಿಸಿ ಇಟ್ಟರಾಯಿತು. ಆಮೇಲೆ ತಾರೀಖಿನ ಚೀಟಿಯ ಮೇಲೆ ತಾರೀಖನ್ನು ಒತ್ತಬೇಕು, ಅಲ್ಲಿಂದ ಓದುವ ಪುಸ್ತಕವನ್ನು ಒಯ್ಯಬಹುದು. ಅವನ ಸಹಿಯ ಅಗತ್ಯವಿಲ್ಲ. ಆ ಓದುಗನ ಪತ್ರಕಕ್ಕಿಂತ, ಪುಸ್ತಕದ ಕಾರ್ಡುಗಳು ತುಸು ಎತ್ತರವಾಗಿರುವುದರಿಂದ ವರ್ಗೀಕರಣ ನಂಬರು, ಪುಸ್ತಕದ ಹೆಸರು ಮೇಲೆ ಕಾಣಿಸುತ್ತವೆ. ಮುಂದೆ, ಓದುಗನ ಪತ್ರಕದೊಡನೆ ಸೇರಿದ ಈ ಕಾರ್ಡುಗಳನ್ನು ವಿಷಯವಾರ ವರ್ಗೀಕರಿಸಿ ಬದಿಯಲ್ಲಿನ ಒಂದು ತಡಿಕೆಯಲ್ಲಿ ಇಡಬೇಕು. ಇಲ್ಲಿ, ಆ ಆ ತಾರೀಖಿನ ಮುಂದೆ ಉಲ್ಲೇಖವುಳ್ಳ

ಬೇರೊಂದು ಕಾರ್ಡಿನ ಹಿಂಬದಿ ಇವುಗಳನ್ನು ಇಡಲಾಗುತ್ತದೆ. ಮತ್ತು ಪ್ರತಿ ದಿನ ಎಷ್ಟು ಪುಸ್ತಕ ಕೊಡಲಾಯಿತೆನ್ನುವುದರ ದಾಖಲೆಯನ್ನು ಸಾಯಂಕಾಲ ತುಂಬಬೇಕು. (ಈ ಗ್ರಂಥವಿತರಣ ದಾಖಲೆಯ ನಮೂನೆಗೆ ಪು. ೨೨೪ ನೋಡಿರಿ.)

ಇನ್ನು ಪುಸ್ತಕಗಳು ಮರಳಿ ಬಂದಾಗ, ಅದರಲ್ಲಿ ಬರೆದ ತಾರೀಖನ್ನು ನೋಡಿಕೊಂಡು ವರ್ಗೀಕರಣ ನಂಬರಿನ ಅನುಸಾರವಾಗಿ ಕಾರ್ಡನ್ನು ಅವೇ ತಾರೀಖಿನ ಇತರ ಕಾರ್ಡುಗಳಿಂದ ಬೇರೆ ತೆಗೆದು, ಓದುಗನ ಕಾರ್ಡನ್ನು ಅವನಿಗೆ ಮರಳಿ ಕೊಡಬೇಕು; ಮತ್ತು ಪುಸ್ತಕಗಳ ಕಾರ್ಡುಗಳನ್ನು ಪುಸ್ತಕಗಳಲ್ಲಿ ಪುನಃ ಸೇರಿಸಬೇಕು.

## ಇನ್ನೊಂದು ಸುಲಭ ಪದ್ಧತಿ

ತೀರ ಸಣ್ಣ ಪುಸ್ತಕಭಂಡಾರವಿದ್ದರೆ ಮೇಲೆ ವಿವರಿಸಿದ ಪದ್ಧತಿಗೆ ವೆಚ್ಚ ಬಹಳ ತಗಲುವುದು. ಇದು ಅತಿ-ವ್ಯವಸ್ಥೆಯೆನಿಸಬಹುದು. ಅದಕ್ಕಾಗಿ ಕಾರ್ಡುಗಳ ಬದಲಾಗಿ ಪುಸ್ತಕರೂಪದಲ್ಲೇ ವಿತರಣ ದಾಖಲೆಯನ್ನು ಇಟ್ಟು ಇತರ ಪ್ರಯೋಜನಗಳನ್ನು ಸಾಧಿಸಿಕೊಳ್ಳಲು ಸಾಧ್ಯವಾಗುವುದಕ್ಕೆಂದು ಇನ್ನೊಂದು ರೀತಿಯನ್ನು ಇಲ್ಲಿ ಹೇಳಬಹುದು. ಇದಕ್ಕೆ ಪೂರ್ವಸಿದ್ಧತೆಯೆಂದು ಓದುಗರ ಗುರುತಿನ ಪತ್ರಕವು ಹಾಗೂ ಪುಸ್ತಕದ ಕೊನೆಯ ಪುಟದ ನಂತರದ ಪುಟಕ್ಕೊಂದು ತಾರೀಖಿನ ಚೀಟಿ ಇಟ್ಟಿದ್ದರೆ ಸಾಕು. (ಈ ಬಗೆಯ ವಿತರಣ ದಾಖಲೆಯ ಅಂಕಣಗಳಿಗೆ ಪು. ೨೨೫ ನೋಡಿರಿ.)

ಪುಸ್ತಕಗಳನ್ನು ಕೊಡುವಾಗ ಈ ನಮೂನೆಯಲ್ಲಿ ವಿವರಗಳನ್ನು ಬರೆದುಕೊಂಡು, ಮೇಲೆ ಹೇಳಿದ ತಾರೀಖಿನ ಚೀಟಿಯ ಮೇಲೆ ತಾರೀಖನ್ನು ಹೊಡೆದು ಪುಸ್ತಕಗಳನ್ನು ಕೊಡಬೇಕು. ಮತ್ತು ಓದುಗರ ಕಾರ್ಡನ್ನು ತೆಗೆದುಕೊಂಡು ಆ ತಾರೀಖಿನ ಹಿಂದುಗಡೆಯಲ್ಲಿ ಅನುಕ್ರಮವಾಗಿ ಹೊಂದಿಸಿಡಬೇಕು. ಪುಸ್ತಕ ಮರಳಿ ಬಂದೊಡನೆ ಆ ತಾರೀಖನ್ನು ನೋಡಿಕೊಂಡು, ಆವತ್ತಿನ ದಿನದ ಪುಟ ತೆರೆದು ಪರತು ಬಂದ ತಾರೀಖನ್ನು ಕಾಣಿಸಬೇಕು. ನಂತರ ಓದುಗರ ಕಾರ್ಡನ್ನು ಅವರಿಗೆ ಕೊಡಬೇಕು. ಓದುಗರ ಕಾರ್ಡು ನಮ್ಮಲ್ಲಿರುವಾಗ್ಯ ಪುಸ್ತಕಗಳನ್ನು ಅವರು ಒಯ್ದಿದ್ದಾರೆ ಎಂದು ಲೆಕ್ಕ.

## ಗ್ರಂಥವಿತರಣ ದಾಖಲೆ (ಸುಲಭ ಪದ್ಧತಿ)

| ಅ. ಸಂ. | ಓದುಗರ ಪತ್ರಕ ಸಂ. | ಪುಸ್ತಕಗಳ ನಂಬರು | | | ಬಂದ ತಾ. | ಶರಾ |
|---|---|---|---|---|---|---|
| | | ೧ | ೨ | ೩ | | |
| | | | | | | |

ಇದರಿಂದ ಈ ಹಿಂದೆ ಹೇಳಿದ ವಿತರಣ ಕಾರ್ಯದ ಪ್ರಶ್ನೆಗಳಿಗೆ ಎಷ್ಟು ಉತ್ತರ ದೊರೆಯುವುದೆಂಬುದನ್ನು ನೋಡುವ. ಪ್ರತಿ ದಿನ ಯಾವ ಯಾವ ಮತ್ತು ಎಷ್ಟು ಪುಸ್ತಕಗಳನ್ನು ಕೊಡಲಾಗಿದೆಯೆಂಬುದು, ದಿವಸದ ಕೊನೆಗೆ ಬೇರೀಜು ಮಾಡಿದಲ್ಲಿ ತಿಳಿಯುತ್ತದೆ. ಓದುಗರ ನಂಬರು ಇರುವುದರಿಂದ ಯಾರಿಗೆ ಅದನ್ನು ಕೊಟ್ಟಿದೆಯೆಂಬುದನ್ನು ಕಾಣಬಹುದು. ತಾರೀಖುವಾರ ಹೊಂದಿಸಿಡುವುದರಿಂದ, ಅವು ಮರಳಿ ಬರಬೇಕಾದುದು ತಡವಾಯಿತು, ಇಲ್ಲ ಇನ್ನೂ ದಿವಸಗಳಿವೆ ಎಂಬುದೂ ಗೊತ್ತಾಗುವುದು. ಇಂಥ ಒಂದು ಪುಸ್ತಕ ವನ್ನು ಎಷ್ಟು ಜನ ಓದಿದ್ದಾರೆಂಬುದು ಆ ತಾರೀಖಿನ ಚೀಟಿಯ ಮೇಲಿಂದ ಗೊತ್ತಾಗುತ್ತದೆ. ಆದರೆ ಇಂಥ ಒಂದು ಪುಸ್ತಕ ಯಾರಲ್ಲಿದೆ ಎಂಬುದು ತಟ್ಟನೇ ತಿಳಿಯುವುದಿಲ್ಲ. ತುಸು ಹುಡುಕಬೇಕಾಗುವುದು.

ಯಾವ ಪದ್ಧತಿಯನ್ನೆ ಅನುಸರಿಸಲಿ, ಈ ಸರಸ್ವತಿಯ ಮಂದಿರದಲ್ಲಿ ಕಾಲಿಟ್ಟವರಿಗೆ ಸಮಾಧಾನ ದೊರೆಯುವಂತಾಗಬೇಕು. ಪುಸ್ತಕಾಲಯ ಸೇವೆಯ ಅಂತಿಮ ಘಟ್ಟವೆನ್ನಬಹುದಾದ ಈ ಕಾರ್ಯದಲ್ಲಿ ಓದುಗನಿಗೆ ಅನಾನು ಕೂಲವಾದರೆ, ನಿಯತಕ್ರಮದಲ್ಲಿ ಕುಂದು, ಕೊರತೆ ಉಳಿಯುವಂತಾದರೆ ಏನು ಪ್ರಯೋಜನ ? ಆದುದರಿಂದ ಸಹಾಯಕವರ್ಗ ಓದುಗರೊಟ್ಟಿಗೆ ಸಾದರ ಭಾವದಿಂದ ನಡೆದುಕೊಳ್ಳಬೇಕು. ಅನವಶ್ಯಕ ಅವಸರ ಪಡದೆ ಲಕ್ಷ್ಯಪೂರ್ವಕ ವಾಗಿ ವಿತರಣಕಾರ್ಯವನ್ನು ನಡೆಸಬೇಕು.

## ೪. ವಾರ್ಷಿಕ ಕಾರ್ಯಗಳು

ದಿನನಿತ್ಯ ಮಾಡಿದ ಪುಸ್ತಕಾಲಯ ಕೈಂಕರ್ಯ ಯಾವ ಹಾದಿ ಹಿಡಿ ದಿದೆ, ಅದು ಪ್ರಗತಿದಾಯಿಯಾಗಿದೆಯೇ ಎಂಬುದನ್ನು ಆಗಾಗ ನೋಡುವುದು ಅಗತ್ಯ. ಅದಕ್ಕಾಗಿ ಕೆಲವು ಅಂಕಿಸಂಖ್ಯೆಗಳು ಕಾಲಕಾಲಕ್ಕೆ ನಮಗೆ ದೊರೆ ಯುವಂತಿರಬೇಕು. ಈ ಅಂಕಿಸಂಖ್ಯೆಗಳ ಕೆಲಸ ಮುಖ್ಯವಾಗಿ ಓದುಗರು ಮತ್ತು ಪುಸ್ತಕಗಳು ಇವುಗಳಿಗೆ ಸಂಬಂಧಪಟ್ಟದ್ದಾಗಿರುತ್ತದೆ.

ನಮ್ಮ ಗ್ರಂಥಾಲಯದಲ್ಲಿ ಒಟ್ಟು ಎಷ್ಟು ಪುಸ್ತಕಗಳಿವೆ ಎಂಬುದಾಗಿ ವಿಷಯವಾರ ಸಂಖ್ಯೆಯು ನಮಗೆ ದೊರೆಯುವಂತಿರಬೇಕು. ಇದರಿಂದ

ಯಾವೊಂದು ವಿಭಾಗದಲ್ಲಿ ನಾವು ಸಾಕಷ್ಟು ಪುಸ್ತಕಗಳನ್ನು ತರಿಸದೇ ಇದ್ದುದು, ಅಥವಾ ಇನ್ನು ಕೆಲಬಗೆಯ ವಿಷಯಗಳಿಗೆ ಅತಿಮಹತ್ವ ಕೊಟ್ಟು ಅವುಗಳ ಮೇಲಿನ ಪುಸ್ತಕಗಳನ್ನು ಹೆಚ್ಚು ಪ್ರಮಾಣದಲ್ಲಿ ಸೇರಿಸಿದುದು ಗೊತ್ತಾಗುತ್ತದೆ. ಹೀಗೆ ಗ್ರಂಥಸಂಗ್ರಹವನ್ನು ಪ್ರಮಾಣಬದ್ಧವಾಗಿಡಲು ಇದು ತುಂಬಾ ಸಹಾಯಕಾರಿಯಾಗಿರುತ್ತದೆ. ಎರಡನೆಯದಾಗಿ, ಒಂದು ನಿರ್ದಿಷ್ಟ ಅವಧಿಯಲ್ಲಿ ಎಷ್ಟು ಪುಸ್ತಕಗಳನ್ನು ಕೊಡಲಾಗಿದೆ ಎಂಬುದರ ಅಂಕಿಸಂಖ್ಯೆಗಳೂ ದೊರೆಯುವಂತಿರಬೇಕು ಅದು ವಿತರಣ ದಾಖಲೆಯಿಂದ ಬೇಗ ತಿಳಿಯುತ್ತದೆ.

ಇನ್ನು ಎಷ್ಟು ಜನ ಓದುಗರು ಪ್ರತಿದಿವಸ ಬಂದರೆಂಬುದನ್ನೂ, ಅವರು ಒಯ್ದ ಪ್ರತಿಪುಸ್ತಕಗಳ ಸಂಖ್ಯೆಯನ್ನೂ ಪ್ರತಿದಿನ ಗುರುತಿಸಿಕೊಳ್ಳಬೇಕಾಗುತ್ತದೆ. ಅದಕ್ಕಾಗಿಯೇ ಅನೇಕ ಗ್ರಂಥಾಲಯಗಳಲ್ಲಿ ಓದುಗರು ಒಳಕ್ಕೆ ಬಂದೊಡನೆಯೇ ಅವರ ಸಹಿಯನ್ನು ತೆಗೆದುಕೊಳ್ಳುವುದುಂಟು.

ಓದುಗರ ವಿಚಾರದಲ್ಲಿ, ಸಾಮಾನ್ಯವಾಗಿ ಇಷ್ಟು ಜನ ಓದುಗರಿದ್ದಾರೆ ಎಂಬುದಷ್ಟೇ ತಿಳಿದರೆ ಸಾಕೆಂಬ ಭಾವನೆ ತಪ್ಪಾದುದು. ಒಟ್ಟು ಸಂಖ್ಯೆಯ ಜೊತೆಗೆ, ಅಪ್ಪಿತಪ್ಪಿ ಮಾತ್ರ ಈ ಕಡೆ ಹಾಯ್ದವರು ಯಾರೆಂದು ಕಂಡುಹಿಡಿಯುವ ಅನುಕೂಲತೆ ಇರಬೇಕು. ಎಲ್ಲರಿಗೂ ಎಲ್ಲ ಬಗೆಯವರಿಗೂ ಪುಸ್ತಕಾಲಯ ಸೇವೆ ವಿಸ್ತರಣಗೊಳ್ಳುವುದಿರುವಾಗ, ಅದರಲ್ಲಿ ಯಾರು ಹಿಂದೆ ಉಳಿದಿದ್ದಾರೆ ಎಂಬುದನ್ನು ಕಂಡುಹಿಡಿಯಬಹುದಾದ ವಿವರಗಳನ್ನು ಭಂಡಾರಿಗ ಕಲೆಹಾಕಿರಬೇಕು. ಅವರಿಂದ ಬರುವ ವರ್ಷದಲ್ಲಿ ಪ್ರಚಾರ ಕಾರ್ಯವನ್ನು ಕೈಕೊಂಡು ಅವರನ್ನೂ ಗ್ರಂಥಾಲಯಾಸಕ್ತರನ್ನಾಗಿ ಪರಿವರ್ತಿಸಬಹುದು.

## ವಾರ್ಷಿಕ ವರದಿ

ಅಂಕಿಸಂಖ್ಯೆಗಳಿಂದ ಹೊರಡುವ ಮಾಹಿತಿಯನ್ನೆ ಬೆನ್ನೆಲುಬಾಗಿಟ್ಟುಕೊಂಡು ಪುಸ್ತಕಾಲಯದ ವಾರ್ಷಿಕ ವರದಿ ಸಿದ್ಧವಾಗಬೇಕಾಗುತ್ತದೆ. ವಾರ್ಷಿಕ ವರದಿಯು, ಸರಕಾರದಿಂದ ಹಿಡಿದು ಅತಿ ಸಣ್ಣ ಸಂಸ್ಥೆಗೂ ಅನಿವಾರ್ಯವಾದುದು. ನೀವೇನು ಮಾಡಿದ್ದೀರಿ ಎಂದು ಸದಸ್ಯರು ಕೇಳಿದಾಗ, 'ಇಕೊಳ್ಳಿ, ಇದು ನಮ್ಮ ಸೇವೆ' ಎಂದು ಸೌಮ್ಯವಾಗಿ ತೋರಿಸಿಕೊಡುತ್ತದೆ, ಈ ವರದಿ.

ಹತ್ತೆಂಟು ಅಂಕಿಸಂಖ್ಯೆಗಳನ್ನು ತುಂಬಿ, ವರದಿಯನ್ನು ನೀರಸಗೊಳಿಸಬಾರದು. ಹಾಗೆಂದು ಅದೇನು ಸಾಹಿತ್ಯಿಕ ಪ್ರಬಂಧವಾಗಬೇಕಿಲ್ಲ. ಓದಬೇಕೆನ್ನಿಸುವಂತೆ ವರದಿಯ ನಿರೂಪಣೆ ಇರಬೇಕು. ಎಂದರೆ ಅದು ಚಿಕ್ಕದಾಗಿ ಚೊಕ್ಕಟವಾಗಿರಬೇಕು. ಅದಕ್ಕಾಗಿ ವರದಿಯಲ್ಲಿ ನಿರ್ದಿಷ್ಟವಾಗಿ ಎರಡು ಭಾಗಗಳನ್ನು ಮಾಡಬೇಕು. ಒಂದು ಕಥನಾತ್ಮಕ, ಇನ್ನೊಂದು ಸಂಖ್ಯಾತ್ಮಕ. ಕಥನಾತ್ಮಕ ಭಾಗದಲ್ಲಿ ಸಾಹಿತ್ಯಿಕ ಶೈಲಿಯನ್ನೇ ಇಳಿಸದೇ, ತಿಳಿಯಾಗಿ ಪುಸ್ತಕಾಲಯ ಕಾರ್ಯವನ್ನು ವಿದಿತಪಡಿಸಬೇಕು. ಅಂಕಿ ಸಂಖ್ಯೆಗಳನ್ನು ಕೊನೆಗೆ ಇಟ್ಟುಬಿಟ್ಟರೆ ಬೇಕಿದ್ದವರು ನೋಡಿಕೊಳ್ಳುತ್ತಾರೆ. ಅಲ್ಲದೆ ಅವು ಸಮಾರೋಪದಲ್ಲಿ ಕಥನಾತ್ಮಕದೊಳಗೆ ಸೇರಿಕೊಂಡೇ ಇರುತ್ತವೆ.

ಒಂದು ವರದಿಯಲ್ಲಿ ಇರಬೇಕಾದ ವಿಷಯಗಳನ್ನು ಈ ಕೆಳಗೆ ಹೇಳಿದೆ.

೧. **ಪುಸ್ತಕ ಸಂಗ್ರಹ :** ಹೊಸದಾಗಿ ಸೇರಿಸಿದ ಒಟ್ಟು ಪುಸ್ತಕಗಳ ಸಂಖ್ಯೆಯಂತೂ ಸರಿಯೇ. ಆದರೆ ಅವುಗಳಲ್ಲಿ ಅತಿ ಮಹತ್ವದ ಪುಸ್ತಕಗಳನ್ನು ಕೊಂಡಿದ್ದರೆ ಅವನ್ನು ಕಾಣಿಸಬೇಕು. ಹಾಗೆಯೇ ಒಟ್ಟು ಸಂಗ್ರಹದಿಂದ ಹಿಂತೆಗೆದ ಮತ್ತು ಕಳೆದುಹೋದ ಪುಸ್ತಕಗಳ ಸಂಖ್ಯೆಯನ್ನೂ ಕೊಡಬೇಕು. ದಾನವಾಗಿ ಪುಸ್ತಕ ಕೊಟ್ಟವರ ಸಂಖ್ಯೆ ದೊಡ್ಡದಿದ್ದರೆ ಕೊನೆಯಲ್ಲಿ ಅವರೆಲ್ಲರನ್ನು ಹೆಸರಿಸಬಹುದು. ಆದರೆ ಮಹತ್ವದ ಕೊಡುಗೆಗಳ ಉಲ್ಲೇಖ ಕಥಾನಕ ಭಾಗದಲ್ಲಿ ಬಂದಿರಬೇಕು.

೨. **ಸದಸ್ಯತ್ವ :** ಹಿಂದಿನ ವರ್ಷದ ಸಂಖ್ಯೆಯೊಡನೆ ಹೋಲಿಸಿ ಈ ಸಲದ ಸದಸ್ಯತ್ವದ ಸಂಖ್ಯೆಯನ್ನು ಕೊಡಬೇಕು. ಸಾಧ್ಯವಾದರೆ ಮಕ್ಕಳು, ಸ್ತ್ರೀಯರು, ವಿದ್ಯಾರ್ಥಿಗಳು ಎಂಬುದಾಗಿ ಬೇರೆ ಅಂಕಿಗಳನ್ನು ಕೊಟ್ಟರೆ ಒಳ್ಳೆಯದು.

೩. **ಪುಸ್ತಕ ವಿತರಣ :** ಮೇಲೆ ಹೇಳಿದ ವಿತರಣ ದಾಖಲೆಯ ಪ್ರಯೋಜನ ಇಲ್ಲಿ ಬರುತ್ತದೆ. ಇದರಿಂದ ಓದುಗರ ಅಭಿರುಚಿಯನ್ನು ಕಂಡು ಹಿಡಿದು, ವರದಿಯೊಳಗೆ ತುಸುದರಲ್ಲಿ ಈ ವಿಷಯವನ್ನು ಕೊಡಬೇಕು. ವಿತರಣ ಕಾರ್ಯದಲ್ಲಿ ಸೌಲಭ್ಯಗಳನ್ನೇನಾದರೂ ಒದಗಿಸಿದ್ದರೆ ಅವನ್ನೂ ನಿವೇದಿಸಬೇಕು.

೪. **ಸಹಾಯಕ ವರ್ಗ:** ಪುಸ್ತಕಭಂಡಾರದಲ್ಲಿ ಕೆಲಸ ಮಾಡು ವವರ ಸಂಖ್ಯೆಯಲ್ಲಿ ಬದಲಾವಣೆಯಾಗಿದ್ದರೆ, ಟ್ರೇನಿಂಗಿಗೆ ಯಾರನ್ನಾದರೂ ಕಳಿಸಿದ್ದರೆ, ಅಥವಾ ವಿಶಿಷ್ಟ ಕಾರ್ಯವನ್ನೇನಾದರೂ ಈ ಸಹಾಯಕವರ್ಗ ಕೈಕೊಂಡಿದ್ದರೆ ಅವನ್ನು ಉಲ್ಲೇಖಿಸಬೇಕು.

೫. **ಹಣಕಾಸಿನ ವಿಚಾರ:** ವಾರ್ಷಿಕ ಲೆಕ್ಕಾಚಾರಪತ್ರಗಳನ್ನು ತೀರ ಕೊನೆಯಲ್ಲಿ ಕೊಡುತ್ತಿದ್ದರೂ ಒಟ್ಟಿನ ಸಾಂಪತ್ತಿಕ ಸ್ಥಿತಿಯ ಚಿತ್ರಣ ವನ್ನು ಇಲ್ಲಿ ಹೇಳಿರಬೇಕು. ಆರ್ಥಿಕ ಪರಿಸ್ಥಿತಿಯ ಸುಧಾರಣೆಗಾಗಿ ಮನವಿ ಮಾಡಿಕೊಳ್ಳುವುದೂ ಇಲ್ಲಿಯೇ. ಮತ್ತು ಇದೇ ಕೊನೆಯ, ಆದರೆ ಮಹತ್ವದ ವಿಷಯ.

## ಸಂಗ್ರಹ ಪರಿಶೀಲನೆ

ಸಾಮಾನ್ಯವಾಗಿ ವರ್ಷಕ್ಕೊಮ್ಮೆ ಪುಸ್ತಕ ಸಂಗ್ರಹದ ಪರಿಶೀಲನೆ ನಡೆಯುವುದರಿಂದ ಎಲ್ಲ ಪುಸ್ತಕಗಳು ನಮ್ಮಲ್ಲಿ ಇವೆಯೇ ಎಂಬುದು ಗೊತ್ತಾ ಗುತ್ತದೆ. ಗೊತ್ತಾಗದೆ ನಡೆಯುವಂತಿಲ್ಲ; ಏಕೆಂದರೆ ಯಾವುದೇ ಉದ್ಯಮಕ್ಕೆ ಇದೊಂದು ಪ್ರಾಥಮಿಕ ಆವಶ್ಯಕತೆ. ಇದು ಅಲ್ಲದೆ ಪರಿಶೀಲನೆಯ ಕಾಲಕ್ಕೆ ಯಾವ ಯಾವ ಪುಸ್ತಕಗಳು ಗಟ್ಟಿಮುಟ್ಟಾದ ಸ್ಥಿತಿಯಲ್ಲಿಲ್ಲ ಎಂಬುದನ್ನೂ ಕಾಣಬಹುದು. ಇನ್ನೊಂದು ಪ್ರಯೋಜನವೆಂದರೆ, ಕೆಲ ಪುಸ್ತಕಗಳು ಕಪಾಟಿ ನಲ್ಲಿ ನಿರ್ದಿಷ್ಟಸ್ಥಾನದಲ್ಲಿರದೇ ತಪ್ಪಿ ಇನ್ನೆಲ್ಲೋ ಹುದುಗಿಕೊಂಡಿರುತ್ತವೆ. ಅವೀಗ ಹೊರಬರುವಂತಾಗುವುದು.

ಸಂಗ್ರಹ ಪರಿಶೀಲನೆಯ ಸಮಯಕ್ಕೆ ಆವಶ್ಯಕವಾದ ಸಾಧನವೆಂಬು ದಾಗಿ ಪ್ರತ್ಯೇಕವಾಗಿ ಒಂದು ಪಟ್ಟಿ ಇರಬೇಕಾಗುತ್ತದೆ. ಪ್ರಾಥಮಿಕ ದಾಖಲೆ ಯನ್ನು ನಾವು ಈ ಕೆಲಸಕ್ಕೆ ಉಪಯೋಗಿಸುವಂತಿಲ್ಲ. ಸೂಚಿಯದಂತೂ ಮೊದಲೇ ಇಲ್ಲ. ಆದ್ದರಿಂದ ಕಪಾಟಿನಲ್ಲಿ ಪುಸ್ತಕಗಳನ್ನಿಟ್ಟ ಕ್ರಮದಲ್ಲಿಯೇ ಒಂದು ಪಟ್ಟಿ ಸಿದ್ಧವಾಗಬೇಕು. ಬೇರೆ ಇಂಥ ಒಂದು ಪಟ್ಟಿಯನ್ನು ತಯಾರಿ ಸುವುದೂ ಉಂಟು. ಆರ್ಡರ ಕೊಡುವ ಕಾಲಕ್ಕೆ ಸಿದ್ಧವಾಗಿರುವ ಕಾರ್ಡನ್ನು ಈ ಕೆಲಸಕ್ಕೆ ಉಪಯೋಗಿಸುವುದೂ ಇದೆ.

ನಿಜವಾದ ಪರಿಶೀಲನೆ ನಡೆದಾಗ ಇಬ್ಬರು ಸಹಾಯಕರು ಬೇಕಾಗು ತ್ತಾರೆ. ಒಬ್ಬ ಪುಸ್ತಕವನ್ನು ಹೊರತೆಗೆದು ಅದರ ನಂಬರನ್ನು ಹೇಳುವನು.

ಇನ್ನೊಬ್ಬ ಆ ಪತ್ರಕದಲ್ಲಿ ಅಥವಾ ಪಟ್ಟಿಯಲ್ಲಿ ಗುರುತು ಹಾಕಿ ಬೇರೆಡೆ ಇಡುವನು. ಪುಸ್ತಕದಲ್ಲಿಯೂ ಒಂದು ಮೂಲೆಯಲ್ಲಿ ಇಂಥ ಒಂದು ಸಣ್ಣ ಗುರುತು ಅಗತ್ಯ. ಒಂದು ಪುಸ್ತಕದ ಒಂದಕ್ಕಿಂತ ಹೆಚ್ಚು ಪ್ರತಿಗಳಿದ್ದರೆ, ಇನ್ನೊಬ್ಬ ಜೊತೆಗಾರ ತಾನಾಗಿ ಅದನ್ನು ಹೇಳಬೇಕು. ಏಕೆಂದರೆ ಕೈಯಲ್ಲಿ ಪಟ್ಟಿ ಹಿಡಿದುಕೊಂಡವನಿಗೆ ದ್ವಿಪ್ರತಿಯು ಥಕ್ಕನೇ ಗೊತ್ತಾಗದೇ ಹೋಗಬಹುದು. ಈ ರೀತಿ ಪ್ರತಿಪುಸ್ತಕದ ಚೆಕಿಂಗ್ ನಡೆದಾಗಲೆ ಅದನ್ನು ಹೊರ ತೆಗೆದು, ಅದಕ್ಕೆ ಏನಾದರೂ ರಿಪೇರಿ ಆಗಬೇಕೆ ಎಂದು ಪರಿಶೀಲಿಸಬೇಕು.

ಕಪಾಟಿನಲ್ಲಿಯ ಪುಸ್ತಕಗಳ ಕಾರ್ಯ ಮುಗಿದಾಗ, ಇನ್ನೂ ಎಷ್ಟೋ ಪುಸ್ತಕಗಳಿಗೆ ಲೆಕ್ಕ ಹತ್ತದೇ ಹೋಗುತ್ತದೆ. ಆಗ ವಿತರಣ ದಾಖಲೆಯಲ್ಲಿ ಯಾವವು ಇವೆ ಎಂಬುದನ್ನು ನೋಡಿ ಗುರುತು ಹಾಕಬೇಕು. ಅಲ್ಲಿಂದ ಬೈಂಡಿಂಗ್ ದಾಖಲೆಯನ್ನೂ, ಓದುಗರು ಕಳೆದು ಬೆಲೆ ಕೊಟ್ಟ ಪುಸ್ತಕಗಳ ಪಟ್ಟಿಯನ್ನೂ, ಹಿಂತೆಗೆಯಲಾದ ಪುಸ್ತಕಗಳ ದಾಖಲೆಯನ್ನೂ ನೋಡಬೇಕು. ಇಷ್ಟೆಲ್ಲ ಆಗಿ ಉಳಿದ ಪುಸ್ತಕಗಳು ಕಳೆದಿವೆಯೆಂಬುದಾಗಿ ತಿಳಿಯುತ್ತೇವಷ್ಟೆ,—ಇಂಥವುಗಳ ಕೊನೆಯ ವರದಿ ಸಿದ್ಧಗೊಳಿಸುವಾಗ ಕೆಲ ದಿನ ಕಾಯ್ದು, ಇನ್ನೊಮ್ಮೆ ನೋಡಿಕೊಂಡೇ ಆ ಕ್ರಮವನ್ನು ಮುಗಿಸುವುದಿದೆ. ಕೆಲವು ಪುಸ್ತಕಗಳು ಹೇಗೋ ತಿರುಗಿ ಬರುವ ಸಂಭವವೂ ಇರುತ್ತವೆ !

ಹೀಗೆ ಕಳೆದುಹೋದ ಪುಸ್ತಕಗಳೆಲ್ಲವನ್ನೂ ಮತ್ತೆ ಕೊಂಡುಕೊಂಡು ಭರತಿ ಹಾಕಬೇಕಾದ ಕಾರಣವಿಲ್ಲ. ಯಾವುವು ಅವಶ್ಯವಾಗಿವೆಯೋ ಅಷ್ಟನ್ನು ಕೊಂಡರೆ ಸಾಕು. ಕೊನೆಯದಾಗಿ ಇನ್ನೊಂದು ಸೂಚನೆ. ಪರಿಶೀಲನೆಯ ಕಾಲಕ್ಕೆ ಗ್ರಂಥಾಲಯವನ್ನು ಪೂರ್ಣ ಮುಚ್ಚುವುದು ಬೇಡ. ಒಂದೊಂದು ವಿಭಾಗದಲ್ಲಿ ಮಾತ್ರ ಪರಿಶೀಲನೆಯನ್ನು ಕೈಕೊಂಡು ಅಷ್ಟಷ್ಟರ ಮಟ್ಟಿಗೆ ವಿತರಣವನ್ನು ನಿಲ್ಲಿಸಿ ಪರಿಶೀಲನೆಯನ್ನು ನಡೆಸಬಹುದಲ್ಲವೆ ?

---

# ೪. ವರ್ಗೀಕರಣ



## ೧. ತಾತ್ವಿಕ ವಿವೇಚನೆ

ಇಂದು ನಮ್ಮಲ್ಲಿ ಗ್ರಂಥಾಲಯದ ಉಪಯೋಗ ಮಾಡಿಕೊಳ್ಳುವವರಿಗೂ, ಮಾಡಿಕೊಡುವವರಿಗೂ ವರ್ಗೀಕರಣದ ಕಲ್ಪನೆ ಇರುವುದು ಇಷ್ಟೇ—ಒಟ್ಟು ಪುಸ್ತಕಗಳನ್ನು ಕವಿತೆ, ಕಾದಂಬರಿ, ಕತೆ, ನಾಟಕ, ವೇದಾಂತ-ಧರ್ಮ, ಶಾಸ್ತ್ರ, ಸಮ್ಮಿಶ್ರಗದ್ಯ ಎಂದು ಮುಂತಾಗಿ ವಿಂಗಡಿಸಿ, ಪುಸ್ತಕಗಳನ್ನು ಮುಂದೆ ಬಂದಹಾಗೆಲ್ಲ ಅದೇ ಕ್ರಮದಲ್ಲಿ ಸೇರಿಸಿಕೊಂಡು, ಈ ಭಾಗಗಳಲ್ಲಿ ಅವಕ್ಕೆ ಅಂಕಿಗಳನ್ನು ಕೊಡುತ್ತ ಹೋದರಾಯಿತು. ಕೆಲಕಡೆಗೆ ಗ್ರಂಥಕಾರರ ಅಥವಾ ಪುಸ್ತಕದ ಹೆಸರಿನ ಅಕ್ಷರಾನುಕ್ರಮದಲ್ಲಿ ಅಂಕಿಗಳನ್ನು ಹಾಕುವುದು ಕಂಡುಬರುತ್ತದೆ. ಆದರೆ ಪತ್ರಕಗಳ ಪದ್ಧತಿಯ ಸೂಚಿಯು ಇಲ್ಲದಿರುವುದರಿಂದ, ಪುಸ್ತಕ ಬಂದ ಕ್ರಮದಲ್ಲೇ ಮುಂದಕ್ಕೆ ಸೇರಿಸದೇ ಗತಿಯಿಲ್ಲ. ಈ ವ್ಯವಸ್ಥೆಯಲ್ಲಿ ಓದುಗರು ತಮಗೆ ಬೇಕಾದ ಒಂದು ಪುಸ್ತಕಕ್ಕಾಗಿ ಉದ್ದಕ್ಕೆ ಸೂಚಿಯನ್ನು ನೋಡುತ್ತ ಹೋಗಬೇಕು. ಸಿಗದಿದ್ದರೆ ಇನ್ನೊಮ್ಮೆ ಹುಡುಕಬೇಕು. ಕೆಲವು ಸಲ ಆ ಪುಸ್ತಕವು ತನ್ನ ವಿಷಯವಿಭಾಗದಲ್ಲೇ ಇರುವುದಿಲ್ಲ. ರಾಮಕೃಷ್ಣ ಪರಮಹಂಸರ ಬಗ್ಗೆ ತಿಳಿದುಕೊಳ್ಳಬೇಕೆಂದು ಒಬ್ಬ ಓದುಗ ಬಯಸಿದರೆ, ಅವರ ಆಧ್ಯಾತ್ಮಿಕ ತತ್ವಗಳನ್ನು ತಿಳಿಯಲು ಒಂದು ವಿಭಾಗವನ್ನು ನೋಡಬೇಕು. ಅವರ ಚರಿತ್ರೆಗೆ ಇನ್ನೊಂದು ವಿಭಾಗ ನೋಡಬೇಕು. ತತ್ವವನ್ನಳವಡಿಸಿಕೊಂಡು ಕಥಾರೂಪದಲ್ಲಿ ಹೇಳಿದ ಅವರ ಉಪದೇಶಗಳಿಗೆ ಕತೆ, ಕಾದಂಬರಿಗಳ ವಿಭಾಗವನ್ನು ಬೆದಕಬೇಕು. ಇನ್ನು ಅವರ ಮೇಲೆ ಬರೆದ ವಿಮರ್ಶಾತ್ಮಕ ಪ್ರಬಂಧ ಬೇಕಾದರೆ ಸಂಮ್ಮಿಶ್ರ ಗದ್ಯವೇ ಗತಿ!

ಇದರಿಂದ ವರ್ಗೀಕರಣಕ್ಕೆ ಎಷ್ಟು ಮಹತ್ವವನ್ನು ನಾವು ಕೊಟ್ಟಿದ್ದೇವೆ ಮತ್ತು ವರ್ಗೀಕರಣವೆಂದರೆ ಏನೆಂದು ತಿಳಿದುಕೊಂಡಿದ್ದೇವೆ

ಎಂಬುದಕ್ಕೆ ಹೆಚ್ಚಿನ ವಿವರಣೆ ಬೇಡ. ಆದರೆ ಪುಸ್ತಕಾಲಯಗಳ ಕಾರ್ಯದ ಸಫಲತೆಯು ವರ್ಗೀಕರಣವನ್ನು ಬಹುವಾಗಿ ಅವಲಂಬಿಸಿದೆ. ಅದು ಭಂಡಾರಿಗನ ಅತ್ಯುಚ್ಚವಾದ ಕಲೆ ಎಂಬುದಾಗಿ ತಿಳಿಯಲಾಗಿದೆ. ವರ್ಗೀಕರಣವೆಂದರೆ ಜ್ಞಾನಸಮುದಾಯವನ್ನೆ ವಿಂಗಡಿಸಿ ಅದನ್ನು ತಕ್ಕಮಟ್ಟಿಗೆ ಅರಿತುಕೊಳ್ಳುವುದರಿಂದ ಆ ಕೆಲಸಮಾಡುವವರಿಗೂ ಕಲಿಯುವವರಿಗೂ ಅದೆಂತಹ ತಿಳಿವನ್ನದು ತಂದುಕೊಡುತ್ತದೆ! ಅಲ್ಲದೆ ಒಂದು ಪುಸ್ತಕವು ಯಾವ ವಿಶಿಷ್ಟ ವಿಷಯದ ಬಗ್ಗೆ ಇದೆ, ಜ್ಞಾನಭಂಡಾರದಲ್ಲಿ ಅದರ ನಿರ್ದಿಷ್ಟ ಸ್ಥಾನವೇನು ಎಂಬುದನ್ನು ಗುರುತಿಸುವುದು, ಹುಡುಗಾಟಿಕೆಯ ಮಾತಲ್ಲ.

## ವರ್ಗೀಕರಣವೆಂದರೇನು?

ವರ್ಗೀಕರಣವು ವಿಶ್ವವ್ಯಾಪಿಯಾದ ಒಂದು ಕಾರ್ಯ. ನಾವು ಪುಸ್ತಕಗಳನ್ನೊಂದೇ ಅಲ್ಲದೆ ಇತರ ಎಲ್ಲ ವಸ್ತುಗಳನ್ನೂ ವರ್ಗೀಕರಣ ಮಾಡುತ್ತೇವೆ. ಅದು ನಿಸರ್ಗದ ಮನೋಧರ್ಮವಾಗಿದ್ದು, ಮೊದಲಿನಿಂದಲೂ ನಡೆದುಕೊಂಡು ಬಂದಿದೆ. ನಿಸರ್ಗದ ಪದಾರ್ಥಗಳೆಲ್ಲವನ್ನೂ ನಾವು ಹೀಗೆ ವರ್ಗೀಕರಿಸಿದ್ದೇವೆ. ಅಡವಿಯಲ್ಲಿ ಜಿಗರೆಗಳದೊಂದು ವರ್ಗ; ಹುಲಿಗಳ ವರ್ಗ ಬೇರೆ. ಕೆಲವೊಂದು ಸಾಮ್ಯಗಳಿಂದ ಹೀಗೆ ವರ್ಗಗಳನ್ನು ಕಲ್ಪಿಸಿದ್ದೇವೆ. ಮಾನವ ವರ್ಗವೂ ಇಂಥ ಇನ್ನೊಂದು ವರ್ಗ. ಒಂದು ಹಣ್ಣಿನ ಅಂಗಡಿಯ ಮುಂದೆ ನಿಂತರೆ ಅಲ್ಲಿಯೂ ಈ ವರ್ಗೀಕರಣವನ್ನು ಕಾಣಬಹುದು. ಬೇರೆ ಬೇರೆ ಜಾತಿಯ ಹಣ್ಣುಗಳನ್ನು ಆತ ಬೇರೆಯಾಗಿಡುವನು. ಅನಂತರ ಆ ಒಂದೊಂದು ಗುಂಪಿನಲ್ಲಿಯೇ ಒಳ್ಳೆಯದು, ಕೆಟ್ಟದ್ದು, ತೀರ ಕೆಟ್ಟದ್ದು ಎಂದು ವಿಂಗಡಿಸಿ ಇಟ್ಟಿರುವನಲ್ಲವೆ. ಅವುಗಳಲ್ಲಿ ಮಾವಿನ ಹಣ್ಣು ಎಂದ ಕೂಡಲೇ ಹಣ್ಣುಗಳ ವಿಶಾಲ ವರ್ಗದಲ್ಲಿ ಇದು ಒಂದು ಉಪವರ್ಗ ಎಂದು ನಮಗೆ ಕೂಡಲೇ ಅನಿಸುತ್ತದೆ. ಇಂಥದೊಂದು ಪುಸ್ತಕದ ಹೆಸರು ಹೇಳಿದರೆ, ಅದು ಗ್ರಂಥಗಳ ಸಮುದಾಯದಲ್ಲಿ ಒಂದು ಎಂಬುದಾಗಿ ಇರುತ್ತದೆ. ಹೀಗಿರುವುದರಿಂದ ಬೇಕಾದ ವಸ್ತುವನ್ನು ತೆಗೆದುಕೊಳ್ಳಿರಿ, ಅದೊಂದು ವರ್ಗನಾಮವೇ ಆಗಿರುತ್ತದೆ. ಇವೆಲ್ಲದರಲ್ಲಿ ನಾವು ಒಂದು ಹಿರಿಯ ಗುಂಪಿನಿಂದ ಸಾಮ್ಯವಿರುವ ವಸ್ತುಗಳನ್ನೆಲ್ಲ ಒಂದು ಕಡೆ ತಂದು, ಸಾಮ್ಯವಿಲ್ಲದವುಗಳನ್ನು ಬೇರ್ಪಡಿಸುತ್ತೇವೆ. ಹೀಗೆ **ವರ್ಗೀಕರಣವೆಂದರೆ ಹೋಲಿಕೆಯ ಪ್ರಮಾಣದ**

**ಮೇಲಿಂದ ವಸ್ತುಗಳನ್ನು ಒಂದೆಡೆ ತರುವ ಇಲ್ಲವೆ ಬೇರ್ಪಡಿಸುವ ಮನೋಯೋಜನೆ.**

ಇನ್ನಷ್ಟು ವಿವರದಲ್ಲಿ ನೋಡೋಣ. ಇದು ಮನೋಯೋಜನೆ. ಏಕೆಂದರೆ ವಸ್ತುಗಳಲ್ಲಿ ಹೋಲಿಕೆಯಿದೆ, ಇಲ್ಲ ಎಂಬುದನ್ನು, ಅವುಗಳ ವಿಷಯಕ್ಕಿದ್ದ ನಮ್ಮ ಮನಸ್ಸಿನಲ್ಲಿಯ ಪೂರ್ವ ಭಾವನೆಗಳಿಂದಲೇ ಹೇಳುತ್ತೇವಷ್ಟೆ. ಈ ಹೋಲಿಕೆಯೆನ್ನುವುದು ಕೆಲ ವಸ್ತುಗಳನ್ನು ಒಂದೆಡೆ ತರುವುದಕ್ಕೆ ಇರುವ ಒಂದು ಅನುಕೂಲತೆ. ಈ ಹೋಲಿಕೆಯ ಪ್ರಮಾಣವು ನಾವಿಟ್ಟುಕೊಂಡ ಉದ್ದೇಶಕ್ಕೆ ಅನುಕೂಲವಾದದ್ದಿರಬೇಕು. ಮಾನವ ವರ್ಗವನ್ನು ವಿಂಗಡಿಸುವಾಗ, ಮೂಗಿನ ಸಾದೃಶ್ಯದ ಪ್ರಮಾಣದಿಂದ ವಿಂಗಡಿಸುವುದು ಅಬದ್ಧವಾದುದು ಮತ್ತು ನಿರುಪಯೋಗಿ. ಜನಾಂಗ ಇಲ್ಲವೆ ದೇಶ—ಈ ಸಾದೃಶ್ಯವನ್ನು ಗುರುತಾಗಿಟ್ಟುಕೊಂಡಾಗ ಮಾತ್ರ ಸರಿಹೋಗುವುದು. ಈ ಹೋಲಿಕೆಯ ಪ್ರಮಾಣದಲ್ಲಿ ಇನ್ನೊಂದು ಮಹತ್ವದ ಮಾತೆಂದರೆ, ಯಾವುದೊಂದು ಸಾದೃಶ್ಯವನ್ನು ತೆಗೆದುಕೊಂಡಾಗ, ಅದು ಮೊದಲಿನಿಂದ ಕೊನೆಯವರೆಗೆ ಒಂದೆ ಆಗಿರಬೇಕು. ಪುಸ್ತಕಗಳನ್ನು, ಇವು ಕಾದಂಬರಿ, ಇವು ಇಂಗ್ಲಿಷ ಗ್ರಂಥಗಳು, ಇವು ನಕಾಶಗಳು ಎಂದು ಗುಂಪುಮಾಡುತ್ತ ಹೋಗುವುದು ಸಾಧ್ಯವಾದೀತೇ.

ಪುಸ್ತಕ ವರ್ಗೀಕರಣವೂ ಮೇಲಣ ನಿಯಮಗಳನ್ನು ಅವಶ್ಯವಾಗಿ ಅನುಸರಿಸುತ್ತದೆ. ವರ್ಗೀಕರಣ ಎಂಬುದರಲ್ಲಿ, ಪುಸ್ತಕಗಳ ವರ್ಗೀಕರಣವೂ ಒಂದು ಅಂಗ ತಾನೇ. ಆದರೂ ಪುಸ್ತಕ ವರ್ಗೀಕರಣದ ಆಳವಾದ ಅಭ್ಯಾಸ ನಡೆದು, ಅದು ತನ್ನದೇ ಆದ ಒಂದು ವೈಶಿಷ್ಟ್ಯವನ್ನು ಬಹುವಾಗಿ ಬೆಳೆಸಿಕೊಂಡಿದೆ. ಜ್ಞಾನಸಾಧನೆಯ ಮಾರ್ಗದಲ್ಲಿ, ಓದುಗನಿಗೆ ನಿರ್ದಿಷ್ಟ ಪುಸ್ತಕವು ಬಲು ಬೇಗ ಸಿಗಬೇಕು ಎಂಬ ಗ್ರಂಥಾಲಯದ ಉದ್ದೇಶಕ್ಕನುಗುಣವಾಗಿ ಪುಸ್ತಕ ವರ್ಗೀಕರಣವು ಸ್ವತಂತ್ರವಾಗಿ ಬೆಳೆದುಕೊಂಡು ಬಂದು, ಉಳಿದ ವರ್ಗೀಕರಣಕ್ಕಿಂತ ಭಿನ್ನಸ್ವರೂಪದ್ದಾಗಿ, ಒಂದು ಶಾಸ್ತ್ರವಾಗಿ ಮಾರ್ಪಟ್ಟಿದೆ.

**ವರ್ಗೀಕರಣದ ಮಹತ್ವ**

ಯಾವುದೇ ವಸ್ತುವಿನ ವರ್ಗೀಕರಣ ಮಾಡಿದಾಗಲೆಲ್ಲ, ಅದರಿಂದ ನಮ್ಮ ಉದ್ದೇಶ ಅಥವಾ ಕೆಲಸ ಸುಲಭವಾಗಲಿ ಎಂಬುದೇ ಆಗಿರುವುದು.

ಪುಸ್ತಕಗಳ ಸುವ್ಯವಸ್ಥಿತ ಹೊಂದಾವಣೆಯಿಂದ ಓದುಗನು ಪುಸ್ತಕಗಳ ಉಪಯೋಗವನ್ನು ಮಾಡಿಕೊಳ್ಳುವುದರಲ್ಲಿ, ಅವನಿಗೆ ನೆರವಾಗುವುದೇ ಇದರ ಮುಖ್ಯ ಧ್ಯೇಯ.

ಈ ಮುನ್ನ ಹೇಳಿದ ಪಂಚಸೂತ್ರಗಳಲ್ಲಿ ಅಡಕವಾದ ಕೆಲಸವು ಸಾಧ್ಯವಾಗಬೇಕಾದರೆ ಪುಸ್ತಕಾಲಯ ತಂತ್ರದಲ್ಲಿ ಕೆಲವು ಸಾಧನಗಳು ಬೇಕಷ್ಟೆ. ಅವುಗಳಲ್ಲೆಲ್ಲ ವರ್ಗೀಕರಣವೇ ಹೆಚ್ಚು ನೇರವಾಗಿ ಉಪಯೋಗವಾಗುವಂತಹದು. ಉಳಿದ ಸಾಧನಗಳಾದ ಸೂಚಿ, ಸಂದರ್ಭಸೇವೆ ಮುಂತಾದುವುಗಳ ಉಪಯುಕ್ತತೆಯು ಗಮ್ಯವಾಗಬೇಕಾದರೆ ವರ್ಗೀಕರಣದ ಸುವ್ಯವಸ್ಥೆಯೇ ತಳಹದಿಯಾಗಿರುತ್ತದೆ. ಪ್ರತಿಯೊಬ್ಬ ಓದುಗನಿಗೆ ಸುಲಭವಾಗಿ ಮತ್ತು ತೀರ ಅಲ್ಪ ವೇಳೆಯಲ್ಲಿ ಪುಸ್ತಕಗಳು ದೊರೆಯುವಂತೆ ನೋಡಿಕೊಳ್ಳುವುದು ಮುಖ್ಯ ಕೆಲಸವಾಗಿದೆ. ವರ್ಗೀಕರಣವು ಸಾಧಿಸಬೇಕಾದ ಇನ್ನೂ ಕೆಲ ಸಂಗತಿಗಳನ್ನು ಒಟ್ಟಿಗೆ ಇಲ್ಲಿ ಹೇಳಿದೆ:—

೧. ಒಬ್ಬ ಓದುಗನು, ಒಂದು ಪುಸ್ತಕವನ್ನು ಕೇಳಿದಾಗ, ಭಂಡಾರದಲ್ಲಿ ಎಷ್ಟೇ ಸಾವಿರ ಪುಸ್ತಕಗಳಿರಲಿ, ಕೂಡಲೇ ಅದು ಅವನಿಗೆ ದೊರೆಯುವಂತಾಗಬೇಕು.

೨. ಆ ಪುಸ್ತಕ ತಿರುಗಿ ಬಂದ ಮೇಲೆ, ಕೂಡಲೇ ಕಪಾಟಿನಲ್ಲಿ ಅದಕ್ಕೆ ತನ್ನ ಮೊದಲಿನ ಸ್ಥಾನ ದೊರೆಯಬೇಕು.

೩. ಒಂದು ವಿಷಯದ ಮೇಲಿನ ಅಭ್ಯಾಸಕ್ಕೆಂದು ಎಲ್ಲ ಪುಸ್ತಕಗಳನ್ನು ಕೇಳಿದಾಗ, ಅದರ ಒಟ್ಟು ಗ್ರಂಥಗಳ ನಿರ್ದೇಶನ ಸಾಧ್ಯವಾಗಿರಬೇಕು,

೪. ಹೊಸ ಪುಸ್ತಕವೊಂದು ಬಂದಾಗ, ಆ ವಿಷಯಕವಾಗಿದ್ದ ಉಳಿದ ಪುಸ್ತಕಗಳ ನೆರೆಯಲ್ಲಿಯ ಅದರ ನಿರ್ದಿಷ್ಟ ಸ್ಥಾನ ದೊರೆಯುವಂತಿರಬೇಕು.

೫. ಸಂಪೂರ್ಣ ಹೊಸದಾದ ಒಂದು ವಿಷಯದ ಮೇಲೆ ಬಂದ ಮೊದಲನೆಯ ಪುಸ್ತಕವನ್ನು, ಉಳಿದ ವಿಷಯಗಳ ಸ್ಥಾನ-ಮಾನವನ್ನು ಅಲ್ಲಾಡಿಸದೇ ಹೊಂದಿಸಲೂ ಇಲ್ಲಿ ಅನುಕೂಲತೆ ಇರಬೇಕು.

**ತಾತ್ವಿಕ ಹಾಗೂ ಉಪಯುಕ್ತ ವರ್ಗೀಕರಣ.**

ಪುಸ್ತಕಗಳೆಂದರೆ, ಜ್ಞಾನಭಂಡಾರವನ್ನು, ಅಕ್ಷರರೂಪದಲ್ಲಿ ಒಂದೊಂದು ಮೊತ್ತವಾಗಿ ಹಿಡಿದಿಡಲ್ಪಟ್ಟ ವಸ್ತುಗಳಷ್ಟೆ. ಪುಸ್ತಕ ವರ್ಗೀಕರಣವು, ಜ್ಞಾನ ಮತ್ತು ಪುಸ್ತಕ ಇವುಗಳನ್ನು ಒಳಗೊಂಡದ್ದಾಗಿದೆ. ವರ್ಗೀಕರಣವು ಮೂಲತಃ

ಜ್ಞಾನಸಮುದಾಯಕ್ಕೆ ಸಂಬಂಧಿಸಿದ ಮಾತಾದ್ದರಿಂದ ಹಿಂದಿನ ಕಾಲದ ವರ್ಗೀಕರಣವು ತಾತ್ವಿಕ ಅಥವಾ ಜ್ಞಾನ ವರ್ಗೀಕರಣವೆನ್ನಿಸಿಕೊಂಡಿತು. ಏಕೆಂದರೆ ಪ್ರಾರಂಭಕ್ಕೆ 'ಪುಸ್ತಕ'ಗಳು ಎಂಬ ಬಗೆಯ ಮಹತ್ವ ಇರಲಿಲ್ಲ. ಯಾವಾಗ ಅಚ್ಚಿನ ಶೋಧವಾಗಿ ಪುಸ್ತಕಗಳು ಹೆಚ್ಚು ಸಂಖ್ಯೆಯಲ್ಲಿ ಬರತೊಡಗಿದವೋ ಆಗ ವರ್ಗೀಕರಣದ ಸ್ವರೂಪ ಬದಲಾಯಿತು. ಇವರ ಮೂಲಕ ಉಪಯುಕ್ತತೆಯ ದೃಷ್ಟಿಯನ್ನಿಟ್ಟುಕೊಂಡು ಕೆಲ ವರ್ಗೀಕರಣ ಪ್ರಕಾರಗಳು ಹೊರಟವು. ಆಗ 'ಪುಸ್ತಕ ವರ್ಗೀಕರಣ'ಕ್ಕೆ ಮೊದಲಾಯಿತು. ಐತಿಹಾಸಿಕವಾಗಿ ಎರಡು ಪ್ರಕಾರಗಳನ್ನು ಈ ರೀತಿ ನೋಡಿದರೂ ಇಂದಿಗೂ ಈ ಎರಡರಲ್ಲಿ ಭಿನ್ನತೆ ಇದೆ. ತಾತ್ವಿಕ ವರ್ಗೀಕರಣವೆಂದರೆ, ಒಂದು ಪುಸ್ತಕದ ನಿರ್ದಿಷ್ಟ ವಿಷಯವನ್ನು ಗಮನಿಸಿ, ಜ್ಞಾನಸಮುದಾಯದಲ್ಲಿ ಅದಕ್ಕಿರುವ ಸ್ಥಾನವನ್ನು ಎಷ್ಟೂ ತಪ್ಪದಂತೆ ನಿದರ್ಶಿಸುವುದು. ಹೀಗೆ ಇಲ್ಲಿ ತಾತ್ವಿಕ ದೃಷ್ಟಿಯಿದೆ. ಪುಸ್ತಕ ವರ್ಗೀಕರಣವೆಂದರೆ, ಯಾವುದೊಂದು ಶಾಸ್ತ್ರೀಯ ಅಥವಾ ತಾತ್ವಿಕ ತಳಹದಿಯಿಲ್ಲದೆ, ಓದುಗರ ಸೌಕರ್ಯವನ್ನು ಗಮನಿಸಿ ಮಾಡಿದಂತಹದು. ಹೀಗೆ ಇಲ್ಲಿ ಪ್ರಾಯೋಗಿಕ ದೃಷ್ಟಿಯಿದೆ.

ಒಂದು ಸಮಂಜಸವಾದ ವರ್ಗೀಕರಣ ಪದ್ಧತಿಯಲ್ಲಿ, ಪ್ರಾರಂಭಕ್ಕೆ ತಾತ್ವಿಕ ತಳಹದಿಯನ್ನೂ ಅನಂತರ ಉಪಯುಕ್ತತೆಯನ್ನೂ ಗಮನಿಸಿ ಈ ತಾತ್ವಿಕತೆಯ ಗೆರೆಯನ್ನು ದಾಟಿಕೊಂಡು ಪುಸ್ತಕ ವರ್ಗೀಕರಣ ಮಾಡುವ ಅನುಕೂಲತೆಯೂ ಇರಬೇಕಾಗುವುದು. ಏಕೆಂದರೆ ಒಂದು ಪುಸ್ತಕಕ್ಕೆ ನಿರ್ದಿಷ್ಟವಾಗಿ ಒಂದೇ ವಿಷಯವಿರುವುದಿಲ್ಲವಾದ್ದರಿಂದ ತಾತ್ವಿಕ ವರ್ಗೀಕರಣವೊಂದೇ ಪ್ರಯೋಜನಕಾರಿಯಾಗುವುದಿಲ್ಲ. ಉದಾಹರಣೆಗೆ, ರತ್ನಾಕರವರ್ಣಿಯ 'ಭರತೇಶವೈಭವ'ವು ಕಾವ್ಯವಾಗಿದೆ. ಅದಕ್ಕೆ ಸರಿಸಮನಾಗಿ ದಾರ್ಶನಿಕ ಗ್ರಂಥವೂ ಆಗಿದೆ. ಅಲ್ಲದೆ ಜೈನಧರ್ಮದ ತತ್ವವನ್ನೂ, ಒಬ್ಬ ತೀರ್ಥಂಕರನ ಚರಿತ್ರೆಯನ್ನೂ ಅದು ಒಳಗೊಂಡದ್ದಾಗಿದೆ. ಇವುಗಳಲ್ಲಿ ಯಾವ ಒಂದು ವಿಷಯದಲ್ಲಿ ನಾವು ಪುಸ್ತಕವನ್ನು ವರ್ಗೀಕರಿಸಿ ಇಡಬಹುದಲ್ಲದೆ ಎಲ್ಲದರಲ್ಲಿ ಹೇಗೆ ಸಾಧ್ಯ? ಅದಕ್ಕೆಂದೇ ಪಾಶ್ಚಾತ್ಯರಲ್ಲಿಯ ಆದ್ಯ ತರ್ಕಶಾಸ್ತ್ರಿಯೊಬ್ಬನು, 'ತಾರ್ಕಿಕವಾಗಿ ನೋಡಿದರೆ ಗ್ರಂಥಗಳ ವರ್ಗೀಕರಣವು ಅಸಂಬದ್ಧ'ವೆಂದು ಬಿಟ್ಟಿದ್ದಾನೆ.

ಇತ್ತ ಸಂಪೂರ್ಣವಾಗಿ ಉಪಯುಕ್ತತೆಯನ್ನೆ ನಮ್ಮ ದೃಷ್ಟಿಯಲ್ಲಿಟ್ಟುಕೊಂಡರೆ ಅದೂ ಸರಿಯಾಗುವುದಿಲ್ಲ. ಪುಸ್ತಕದಲ್ಲಿ ವಿಷಯ ಯಾವಾಗಲೂ ಮುಖ್ಯವಾದುದು. ಅದರ ಉಪಯೋಗವು ಎಷ್ಟೆಂದರೂ ತಿಳಿವನ್ನು ಗಳಿಸುವುದಕ್ಕೆ ಇರುವುದರಿಂದ, ಜ್ಞಾನ ವರ್ಗೀಕರಣದ ತಳಹದಿ ಇರದೆ ಗತ್ಯಂತರವಿಲ್ಲ.

## ಪುಸ್ತಕ ವರ್ಗೀಕರಣದ ವ್ಯಾಖ್ಯೆ

ಇನ್ನು ಪುಸ್ತಕ ವರ್ಗೀಕರಣದ ನಿಜವಾದ ಪರಿಚಯಕ್ಕೆ ತೊಡಗುವ ಸ್ಥೂಲ ನೋಟಕ್ಕೆ ವರ್ಗೀಕರಣವು ಎರಡು ಬಗೆಯಲ್ಲಿ ಕಂಡುಬರುತ್ತದೆ. ಒಂದು, ಪುಸ್ತಕಗಳನ್ನು ನಿರ್ದಿಷ್ಟಪಡಿಸಿದ ವರ್ಗಗಳಲ್ಲಿ ನಿಲಿಸುವುದು; ಇನ್ನೊಂದು, ಅವನ್ನು ಗುರುತಿಸುವುದಕ್ಕಾಗಿ ಸಂಕ್ಷಿಪ್ತಲಿಪಿಯ ಸಾಂಕೇತಿಕ ಭಾಷೆಯೊಂದನ್ನು ನಿರ್ಮಿಸುವುದು. ಈ ನೆರೆಯಲ್ಲಿ ಪುಸ್ತಕ ವರ್ಗೀಕರಣದ ವ್ಯಾಖ್ಯೆಯನ್ನು ಡಾ. ರಂಗನಾಥರನ್ನನುಸರಿಸಿ ಹೀಗೆ ಕೊಡಬಹುದು:—

> ' ಪುಸ್ತಕ ವರ್ಗೀಕರಣವೆಂದರೆ, ಕ್ರಮದರ್ಶಕ ಸಂಕೇತಗಳನ್ನೊಳಗೊಂಡ ಒಂದು ನಿರ್ಮಿತ ಭಾಷೆಯಲ್ಲಿ, ಒಂದು ಪುಸ್ತಕದ ನಿರ್ದಿಷ್ಟ ವಿಷಯವನ್ನು ಭಾಷಾಂತರಿಸುವುದು; ಮತ್ತು ಇನ್ನೊಂದು ಕಡೆ ಕ್ರಮದರ್ಶಕ ಸಂಕೇತಗಳಿಂದ ನಿರ್ದಿಷ್ಟ ವಿಷಯವೊಂದರ ಮೇಲಿನ ಎಲ್ಲ ಪುಸ್ತಕಗಳನ್ನು, ಅವುಗಳ ಬಾಹ್ಯಲಕ್ಷಣಗಳಿಂದ ಪ್ರತ್ಯೇಕಿಸುವುದಾಗಿದೆ. '

ಈ ವ್ಯಾಖ್ಯೆ ಹಲವು ಪಾರಿಭಾಷಿಕ ಶಬ್ದಗಳನ್ನೊಳಗೊಂಡಿರುವುದರಿಂದ ವಿವರಣೆ ಅವಶ್ಯವಾಗಿದೆ. ಮೇಲೆ ಹೇಳಿದಂತೆ, ವರ್ಗ ಹಾಗೂ ಉಪವರ್ಗಗಳ ಒಂದು ದೊಡ್ಡ ಹರಹು ಇದ್ದು ಆ ಆ ವರ್ಗ ಅಥವಾ ಉಪವರ್ಗಗಳಿಗೆ ಒಂದು ಸಾಂಕೇತಿಕ ಲಿಪಿ ಇರಬೇಕು. ಹೀಗೆ ಒಂದೆಡೆ ವರ್ಗಗಳು ಇದ್ದರೆ, ಇನ್ನೊಂದೆಡೆ ಅದಕ್ಕೆಂದು ಒಂದು ಭಾಷೆಯನ್ನು ಕಲ್ಪಿಸಬೇಕಾಗುವುದು. ಅಲ್ಲಿಗೆ ಒಂದು ಪುಸ್ತಕದ ನಿರ್ದಿಷ್ಟ ವಿಷಯದ ವರ್ಗೀಕರಣವಾದಂತಾಯಿತು. ಆದರೆ ಪುಸ್ತಕದ್ದಾಗಲಿಲ್ಲ. ಆದ್ದರಿಂದ, ಪುಸ್ತಕದ ಕೆಲವು ಬಾಹ್ಯ ಲಕ್ಷಣಗಳನ್ನು ಗಮನಿಸಿ ಅದೇ ಬಗೆಯ ಸಾಂಕೇತಿಕ ಭಾಷೆಯಲ್ಲಿ ಆ ಬಾಹ್ಯ ವಿವರಗಳನ್ನು ಭಾಷಾಂತರಿಸಿ ಆ ಪುಸ್ತಕವನ್ನು ಅದೇ ವಿಷಯದ ಮೇಲಿನ ಇತರ ಪುಸ್ತಕಗಳಿಂದ ಪ್ರತ್ಯೇಕಿಸುವುದು ಇದೆ.

## ಪುಸ್ತಕಗಳ ನಿರ್ದಿಷ್ಟ ವಿಷಯ

ವಿಷಯವಾರ ಪುಸ್ತಕಗಳನ್ನು ಹೊಂದಿಸುವುದೇ ಹೆಚ್ಚು ಸೂಕ್ತವಾಗಿದೆ. ಇಷ್ಟು ದಿನದ ಗ್ರಂಥಾಲಯಗಳ ಬಳಕೆಯಲ್ಲಿ ವಿಷಯವನ್ನೆ ತಳಹದಿಯಾಗಿಟ್ಟು ಕೊಳ್ಳುವುದು ಅನುಕೂಲವೆಂಬುದು ಅನುಭವದಿಂದ ಕಂಡುಬಂದ ಮಾತಾಗಿದೆ. ವಿಷಯವನ್ನು ಬಿಟ್ಟರೆ, ವರ್ಗೀಕರಣಕ್ಕೆ ತಳಹದಿಯಾಗಿ ಬೇರೊಂದನ್ನು ಆರಿಸಬಹುದು. ಉದಾಹರಣೆಗೆ, ಗ್ರಂಥಕರ್ತ, ಭಾಷೆ, ದೇಶ. ಆದರೆ ಓದುಗರ ಉಪಯೋಗಕ್ಕಾಗಿ ಗ್ರಂಥಗಳಿರುವುದರಿಂದ, ಓದುಗನಿಗೆ ಸಾಹಿತ್ಯವಿಭಾಗವನ್ನುಳಿದು ಇತರ ಎಲ್ಲ ಸಂದರ್ಭದಲ್ಲಿ ವಿಷಯವೇ ಅವನ ಕೇಳಿಕೆಯ ಹಿನ್ನೆಲೆಯಾಗಿರುತ್ತದೆ. ಸಾಹಿತ್ಯವಿಭಾಗದಲ್ಲಿ ಮಾತ್ರ, ಗ್ರಂಥಕರ್ತನ ಮಹತ್ವವಿದ್ದು, ಆಗಾಗ ನಮಗೆ 'ಕಾರಂತರ ಕಾದಂಬರಿಗಳು,' 'ಶ್ರೀನಿವಾಸರ ಸಣ್ಣ ಕತೆಗಳು' ಎಂಬುವನ್ನು ಎದುರಿಸಬೇಕಾಗುವುದು ನಿಜ. ಒಟ್ಟಿನಲ್ಲಿ ವಿಷಯದ ಆನಂತರ ಗ್ರಂಥಕರ್ತನ ವಿಚಾರವು ಓದುಗರಲ್ಲಿ ಬರುವುದು.

ಹಾಗಿದ್ದರೆ ಒಂದು ಪುಸ್ತಕದ ನಿರ್ದಿಷ್ಟ ವಿಷಯವೇನೆಂದು ನೋಡುವ. 'ಪುಸ್ತಕವೊಂದರ ವಿಷಯ, ಇದು' ಎಂಬುದನ್ನು ನಾವು ಬಹಳ ಸಡಿಲಾಗಿ ಉಪಯೋಗಿಸುತ್ತೇವೆ. ವಿ. ಸೀ. ಯವರ 'ಅಶ್ವತ್ಥಾಮನ್' ಎಂಬ ಪುಸ್ತಕದ ವಿಷಯವಾವುದು ? ತೀರ ಸರಳವಾಗಿ 'ವಿಮರ್ಶೆ' ಎಂದು ಹೇಳಿಬಿಡುವೆವು. ಆದರೆ ಅದು ಸರಿಯಲ್ಲ. ಅದು ' ಶ್ರೀ 'ಯವರ 'ಅಶ್ವತ್ಥಾಮನ್' ನಾಟಕದ ಮೇಲಿನ ವಿಮರ್ಶ ಗ್ರಂಥವು. ಅದರ ವಿಷಯವನ್ನು ಹೇಳಬೇಕಾದುದು, "ಸೊಫೊಕ್ಲೀಸ್‌ನ ಏಜಾಕ್ಸ ನಾಟಕದ ಪರಿವರ್ತನವಾದ 'ಅಶ್ವತ್ಥಾಮನ್' ನಾಟಕದ ಮೇಲಿನ ವಿಮರ್ಶೆ ", ಎಂದು. ಇದರ ವರ್ಗೀಕರಣವಾಗುವಾಗ ಇವೆಲ್ಲ ಅಂಶಗಳು ವರ್ಗೀಕರಣದ ಸಂಕ್ಷಿಪ್ತ ಭಾಷೆಯಲ್ಲಿ ಅನುವಾದಗೊಂಡಿರಬೇಕಾಗುತ್ತದೆ. ಅದರಂತೆ ರಾಜರತ್ನಂರವರ 'ಹತ್ತು ವರುಷ' ಎಂಬ ಪುಸ್ತಕದ ನಿರ್ದಿಷ್ಟ ವಿಷಯವಾವುದು? ಸಾಹಿತ್ಯ, ರಾಜರತ್ನಂ, ಆತ್ಮಚರಿತ್ರೆ ಎಂಬುವು ವ್ಯಾಪಕವಾದುವು. ನಿರ್ದಿಷ್ಟವಾಗುವುದಿಲ್ಲ. 'ರಾಜರತ್ನಂರವರ ಪ್ರಾರಂಭಿಕ ಜೀವನದ ಆತ್ಮಚರಿತ್ರೆ' ಎಂಬುದು ನಿರ್ದಿಷ್ಟ ವಿಷಯವೆನಿಸಿಕೊಳ್ಳುತ್ತದೆ. ಸಾಹಿತ್ಯ ವಿಚಾರದಲ್ಲಿ ಹೀಗಾದರೆ ಉಳಿದ ವಿಷಯಗಳ ಪುಸ್ತಕಗಳಲ್ಲಿ ನಿರ್ದಿಷ್ಟ ವಿಷಯವನ್ನು ಕಂಡುಹಿಡಿಯುವುದು ಹಗುರಾದ ಮಾತಲ್ಲ.

ವರ್ಗೀಕರಣ ಮಾಡುವವನು ಹೆಚ್ಚು ಓದಿಕೊಂಡವನಿದ್ದರೆ ಮಾತ್ರ ಇದು ಸಾಧಿಸುವುದು. ಒಂದು ಪುಸ್ತಕದ ನಿರ್ದಿಷ್ಟ ಸ್ಥಾನ ಗೊತ್ತಾಗದೇ ಬೇರೆಡೆ ಅದನ್ನು ಸೇರಿಸಿದಲ್ಲಿ 'ಪ್ರತಿಯೊಂದು ಪುಸ್ತಕಕ್ಕೆ ಓದುಗ ದೊರೆಯಬೇಕೆ'ಂಬ ಸೂತ್ರಕ್ಕೆ ಹಿನ್ನೇಟು ಹಾಕಿದಂತಾಗುವುದು.

## ನಿರ್ಮಿತ ಭಾಷೆ

ಇನ್ನು ಈ ನಿರ್ದಿಷ್ಟ ವಿಷಯವನ್ನು ನಿರ್ಮಿತ ಭಾಷೆಗೆ ಪರಿವರ್ತಿಸುವುದು ಇದೆ. ವರ್ಗೀಕರಣಕ್ಕೂ ಒಂದು ಭಾಷೆ ಇರುತ್ತದೆ. ಆದರೆ ಅದು ಮಾತನಾಡುವ, ಬರೆಯುವ ಸಹಜ ಭಾಷೆಯಲ್ಲ. ಅನುಕೂಲಕ್ಕಾಗಿ ನಿರ್ಮಿಸಿಕೊಂಡದ್ದು. ಶೀಘ್ರಲಿಪಿಯ ಭಾಷೆಯನ್ನು ನಾವು ನೋಡಿದ್ದೇವೆ. ಗಣಿತ ಶಾಸ್ತ್ರದಲ್ಲಿ ಉಪಯೋಗಿಸುವ ಅಂಕಿ, ಅಕ್ಷರಗಳದ್ದೂ ಒಂದು ಬಗೆಯಲ್ಲಿ ನಿರ್ಮಿತ ಭಾಷೆ ಎನಿಸಿಕೊಳ್ಳುವಂತಹದು. ಹೀಗೆ ಈ ನಿರ್ಮಿತ ಭಾಷೆಗಳು ಸಂಕ್ಷಿಪ್ತತೆ, ಗೌಪ್ಯ ಮುಂತಾದುವುಗಳನ್ನು ಮುಂದಿಟ್ಟುಕೊಂಡು ಮಾಡಿದವುಗಳಾಗಿವೆ.

ಇಲ್ಲಿನ ನಿರ್ಮಿತ ಭಾಷೆಯು ವರ್ಗೀಕರಣ ಪದ್ಧತಿಯನ್ನು ರೂಢಿಸುವ ದೃಷ್ಟಿಯಿಂದ ಮಾಡಿದುದು. ಅಸಂಖ್ಯ ಪುಸ್ತಕಗಳನ್ನೊಳಗೊಂಡಿರುವ ಗ್ರಂಥಾಲಯಗಳಿಗೆ ಇದು ಎಷ್ಟೊಂದು ಅವಶ್ಯವಾಗಿದೆ! ಮತ್ತು ಜಾಗರೂಕದಿಂದ ಹಾಗೂ ಮುನ್ನೋಟದಿಂದ ಅದನ್ನು ನಿರ್ಮಿಸಬೇಕಾಗುತ್ತದೆ. ಈ ಭಾಷೆ ಅಂಕಿಗಳನ್ನೂ, ಅಕ್ಷರಗಳನ್ನೂ, ಅಥವಾ △— : ಮುಂತಾದ ಸಂಜ್ಞೆಗಳನ್ನೂ ಒಳಗೊಂಡಿರಬಹುದು. ಬರಿಯ ಅಂಕಿಗಳು ಅಥವಾ ಅಕ್ಷರಗಳು ಇದ್ದುದಾದರೆ ಅದಕ್ಕೆ ಶುದ್ಧ ಸಂಕೇತವೆಂದೂ, ಎರಡನ್ನೂ ಬಳಸಿಕೊಂಡಿದ್ದರೆ ಮಿಶ್ರ ಸಂಕೇತವೆಂದೂ ಹೇಳಬಹುದು.

## ವರ್ಗಸಂಖ್ಯೆ

ಹೀಗೆ ಒಂದು ಪುಸ್ತಕದ ವಿಷಯವನ್ನು ಇಂತಹ ಸಂಜ್ಞೆಗಳಲ್ಲಿ ನಿದರ್ಶಿಸಿದುದಾದರೆ, ಆ ವಿಷಯದ ಮೇಲಿನ ಎಲ್ಲ ಪುಸ್ತಕಗಳು ಒಂದೆಡೆ ಬರುತ್ತವೆ. ಇಲ್ಲಿ, ಮುಖ್ಯ ವರ್ಗದಿಂದ ಕ್ರಮವಾಗಿ ವರ್ಗಗಳನ್ನು ಕಲ್ಪಿಸುತ್ತ ಹೋಗಿ ಅದರ ನಿರ್ದಿಷ್ಟ ವಿಷಯವಾಗಿ ಬಂದು ಮುಟ್ಟುವುದು ಒಂದು ಮಹತ್ವದ ಹೆಜ್ಜೆ. ಆನಂದಕಂದರ 'ಅಶಾಂತಿಪರ್ವ' ಪುಸ್ತಕವನ್ನು ತೆಗೆದುಕೊಳ್ಳುವ.

'ದ್ವಿಬಿಂದು ವರ್ಗೀಕರಣ' ಪದ್ಧತಿಯ ಪ್ರಕಾರ ಇದರ ವರ್ಗೀಕರಣದ ಮೆಟ್ಟಿಲುಗಳು ಈ ರೀತಿ ಇವೆ :—




ಹೀಗೆ ಕ್ರಮವಾಗಿ ಹೋಗುವುದರ ಔಚಿತ್ಯವೇನೆಂದರೆ, ಮೊದಲಿಗೆ ಸಾಹಿತ್ಯದ ಮೇಲಿನ ಎಲ್ಲ ಪುಸ್ತಕಗಳು ಒಂದೆಡೆ ಬರುವವು. ಆನಂತರ ಕನ್ನಡ ಭಾಷೆಯಲ್ಲಿಯ ಎಲ್ಲ ಪುಸ್ತಕಗಳು ಒಂದೆಡೆ ಕೂಡುವವು. ಮುಂದೆ ಒಟ್ಟು ಕಾದಂಬರಿಗಳು ಒಂದೆಡೆ; ಅದರಲ್ಲಿ 'ಆನಂದಕಂದ'ರ ಕೃತಿಗಳು. ಹೀಗೆ ಪ್ರತಿಯೊಂದೂ ಒಂದೊಂದು ಗುಂಪಿನೊಳಗೊಂದೊಂದು ಸೇರಿಕೊಂಡು ಒಟ್ಟಿನ ಜ್ಞಾನಭಂಡಾರ ವ್ಯವಸ್ಥಿತವಾಗಿ ನಿಲ್ಲುತ್ತದೆ. ಅಂತೂ ಒಂದು ಪುಸ್ತಕದ ನಿರ್ದಿಷ್ಟ ವಿಷಯವನ್ನು ಕ್ರಮವಾದ ಮೆಟ್ಟಿಲುಗಳಿಂದ ನಿರ್ಮಿತ ಭಾಷೆಯಲ್ಲಿ ಗುರುತಿಸಿದರೆ, ನಮಗೆ ಆ ಪುಸ್ತಕದ ವರ್ಗಸಂಖ್ಯೆಯು ದೊರೆಯುವುದು.

## ಗ್ರಂಥಸಂಖ್ಯೆ

ಇಷ್ಟರಿಂದಲೆ ಪ್ರತಿಯೊಂದು ಪುಸ್ತಕವು ಪ್ರತ್ಯೇಕಿಸಲ್ಪಡಲಾಗುವುದಿಲ್ಲ. ಉದಾಹರಣೆಗೆ, ಮೇಲಿನ ಗ್ರಂಥವನ್ನೆ ತೆಗೆದುಕೊಳ್ಳುವ. ಈ ಗ್ರಂಥದ ತಿದ್ದಿದ ೩ನೆಯ ಆವೃತ್ತಿ ಹೊರಡಬಹುದು. ಅದನ್ನು ಹೇಗೆ ಗುರುತಿಸುವುದು? ಅಥವಾ ಈ ಪುಸ್ತಕ ಬೇರೊಂದು ಭಾಷೆಗೆ ಅನುವಾದವಾಗಬಹುದು. ಅದನ್ನು ಯಾವ ರೀತಿಯಾಗಿ ತೋರಿಸಬೇಕು ? ಇಲ್ಲವೆ ಇದರ ಮುಂದಿನ ಭಾಗ ಬರಬಹುದು. ಹೀಗೆ, ಈಗಿದ್ದ ವರ್ಗಸಂಖ್ಯೆಯಿಂದ ವರ್ಗೀಕರಣವು ಪೂರ್ಣವಾಗಲಿಲ್ಲ; ಮತ್ತು ಈಗ ಎತ್ತಿದ ವಿಚಾರಗಳು, ಪುಸ್ತಕದ ಬಹಿರಂಗವನ್ನು ಕುರಿತಲ್ಲದೆ ಆಂತರಿಕ ಅಥವಾ ಮೂಲ ವಿಷಯಕ್ಕೆ ಸಂಬಂಧಿಸಿದುವಲ್ಲ;

ಹೀಗೆ, ಮುಂದಕ್ಕೆ ನಿರ್ದಿಷ್ಟ ವಿಷಯದ ಆ ಗ್ರಂಥವನ್ನೆ ಪ್ರತ್ಯೇಕಿಸುವುದಿರುವುದರಿಂದ ಇನ್ನೊಂದು ಕಡೆ ಸಂಜ್ಞೆಗಳನ್ನು ಕೊಡಬೇಕಾಗುತ್ತದೆ. ಅದೇ 'ಗ್ರಂಥಸಂಖ್ಯೆ.' ಇದರಿಂದ ಕೊಟ್ಟ ವ್ಯಾಖ್ಯೆಯಲ್ಲಿ ಕಂಡುಬರುವ ಎರಡು ಬಗೆಗಳಿಗೆ ವರ್ಗಸಂಖ್ಯೆ, ಗ್ರಂಥಸಂಖ್ಯೆಗಳೆಂದು ಕರೆದು, ಆವೆರಡೂ ಸೇರಿದಾಗ ವರ್ಗೀಕರಣವು ಪೂರ್ಣವಾಗುವುದೆಂದು ನೋಡಿದ ಹಾಗಾಯಿತು. ಮತ್ತು ಗ್ರಂಥವನ್ನು ಓದುಗ ಕೇಳುವಾಗ ಇವೆರಡೂ ಸಂಖ್ಯೆಗಳನ್ನು (ಕೆಲ ಕಡೆ ಪ್ರಾಥಮಿಕ ನಂಬರನ್ನು ಸಹಿತ) ಕೊಟ್ಟಲ್ಲಿ ಅದು 'ಕ್ರಮಕ ಸಂಖ್ಯೆ' ಎನ್ನಿಸಿಕೊಳ್ಳುತ್ತದೆ.

## ೨. ವರ್ಗೀಕರಣ ಪದ್ಧತಿಗಳು

ಮನುಷ್ಯನ ವಿಚಾರಶಕ್ತಿಯು ಎಂದಿಗೆ ಮೊದಲಾಯಿತೋ ಅಂದಿನಿಂದಲೇ ವರ್ಗೀಕರಣವು ಪ್ರಾರಂಭವಾಯಿತು, ಎಂದು ಹೇಳುವುದುಂಟು. ಇನ್ನು ಹಲವರು 'ವಸ್ತುಗಳನ್ನು ಹೆಸರಿಸುವುದರಿಂದಲೇ ವರ್ಗೀಕರಣ ನಡೆದಂತೆ' ಎಂದು ಅನ್ನುತ್ತಾರೆ. ಪುಸ್ತಕ ವರ್ಗೀಕರಣವು ವಿದ್ಯಾವಂತರಲ್ಲಿ ಇತ್ತು ಎನ್ನುವ ಮಾತನ್ನು ಕ್ರಿ. ಶ. ಪೂ. ೬೦೦ ವರ್ಷಕ್ಕಿಂತ ಹಿಂದೆಯೂ ಒಯ್ಯಲಾಗಿದೆ. ಆದರೂ ಐತಿಹಾಸಿಕ ದೃಷ್ಟಿಯಿಂದ ಗಮನಿಸಿದಾಗ, ಇದರ ನಿಜವಾದ ಇತಿಹಾಸ ಪ್ರಾರಂಭವಾದುದು, ಅರಿಸ್ಟಾಟಲ್ ಮತ್ತು ಪ್ಲೇಟೋ ಇವರಿಂದ, ಎಂದು ಹೇಳಬಹುದು. ಅಂದಿನಿಂದ ಇಂದಿನ ವರೆಗೆ ಅಸಂಖ್ಯ ವರ್ಗೀಕರಣ ಪದ್ಧತಿಗಳು ಹುಟ್ಟಿಕೊಂಡಿವೆ.

ಅವುಗಳಲ್ಲಿ ಈಚಿನ ಪದ್ಧತಿಗಳು ಶಾಸ್ತ್ರವಿಷಯಗಳಿಗೆ ಹೆಚ್ಚು ಮಹತ್ವ ಕೊಟ್ಟುವಾಗಿದ್ದರೆ, ಪುರಾತನ ಹಾಗೂ ಮಧ್ಯಕಾಲದ ವರ್ಗೀಕರಣ ಪದ್ಧತಿಗಳು ಧಾರ್ಮಿಕ ದೃಷ್ಟಿಯಿಂದ ರಚಿತವಾದುವುಗಳಾಗಿವೆ. ಕಾರಣ ಸ್ಪಷ್ಟವಿದೆ; ಆಗಿನ ಗ್ರಂಥಗಳಾಗಲೀ, ಜ್ಞಾನಾರ್ಜನೆಯಾಗಲೀ ಧರ್ಮಾಭಿಮುಖವಾಗಿದ್ದುವು. ಮತ್ತೆ, ದೇಶ ವಿದೇಶ ಅಥವಾ ಪ್ರಾಂತ-ಪ್ರಾಂತೀಯ ಸಂಬಂಧ ಹಾಗೂ ಬಳಕೆಯು ಹಿಂದಿನ ಕಾಲದಲ್ಲಿ ಬಹಳ ಕಡಿಮೆಯಾಗಿದ್ದುದರಿಂದ, ಅನೇಕ ಸ್ಥಳೀಯ ವರ್ಗೀಕರಣ ರೀತಿಗಳು ಹುಟ್ಟಿಕೊಂಡವು. ಮುಂದೆ ಜ್ಞಾನವೂ ವಾಙ್ಮಯವೂ ಹೆಚ್ಚು ವ್ಯಾಪಕವಾದ ಹಾಗೆಲ್ಲ ವರ್ಗೀಕರಣ

ವಿಧಾನವು ಕ್ರಮೇಣ ಬೆಳೆಯುತ್ತ ಹೋಗಿ, ಅದಕ್ಕೆ ಶಾಸ್ತ್ರದ ಸ್ವರೂಪ ಬರತೊಡಗಿತು.

ಆ ಕಾಲದಲ್ಲಿ ಪುಸ್ತಕಾಲಯಗಳ ಉಪಯೋಗ ಕೆಲವರಿಗೆ ಮಾತ್ರ ಇತ್ತಷ್ಟೇ. ಬರಬರುತ್ತ ಹೆಚ್ಚು ಜನರು ಪುಸ್ತಕಗಳನ್ನು ಓದತೊಡಗುವ ಸಮಯ ಬಂದಾಗ, ಅವರ ಸೌಕರ್ಯವನ್ನು ಗಮನಿಸಿ, ಕೆಲ ಪದ್ಧತಿಗಳು ಹೊರಟುವು. ಈ ಉಪಯುಕ್ತ ಅಥವಾ ಗ್ರಂಥಸೂಚಕ ವರ್ಗೀಕರಣದ ಮೊದಲಿಗನು, ಜರ್ಮನಿಯ ಕೊನ್ರ್ಯಾಡ್ ಜೆಸ್ನರ್ ಎಂಬಾತನು (೧೫೪೮). ಆದರೆ ಇಂದಿನ ಮಹತ್ವದ ವರ್ಗೀಕರಣ ಪದ್ಧತಿಗಳಿಗೆ ತಳಹದಿ ಹಾಕಿದವನೆಂದರೆ, ಇಂಗ್ಲಂಡಿನ ಹೆಸರಾಂತ ತತ್ವವೇತ್ತ ಫ್ರಾನ್ಸಿಸ್ ಬೇಕನ್ನನು. ವರ್ಗೀಕರಣದ ಇತಿಹಾಸದಲ್ಲಿ ಇವನ ಮಹತ್ವ ಅಷ್ಟಿಷ್ಟಲ್ಲ.

ಬೇರೆ ಬೇರೆ ವರ್ಗೀಕರಣ ಪದ್ಧತಿಗಳು ಎಂದಾಗ, ಎಲ್ಲರೂ ಸ್ವತಂತ್ರವಾದ ಇಂತಹ ಪದ್ಧತಿಗಳನ್ನು ನಿರ್ಮಿಸುವರು ಎಂದಲ್ಲ. ಅದು ಅಶಕ್ಯವಷ್ಟೇ ಅಲ್ಲದೆ ಅವ್ಯವಹಾರ್ಯವಾದುದು. ಈಗ ಹುಟ್ಟಿಕೊಂಡ ವರ್ಗೀಕರಣ ಪದ್ಧತಿಗಳು ಹಿಂದಿನವುಗಳನ್ನು ಅನುಸರಿಸಿಯೇ ರಚಿತವಾದುವು; ಮತ್ತು ಯಾವ ವರ್ಗೀಕರಣ ಪದ್ಧತಿಯೂ ದೋಷರಹಿತವಾಗಿಯೂ ಪರಿಪೂರ್ಣವಾಗಿಯೂ ಇಲ್ಲ. ಇದು ಜ್ಞಾನಸಮುದ್ರದ ಅನಂತತೆಯನ್ನೂ, ಅದರ ವಿಶ್ವವ್ಯಾಪಕತೆಯನ್ನೂ ತೋರಿಸುತ್ತದೆ. ಮನುಷ್ಯನ ವಿಚಾರಶಕ್ತಿ, ಸಂಶೋಧನೆಗಳಿಂದಾಗಿ ಅವರಲ್ಲಿಂದ ಹೊಸ ಹೊಸ ವಿಷಯಗಳು ಬೆಳಕಿಗೆ ಬರುತ್ತಲೇ ಇವೆ. ಹೀಗಾಗಿ ಒಂದು ಕಾಲಕೆ ಪರಿಪೂರ್ಣವೆನ್ನಿಸಬಹುದಾಗಿದ್ದ ವರ್ಗೀಕರಣ ಕ್ರಮವು ಕಾಲಚಕ್ರ ಉರುಳಿದ ಹಾಗೆಲ್ಲ ಒಂದು ಗಳಿಗೆಗೆ ಹಳೆಯದೂ, ಅಪೂರ್ಣವೂ ಎನ್ನಿಸುವ ಮಟ್ಟಕ್ಕೆ ಬರಬಹುದು.

## ದಶಾಂಶ ಪದ್ಧತಿಯ ಪೂರ್ವ ಪರಿಚಯ

ಆಧುನಿಕ ವರ್ಗೀಕರಣ ಪದ್ಧತಿಯ ಮೂಲ ಜನಕರು ಅಮೇರಿಕೆಯ ಮೆಲ್‌ವಿಲ್ ಡ್ಯೂಯಿ ಎಂಬವರು. ಅಲ್ಲದೆ ಇಡೀ ಜಗತ್ತಿನಲ್ಲಿಯ ಇಂದಿನ ಗ್ರಂಥಾಲಯ ಚಳವಳಿಗೆ ಅವರು ಪ್ರೇರಕರಾಗಿದ್ದಾರೆ. ಮೆಸ್ಸ್ಯಾಚ್ಯುಸೆಟ್ಸದ ಅಮ್‌ಹರ್ಸ್ಟ ಕಾಲೇಜಿನ ಗ್ರಂಥಾಲಯದಲ್ಲಿ ಕೆಲಸ ಮಾಡುತ್ತಿದ್ದು, ವಿದ್ಯಾರ್ಥಿಗಳಾಗಿರುವಾಗಲೇ, ದಶಾಂಶ ಪದ್ಧತಿಯ ಸ್ಥೂಲರೂಪವನ್ನು ಸಿದ್ಧಪಡಿಸಿದರು.

ಇದರ ಹಿನ್ನೆಲೆಯನ್ನು ಕುರಿತು ಅವರು ಹೀಗೆ ಹೇಳಿದ್ದಾರೆ:—"ಸುಮಾರು ಐವತ್ತು ಪುಸ್ತಕ ಭಂಡಾರಗಳನ್ನು ಪರಿಶೀಲಿಸಿದ ನಂತರ ಅವುಗಳಲ್ಲಿ ಕ್ರಿಯಾ ಶಕ್ತಿಯ ಕೊರತೆಯನ್ನೂ, ಪುನಃ ಪುನಃ ವರ್ಗೀಕರಿಸುವಲ್ಲಿ ಮತ್ತು ನಾನಾ ವಲಿಯನ್ನು ತಯಾರಿಸುತ್ತಿರುವಲ್ಲಿ ಆಗುತ್ತಿರುವ ವೇಳೆ ಮತ್ತು ಹಣದ ಅಪ ವ್ಯಯವನ್ನೂ ಕಂಡು ಬಹಳಷ್ಟು ಸೋಜಿಗಗೊಂಡೆ." ಆಗ ಅವರಿಗೆ ಒಂದು ವ್ಯಾಪಕವಾದ ಹಾಗೂ ಭದ್ರವಾದ ತಳಹದಿಯ ಮೇಲೆ ನಿರ್ಮಿತವಾದ ಒಂದು ವರ್ಗೀಕರಣ ಪದ್ಧತಿಯ ಆವಶ್ಯಕತೆ ಕಂಡುಬಂದು, ಅದಕ್ಕಾಗಿ ೬ ತಿಂಗಳು ಆಳವಾದ ಅಭ್ಯಾಸ ಮಾಡಿದರು. ವರ್ಗೀಕರಣ ಪದ್ಧತಿಯು ಸುಲಭಗವ್ಯ ವಾಗಿಯೂ ಮತ್ತು ವಿಶಾಲ ಯೋಜನೆಯುಳ್ಳದೂ ಆಗಿರಬೇಕೆಂಬ ಗುರಿ ಯನ್ನು ಮುಂದಿಟ್ಟುಕೊಂಡಿದ್ದರು. ಸಂಕೇತದಲ್ಲಿ ಬರಿಯ ಸಂಖ್ಯೆಗಳನ್ನು ದಶಾಂಶ ವಿಧಾನದಿಂದ* ಉಪಯೋಗಿಸುವ ಕ್ರಾಂತಿಕಾರೀ ವಿಚಾರವು ಹೊಳೆದು, ಮುಂದಿನ ದಾರಿಯು ಅವರಿಗೆ ಸುಗಮವಾಯಿತು.

ಮೊದಲಿಗೆ ಇವರ ಗ್ರಂಥವು ೪೨ ಪುಟಗಳ ಸಣ್ಣ ಪುಸ್ತಿಕೆಯಾಗಿ ಹೊರ ಬಿದ್ದಿತು. ಆದರೆ ೧೯೪೨ರಲ್ಲಿ ೨೦೦೦ ಪುಟಗಳನ್ನೊಳಗೊಂಡ ೧೪ನೆಯಾವೃತ್ತಿ ಹೊರಟಿದೆ. ಈಚೆಗೆ ಅದರ ಮಾದರಿಯಾವೃತ್ತಿ ಬಂದಿದೆ. ಇಂದು ಈ ಪದ್ಧತಿ ೧೪೦೦೦ಕ್ಕೆ ಮೇಲ್ಪಟ್ಟ ಗ್ರಂಥಾಲಯಗಳಲ್ಲಿ ಉಪಯೋಗವಾಗುತ್ತಿದೆ. ಇದರಷ್ಟು ಬಳಕೆಯಲ್ಲಿರುವ ವರ್ಗೀಕರಣ ಪದ್ಧತಿಯು, ಮತ್ತಾವುದೂ ಇಲ್ಲ. ಇದರ ಸಮೀಪಕ್ಕೆ ಕೂಡಾ ತಲೆಯೆತ್ತಿ ನಿಂತ ವರ್ಗೀಕರಣ ಪದ್ಧತಿಯೂ ಮತ್ತೊಂದಿಲ್ಲ.

---

* ದಶಾಂಶ ವಿಧಾನವೆಂದರೆ, ಒಂದು ಸಂಖ್ಯೆಯನ್ನು ಓದುವಾಗ ಪ್ರತಿಯೊಂದು ಬಿಡಿ ಅಂಕಿಯ ಮುಂದೆ, ದಶಾಂಶ ಬಿಂದು (·) ಇದೆ ಎಂಬುದನ್ನು ಇಟ್ಟುಕೊಂಡು ಓದಬೇಕು. ೩೬೧ ಈ ಅಂಕಿಯನ್ನು ಸಂಖ್ಯಾತ್ಮಕವಾಗಿ ಎಂದರೆ ಮೂರುನೂರಾ ಅರವತ್ತೊಂದರ ಒಂದು ಮೊತ್ತವಾಗಿ ತಿಳಿಯುತ್ತೇವೆ. ಆದರೆ ದಶಾಂಶ ವಿಧಾನದಲ್ಲಿ ಈ ಅಂಕಿಯ ಸ್ಥಾನವು ಮೂರು ಮತ್ತು ನಾಲ್ಕರ ನಡುವೆ ಇದೆ, ಅಷ್ಟೆ. ೩·೬ ಎಂದಾಗ ಆದರ ನಿಜವಾದ ಬೆಲೆ, ೩ $\frac{೬}{೧೦}$ ಇದ್ದ ಹಾಗೆ. ಅದರಂತೆ ೩·೬೧ ಎಂದಾಗ ಅದರ ಬೆಲೆ ೩ $\frac{೬೧}{೧೦೦}$. ಇದು ಗಣಿತದಲ್ಲಿ ಬರುವ ವಿಧಾನ. ಹೆಚ್ಚಾಗಿ ಈಗಿನ ಎಲ್ಲ ವರ್ಗೀಕರಣಗಳೂ ದಶಾಂಶ ವಿಧಾನದ ಸಂಕೇತಗಳನ್ನು ಬಳಸಿವೆಯಾದ್ದರಿಂದ ಇದರ ಸ್ಪಷ್ಟ ಕಲ್ಪನೆ ಅಗತ್ಯವಾದುದಾಗಿದೆ.

ಈ ವರ್ಗೀಕರಣ ಗ್ರಂಥದಲ್ಲಿ ಮುಖ್ಯ ವರ್ಗದಿಂದ ವಿಶಿಷ್ಟ ವಿಷಯವನ್ನು ತಲುಪುವವರೆಗಿನ ಹಂತಗಳನ್ನು ಕ್ರಮಕ್ರಮವಾಗಿ ಗುರುತಿಸುವ ಎಲ್ಲ ಬಗೆಯ ಪಟ್ಟಿಕೆಗಳನ್ನು ಅತ್ಯಂತ ವಿಸ್ತಾರವಾಗಿ ಕೊಡಲಾಗಿದೆ. ಪ್ರತಿಯೊಂದು ವಿಷಯಕ್ಕೆ ಸ್ಪಷ್ಟವಾದ ಸಂಕೇತವಿದೆ. ಕನ್ನಡ ಸಾಹಿತ್ಯದ ಸಂಖ್ಯೆಯು ಯಾವಾಗಲೂ ೪೯೧–೪೧೪ ಇರುವುದು. ಹೀಗೆ ಸಂಕೇತವು ಶುದ್ಧವಾಗಿದ್ದು ಸುಲಭವಿರುವುದರಿಂದಲೂ, ತಯಾರಿಸಿದ ಪಟ್ಟಿಗಳು ಇದ್ದುಕೊಂಡು, ಮತ್ತೆ ಸಂಬಂಧವಾದ ಅಕಾರಾದಿ ಪಟ್ಟಿಕೆಯೊಂದು ಕೊನೆಗೆ ಇದ್ದು, ಪುಸ್ತಕಗಳಿಗೆ ನಂಬರನ್ನು ಹಾಕುವುದು ಅತಿ ಶೀಘ್ರದಲ್ಲಿ ಮುಗಿಯುವುದರಿಂದಲೂ ಈ ಪದ್ಧತಿ ಬಹಳ ಜನಪ್ರಿಯವಾಯಿತು.

ಆದರೆ ೭೦ ವರ್ಷಗಳ ಹಿಂದೆಯೆ ನಿರ್ಮಿತವಾಗಿದ್ದು, ಅತ್ಯಾಧುನಿಕ ಜ್ಞಾನದ ಬೆಳೆವಣಿಗೆಯನ್ನು ಇದರಲ್ಲಿ ಸಂಕೇತಿಸುವುದು ಸಾಧ್ಯವಾಗಿಲ್ಲ, ಎಷ್ಟೇ ತಿದ್ದುಪಡಿಗಳನ್ನು ಅದರಲ್ಲಿ ಮಾಡಹೊರಟರೂ ಸಮರ್ಪಕವಾಗುವುದಿಲ್ಲವೆಂದು ಬ್ಲಿಸ್ ಮೊದಲಾದ ವಿದ್ವಾಂಸರು ಅಭಿಪ್ರಾಯಪಡುತ್ತಲಿದ್ದಾರೆ. ಅಲ್ಲದೆ ಇಡೀ ಪದ್ಧತಿಯು ಅಮೇರಿಕನ್ ವಾಙ್ಮಯ ಸಮುದಾಯವನ್ನು ಹೆಚ್ಚಾಗಿ ಹಿನ್ನೆಲೆಯಾಗಿಟ್ಟುಕೊಂಡಿರುವುದರಿಂದ ಭಾರತೀಯ ಗ್ರಂಥಾಲಯಗಳಿಗೆ ಅಪ್ರಯೋಜಕವೆನ್ನುವವರೂ ಇದ್ದಾರೆ.

## ಇನ್ನು ಕೆಲವು ಪದ್ಧತಿಗಳು

ಮೆಲ್‌ವಿಲ್ ಡ್ಯೂಯಿ ಅವರನಂತರ ಇನ್ನು ಕೆಲವು ಪದ್ಧತಿಗಳು ಹುಟ್ಟಿಕೊಂಡಿವೆ. ಪ್ರಮುಖವಾದವುಗಳ ನಾಮನಿರ್ದೇಶನ ಇಲ್ಲಿ ಮಾಡಿದೆ:–

| ಹೆಸರು | ಕರ್ತೃ | ವರ್ಷ |
|---|---|---|
| ವ್ಯಾಪಕ ವರ್ಗೀಕರಣ | ಚಾರ್ಲ್ಸ್ ಕಟರ್ | ೧೮೯೧ |
| ಕಾಂಗ್ರೆಸ ,, | ಲೈಬ್ರರಿ ಆಫ್ ಕಾಂಗ್ರೆಸ್ | ೧೯೦೪ |
| ವಿಷಯಪ್ರಧಾನ ,, | ಜೇಮ್ಸ್ ಬ್ರೌನ್ | ೧೯೦೬ |
| ಗ್ರಂಥಸೂಚಕ ,, | ಹೆನ್ರಿ ಬ್ಲಿಸ್ | ೧೯೩೩ |

'ವ್ಯಾಪಕ' ಪದ್ಧತಿ'ಯ ಸ್ಥಾಪಕರಾದ ಚಾರ್ಲ್ಸ್ ಕಟರ್ ಅವರು ಹಾರ್ವರ್ಡ ಕಾಲೇಜ ಗ್ರಂಥಾಲಯದಲ್ಲಿ ಕೆಲಸ ಮಾಡುತ್ತಿದ್ದಾಗ,

ದಶಾಂಶ ಪದ್ಧತಿಯಿಂದ ಸ್ಫೂರ್ತಿಗೊಂಡು, ತಮ್ಮ ವರ್ಗೀಕರಣ ಪುಸ್ತಕವನ್ನು ಪ್ರಕಟಿಸಿದರು. ಇದನ್ನು ವ್ಯಾಪಕ ಪದ್ಧತಿಯೆಂದು ಕರೆಯುವಲ್ಲಿ ಔಚಿತ್ಯ ವಿದೆ. ಇಲ್ಲಿ ಜ್ಞಾನಸಮುದಾಯವನ್ನು ಏಳು ಬೇರೆ ಬೇರೆ ಪಟ್ಟಿಗಳಲ್ಲಿ ರೂಪಿಸ ಲಾಗಿದೆ. ಮೊದಲಿನದು ಸ್ಥೂಲವಾಗಿದ್ದರೆ, ಎರಡನೆಯದು ಅದಕ್ಕೂ ತುಸು ವಿಸ್ತೃತವಾಗಿ, ಹೀಗೆಯೇ ಬೆಳೆಯುತ್ತ ಏಳನೆಯದು ತೀರ ಸೂಕ್ಷ್ಮ ಹಾಗೂ ಆಳವಾದ ವರ್ಗೀಕರಣವುಳ್ಳದ್ದಾಗಿದೆ. ಕಟರ್ ಅವರು ಗ್ರಂಥಾಲಯಗಳನ್ನೇ ಏಳು ರೀತಿಯಲ್ಲಿ ಎಣಿಸಿ, ಆ ಆ ಗ್ರಂಥಾಲಯಕ್ಕೆ ತಕ್ಕಂತೆ, ಈ ಏಳರಲ್ಲಿಯ ಒಂದು ವರ್ಗೀಕರಣ ಪಟ್ಟಿಯನ್ನು ಬಳಸಬೇಕೆಂದು ಗೊತ್ತುಪಡಿಸಿಕೊಂಡರು. ಬ್ರಿಟಿಶ್ ಮ್ಯೂಸಿಯಂನಂತಹ ಅತಿ ದೊಡ್ಡ ಗ್ರಂಥಾಲಯಕ್ಕೆ ೬ನೆಯ ವಿಸ್ತರಣವು ಅವಶ್ಯವಾಗಬಲ್ಲುದು ಎಂದು ಅವರ ಅನಿಸಿಕೆ.

ದಶಾಂಶ ಪದ್ಧತಿಯಲ್ಲಿ ಸಂಕೇತವು ಅಂಕಿಗಳನ್ನೊಳಗೊಂಡಿದ್ದಾಗಿದ್ದರೆ, ಇಲ್ಲಿಯ ಮುಖ್ಯ ವರ್ಗಗಳ ಸಂಕೇತವು ಅಕ್ಷರಗಳಲ್ಲಿದೆ. ಮೊದಲಿನದರಲ್ಲಿ ೧೦ ಮುಖ್ಯ ವರ್ಗಗಳಾಗಿದ್ದರೆ ಇಲ್ಲಿ ವರ್ಣಮಾಲೆಯ ಪ್ರಕಾರ ೨೭ ವರ್ಗಗಳು ಆಗುವುದರಿಂದ ಒಟ್ಟಿನ ಸಂಕೇತವು ದಶಾಂಶ ಪದ್ಧತಿಗಿಂತ ಸಣ್ಣದಾಗುವುದು. ಈ ೨೭ ಮುಖ್ಯ ವರ್ಗಗಳನ್ನು ಮುಂದೆ ವಿಭಜಿಸುವಾಗ ದಶಾಂಶರೂಪದಲ್ಲಿ ರುವ ಅಂಕಿಗಳೇ ಬರುತ್ತವೆ. ಹೀಗೆ ಈ ಮಿಶ್ರ ಸಂಕೇತದ ಬಗೆಯನ್ನು ಕಟರ್ ಅವರೇ ಮೊದಲಿಗೆ ಕಂಡುಹಿಡಿದರೆಂದು ಹೇಳಬಹುದು.

ವ್ಯಾಪಕ ಪದ್ಧತಿಯು ಸದ್ಯ ಅಪೂರ್ಣವಾಗಿದೆ. ಏಳನೆಯ ಪಟ್ಟಿಕೆಯ ತಯಾರಿಕೆಯಲ್ಲಿರುವಾಗ ಕಟರ್ ತೀರಿಕೊಂಡರು. ಈ ಪದ್ಧತಿಯು ಪಾಂಡಿತ್ಯ ಪೂರ್ಣವಾದದ್ದೆಂದು ಹೆಸರುಗೊಂಡರೂ, ಇದರಲ್ಲಿಯ ಮುಖ್ಯ ದೋಷ ವೆಂದರೆ, ವರ್ಗೀಕರಣವನ್ನು ಏಳು ಬೇರೆ ಬೇರೆ ಪಟ್ಟಿಗಳಲ್ಲಿ ಗುರುತಿ ಸಿದ್ದು. ಅದರ ಪ್ರಕಾರ ಮೊದಲಿನ ಹಂತದ ವರ್ಗೀಕರಣಕ್ಕೆ ಸರಿಹೋಗು ವಂತಹ ಒಂದು ಗ್ರಂಥಾಲಯವು ಮುಂದೆ ಬೆಳೆದು ೫-೬ನೆಯ ಹಂತಕ್ಕೆ ಬರುವಂತಾದರೆ, ಎಲ್ಲವನ್ನು ಬದಲು ಮಾಡಬೇಕು. ಏಕೆಂದರೆ ಪ್ರತಿ ಪಟ್ಟಿಕೆಗೆ ಸಂಕೇತವು ಅಲ್ಲಲ್ಲಿ ಬದಲಾಗುತ್ತ ಹೋಗುತ್ತದೆ. 'ಐತಿಹಾಸಿಕ ಶಾಸ್ತ್ರ'ಗಳಿಗೆ ಮೊದಲಿನ ಹಂತದಲ್ಲಿ E ಎಂಬ ಸಂಕೇತವಿದೆ. ಅದೇ ಆರನೆಯ ಹಂತ ದಲ್ಲಿ ಈ ವಿಷಯಕ್ಕೆ D ಎಂಬ ಸಂಜ್ಞೆ ಇದೆ. ಡ್ಯೂಯಿ ಅವರ ಪದ್ಧತಿಯ

ನಂತರ ಅಮೇರಿಕೆಯಲ್ಲಿ ಹೆಚ್ಚು ಪ್ರಚಾರದಲ್ಲಿದ್ದುದೆಂದರೆ ಇದೇ. ಅಲ್ಲಿ ಸುಮಾರು ಒಂದು ನೂರು ಪುಸ್ತಕಾಲಯಗಳು ಈ ಪದ್ಧತಿಯನ್ನನುಸರಿಸಿವೆ.

ಅಮೇರಿಕೆಯ ರಾಷ್ಟ್ರೀಯ ಗ್ರಂಥಾಲಯವಾದ, ಲೈಬ್ರರಿ ಆಫ್ ಕಾಂಗ್ರೆಸ್ ಇಡೀ ಜಗತ್ತಿನಲ್ಲೇ ಒಂದು ದೊಡ್ಡದಾದ ಪುಸ್ತಕಾಲಯವೆನ್ನಿಸಿಕೊಂಡಿದೆ. ಇಲ್ಲಿ ೮ ಲಕ್ಷ ಪುಸ್ತಕಗಳಿದ್ದು, ಈಗ ಮೂರೂವರೆ ಲಕ್ಷ ಪುಸ್ತಕಗಳನ್ನು ಮಾತ್ರ ವರ್ಗೀಕರಿಸಲಾಗಿದೆ. ಎಲ್ಲ ರೀತಿಯಿಂದಲೂ ಶ್ರೇಷ್ಠವಾದುದಾಗಿ ಈ ಗ್ರಂಥಾಲಯವನ್ನು ಮಾಡಬೇಕೆಂಬ ಉದ್ದೇಶದಿಂದ, ಅದಕ್ಕೊಂದು ಸ್ವತಂತ್ರ ವರ್ಗೀಕರಣ ಪದ್ಧತಿಯು ಬೇಕು ಎಂದು ಅದರ ಅಧಿಕಾರಿಗಳಿಗೆ ಎನಿಸಿತು. ಡಾ. ಹರ್ಬರ್ಟ ಪುಟ್ನಮ್‌ರವರು ಈ ಗ್ರಂಥಾಲಯದ ಆಡಳಿತ ಸೂತ್ರಗಳನ್ನು ತಮ್ಮ ಕೈಗೆ ತೆಗೆದುಕೊಂಡಾಗ ಹೊಸ ವರ್ಗೀಕರಣ ಪದ್ಧತಿಗೆ ಮೊದಲು ಮಾಡಿದರು. ಇದರ ವರ್ಗೀಕೃತ ವಿಷಯಾನುಸಾರ ಪಟ್ಟಿಗಳು ಪ್ರಕಟವಾಗುತ್ತಿದ್ದು, ಇನ್ನೂ ಮುಗಿದಿಲ್ಲ

ಓದುಗರಿಗೂ ವರ್ಗೀಕರಣ ಪದ್ಧತಿಗೂ ಇರುವ ಸಂಬಂಧ ಹಾಗೂ ಓದುಗರಿಗೂ ವರ್ಗೀಕರಣ ಮಾಡುವವರಿಗೂ ಆಗುವ ಅಡಚಣೆಗಳನ್ನು ಮನದಂದು ಈ ಪದ್ಧತಿಯು ಹುಟ್ಟಿಕೊಂಡಿದೆ. ಮತ್ತು ಮೇಲಣ ಎರಡೂ ಪದ್ಧತಿಗಳನ್ನು ಯಥೇಚ್ಛವಾಗಿ ಉಪಯೋಗಿಸಿಕೊಂಡಿದೆ. ಬೇರೆ ಬೇರೆ ವಿಷಯಾನುಸಾರ ಗುಂಪುಗಳನ್ನು, ಅವು ಬರಿಯ ವಿಷಯಗಳು ಎಂದು ತಿಳಿಯದೆ 'ಪುಸ್ತಕಗಳ ಗುಂಪು' ಎಂದು ಗಣಿಸಿಯೆ ಇಲ್ಲಿ ವರ್ಗೀಕರಣ ಮಾಡಲಾಗಿದೆ. ಆದರೆ ಒಬ್ಬ ಗ್ರಂಥಜ್ಞನಿಂದ ಇದು ನಿರ್ಮಿತವಾಗದಿರುವುದರಿಂದಲೂ, ಸರಕಾರದ ಒಂದು ಸಂಸ್ಥೆಯ ಮೂಲಕ ಕೆಲಸ ನಡೆಯುತ್ತಿರುವುದರಿಂದಲೂ, ತನ್ನ ಮುಂದೆ ಇಟ್ಟುಕೊಂಡ ಎಲ್ಲ ಆದರ್ಶಗಳನ್ನು ಇದಕ್ಕೆ ಸಾಧಿಸಲಾಗಿಲ್ಲವೆಂದೇ ಹೇಳಬೇಕು. ಇನ್ನೊಂದು ಕೊರತೆ ಎಂದರೆ ದಶಾಂಶ ವಿಧಾನವನ್ನು ಬಿಟ್ಟುಕೊಟ್ಟುದು.

ಜೇಮ್ಸ್ ಡಫ್ ಬ್ರೌನ್ ಇಂಗ್ಲಂಡಿನ ಮಾನನೀಯ ಗ್ರಂಥಜ್ಞರು. ದಶಾಂಶ ಪದ್ಧತಿಯನ್ನು ಹಿಂದೆ ಹಾಕುವುದಕ್ಕೆಂದು ೨-೩ ವರ್ಗೀಕರಣ ಮಾದರಿಗಳನ್ನು ಒಂದರ ಮೇಲೊಂದು ತಂದರು. ಕೊನೆಗಿನ ವಿಷಯಪ್ರಧಾನ

ವರ್ಗೀಕರಣದಲ್ಲಿ, ಬಾಹ್ಯರೇಷೆಯೇನೋ ಅಚ್ಚುಕಟ್ಟಾಗಿದೆ. ಕಾರ್ಯರೂಪ ದಲ್ಲಿ ಮಾತ್ರ ಅದು ತನ್ನ ಸಂಪೂರ್ಣ ಗುರಿಯನ್ನು ನಿಲುಕಲಾರದ್ದಾಗಿದೆ.

ಕೊನೆಯದಾಗಿ ಬ್ಲಿಸ್ ಅವರು ಪುಸ್ತಕಾಲಯ ಇತಿಹಾಸದಲ್ಲೇ ಕ್ರಾಂತಿಕಾರಕವಾದ ಒಂದು ವರ್ಗೀಕರಣ ಪದ್ಧತಿಯನ್ನು ಜನತೆಯ ಮುಂದೆ ಇಡುತ್ತಲಿದ್ದಾರೆ. ಗ್ರಂಥಾಲಯ ಹಾಗೂ ವರ್ಗೀಕರಣ ಶಾಸ್ತ್ರದ ಮೇಲೆ ಅಧಿಕಾರಯುತವಾಗಿ ಆಡಬಲ್ಲನೆಂದು ಇವರ ಖ್ಯಾತಿ ಇದೆ. ಇವರ ಗ್ರಂಥ ಸೂಚಕ ವರ್ಗೀಕರಣ ಇನ್ನೂ ಮುಗಿದಿಲ್ಲ.

## ದ್ವಿಬಿಂದು ವರ್ಗೀಕರಣ

ವರ್ಗೀಕರಣ ಶಾಸ್ತ್ರಕ್ಕೆ ಭಾರತದ ಮಹತ್ವದ ಕಾಣಿಕೆ, ಈ ದ್ವಿಬಿಂದು ಪದ್ಧತಿ ಹಿಂದಿನವುಗಳ ದೋಷಗಳನ್ನು ತಿದ್ದಿಕೊಂಡು, ಹೆಚ್ಚು ಆಳವಾಗಿಯೂ, ವ್ಯವಸ್ಥಿತವಾಗಿಯೂ ರಚಿಸಲ್ಪಟ್ಟಿದೆ. ಭಾರತೀಯ ಪುಸ್ತಕಗಳ ಅನುಕೂಲ ಕ್ಕೆಗೆ ಪ್ರಶಸ್ತವಾಗಿ ಇಂಬುಗೊಡಲಾಗಿದೆ.

ಈ ಪದ್ಧತಿಯ ಪ್ರವರ್ತಕರಾದ ಡಾ. ರಂಗನಾಥನ್ನರವರು ೧೯೨೪ರ ಸುಮಾರಿಗೇ ಇದರ ಹೊಳಹನ್ನು ಹಾಕತೊಡಗಿದ್ದರು. ಗ್ರಂಥಾಲಯಗಳ ವಿಶೇಷ ಅಭ್ಯಾಸಕ್ಕೆಂದು ಮದ್ರಾಸ ವಿಶ್ವವಿದ್ಯಾಲಯದ ಪರವಾಗಿ ಇಂಗ್ಲಂಡಕ್ಕೆ ಹೋದಾಗ, ಬಹಳ ಪ್ರಚುರವಾಗಿದ್ದ ಡ್ಯೂಯಿ ಅವರ ದಶಾಂಶ ಪದ್ಧತಿಯನ್ನು, ಪ್ರತಿಯೊಂದು ಗ್ರಂಥಾಲಯದವರೂ ತಮಗೆ ಸರಿದೋರಿದಂತೆ ಅದರಲ್ಲಿ ಬದ ಲಾವಣೆ ಮಾಡಿಕೊಳ್ಳುತ್ತಿರುವುದನ್ನು ಕಂಡರು. ಮರಳಿ ಮದ್ರಾಸ ವಿದ್ಯಾ ಪೀಠದ ಗ್ರಂಥಾಲಯಕ್ಕೆ ಬಂದ ಮೇಲೆ, ಒಂದು ವರ್ಷದಲ್ಲಿ ಅದರ ರೂಪರೇಷೆ ಗಳು ಸಿದ್ಧವಾದುವು. ಅದರಂತೆ ಮೊದಲಿಗೆ ಅಲ್ಲಿಯ ಎಲ್ಲ ಪುಸ್ತಕಗಳನ್ನು ವರ್ಗೀಕರಿಸಲಾಯಿತು. ಮುಂದಿನ ಆರು ವರ್ಷಗಳ ವರೆಗೂ ಪುಸ್ತಕಗಳಿಗೆ ಸರಿಯಾದ ನಂಬರನ್ನು ಹಾಕುವಲ್ಲಿ ಉಂಟಾಗುವ ತೊಡಕುಗಳನ್ನೆಲ್ಲ ಗಮನಿಸಿ, ಅದನ್ನು ತಿದ್ದಿದರು. ಹೆಚ್ಚಿನ ವಿಷಯವನ್ನು ಸೇರಿಸಿದರು. ಕೊನೆಗೆ ೧೯೩೩ರಲ್ಲಿ 'ದ್ವಿಬಿಂದು ವರ್ಗೀಕರಣ' ಪ್ರಕಟವಾಯಿತು. ಈಚೆಗೆ ಅದರ ಸುಧಾರಿತ ಮೂರನೆಯಾವೃತ್ತಿ ಬಂದಿದೆ; ಭಾರತದಲ್ಲಿ ಕೆಲವೇ ಭಂಡಾರಗಳು

ಈ ಪದ್ಧತಿಯನ್ನು ಬಳಸುತ್ತಲಿವೆ. ದೊಡ್ಡ ಗ್ರಂಥಾಲಯಗಳು ಈಗಾಗಲೇ ಡ್ಯೂಯಿಯವರನ್ನು ಅನುಸರಿಸಿದ್ದರಿಂದಲೂ, ಆ ಪದ್ಧತಿಗಿಂತ ಮೊದಲ ಪೆಟ್ಟಿಗೆ ಇದು ಬಹು ಕಷ್ಟದಾಯಕವಾಗಿ ತೋರುವುದರಿಂದಲೂ, ಇದರ ಪ್ರಸರಣ ಸಾಕಷ್ಟಾಗಿಲ್ಲ. ಆದರೂ ಭಾರತೀಯ ಹಾಗೂ ಪ್ರಾಚ್ಯ ವಿಷಯಗಳು ಬಂದಾಗ ಡ್ಯೂಯಿ ಸಂಕೇತವನ್ನು, ದ್ವಿಬಿಂದು ವರ್ಗೀಕರಣ ಪ್ರಕಾರ ಬೆಳೆಸುವುದು ಅಲ್ಲಲ್ಲಿ ಕಂಡುಬರುತ್ತದೆ.

ಇನ್ನು ಈ ಎರಡೂ ಪದ್ಧತಿಗಳ ವಿವರ ಪರಿಚಯಕ್ಕೆ ತೊಡಗುವ:—

## ೩. ದಶಾಂಶ ವರ್ಗೀಕರಣ ಪದ್ಧತಿ

### ಮುಖ್ಯ ವರ್ಗಗಳು

ಇಡೀ ಗ್ರಂಥಸಮುದಾಯವನ್ನು ಮೊದಲಿಗೆ ಒಂಬತ್ತು ಮುಖ್ಯ ವರ್ಗಗಳಲ್ಲಿ ವಿಭಾಗಿಸಲಾಗಿದೆ. ಅದು ಹೀಗೆ:—

| | | | |
|---|---|---|---|
| ೧೦೦ | ವೇದಾಂತ | ೫೦೦ | ಮೂಲ ಶಾಸ್ತ್ರಗಳು |
| ೨೦೦ | ಧರ್ಮ | ೬೦೦ | ಉಪಯುಕ್ತ ಕಲೆಗಳು |
| ೩೦೦ | ಸಮಾಜಶಾಸ್ತ್ರ | ೭೦೦ | ಲಲಿತ ಕಲೆಗಳು |
| ೪೦೦ | ಭಾಷಾಶಾಸ್ತ್ರ | ೮೦೦ | ವಾಙ್ಮಯ |

೯೦೦ ಇತಿಹಾಸ

ಒಂಬತ್ತಕ್ಕೆ ವಿಶಿಷ್ಟವಾಗಿ ಒಳಪಡದವುಗಳನ್ನು ಸಾಮಾನ್ಯವರ್ಗವೆಂದು ಗುರುತಿಸಲಾಗಿದೆ. ಅದರ ಸಂಕೇತ '೦೦೦' ಆಗಿದೆ.

ಇವುಗಳು ಬಂದ ಕ್ರಮದಲ್ಲಿ ಒಂದು ತಾರ್ಕಿಕ ಹಿನ್ನೆಲೆಯಿದೆ. ಬೇಕನ್ನನು ಹೇಳುವ ಸ್ಮರಣ, ಕಲ್ಪನೆ ಮತ್ತು ವಿಚಾರ ಎಂಬ ಜ್ಞಾನದ ಮೂರು ವಿಕಾಸಕ್ರಮಗಳು ಇವರಲ್ಲಿ ಕಂಡುಬರುತ್ತವೆ. ಮೊದಲಿನ ಆರು ವರ್ಗಗಳು ಮನುಷ್ಯನ ವಿಚಾರ ಅಥವಾ ಬುದ್ಧಿಶಕ್ತಿಯಿಂದ ನಿರ್ಮಿತವಾದವು. ಮನಸ್ಸೇ ಅದಕ್ಕೆ ಮೂಲವಾದುದರಿಂದ ವೇದಾಂತ ಮೊದಲಿಗೆ ಬಂದಿದೆ. ಪ್ರಾಥಮಿಕ ಮಾನವನ ಮನಸ್ಸು ಧರ್ಮ ಹಾಗೂ ದೇವರನ್ನು ಹೊಂದಿಕೊಂಡಿದ್ದರಿಂದ ಅದಕ್ಕೆ ಎರಡನೆಯ ಸ್ಥಾನ ಪ್ರಾಪ್ತವಾಗಿದೆ. ಮನುಷ್ಯ ಸಮಾಜಜೀವಿ

ಎಂದು ಹೇಳುವುದುಂಟಷ್ಟೆ. ಅಲ್ಲಲ್ಲಿ ಅಲೆದುಕೊಂಡು ಇರುವ ಮಾನವ. ಊರನ್ನು ಕಟ್ಟಿ, ಗುಂಪುಗುಂಪಾಗಿ ಇರತೊಡಗಿದ. ಅವನ ಸಮಾಜ ಹೀಗೆ ಬೆಳೆದುಕೊಂಡಿದೆ. ಅಂತೆಯೆ ಬಂದಿದೆ ಸಮಾಜಶಾಸ್ತ್ರ. ಸಮಾಜ ನಿರ್ಮಿತಿಯಾದ ಮೇಲೆ ಭಾಷೆ ಹುಟ್ಟಿತು. ಅದುವೆ ನಾಲ್ಕನೆಯ ವರ್ಗವಾದ ಭಾಷಾಶಾಸ್ತ್ರ. ಆಮೇಲೆ ಶುದ್ಧ ಶಾಸ್ತ್ರಗಳೂ ಅವುಗಳ ನೆಲೆಯಲ್ಲಿ ಸಿದ್ಧಗೊಂಡ ಉಪಯುಕ್ತ ಉದ್ಯಮಗಳೂ ನಮಗೆ ದೊರೆತಿವೆ. ಇನ್ನು ಕಲ್ಪನಾ ಪ್ರಧಾನವಾಗಿ ಲಲಿತಕಲೆಗಳೂ, ಸಾಹಿತ್ಯವೂ ಅನಂತರ ಬರಬೇಕಾದುದು ಅಷ್ಟೇ ಸಹಜವಾಗಿದೆ. ಕೊನೆಯದಾಗಿ ಇದ್ದುದನ್ನು, ನಡೆದುದನ್ನು ಬರೆದಿಡುವುದರಿಂದಾಗಿ ಇತಿಹಾಸ ಬಂದಿದೆ.

ಮುಖ್ಯ ವರ್ಗಗಳ ಸಂಯೋಜನೆ ಈ ರೀತಿ ಇರುವಾಗ, ಉಪಯುಕ್ತತೆಯ ದೃಷ್ಟಿಯಿಂದ ಇದರಲ್ಲಿ ಎರಡು ಮುಖ್ಯ ದೋಷಗಳನ್ನು ತೋರಿಸಲಾಗುತ್ತದೆ; ವಿಷಯಸಂಬಂಧವುಳ್ಳ ಭಾಷಾಶಾಸ್ತ್ರ, ಸಾಹಿತ್ಯಗಳೂ, ಹಾಗೆಯೇ ಸಮಾಜಶಾಸ್ತ್ರ, ಇತಿಹಾಸಗಳೂ, ತುಂಬಾ ದೂರ ಸಿಡಿದುನಿಂತಿವೆ, ಎಂಬುದು.

## ಉಪವರ್ಗಗಳು

ಮುಖ್ಯ ವರ್ಗಗಳಿಂದ ಕ್ರಮವಾದ ವಿಷಯ ವಿಭಜನೆಯೇ ವರ್ಗೀಕರಣದ ಮುಖ್ಯ ತತ್ವವಷ್ಟೆ. ಮೇಲಿನ ಪ್ರತಿಯೊಂದು ಮುಖ್ಯ ವರ್ಗವೂ ಒಂಬತ್ತು ಉಪವರ್ಗಗಳಲ್ಲಿ ವಿಭಾಗಿಸಲಾಗಿದೆ. ಉದಾಹರಣೆಗೆ:—

೯೦೦ ಇತಿಹಾಸ
- ೯೧೦ ಭೂಗೋಲ
- ೯೨೦ ಜೀವನ ಚರಿತ್ರೆ
- ೯೩೦ ಪುರಾತನ ಇತಿಹಾಸ
- ೯೪೦ ಯುರೋಪಿನ ಇತಿಹಾಸ
- . . .
- ೯೯೦ ಸಮುದ್ರ ಪ್ರದೇಶಗಳ ಇತಿಹಾಸ

ಇದು ಡ್ಯೂಯಿಯವರು ಕೊಟ್ಟಿರುವ ಎರಡನೆಯ ಪಟ್ಟಿ. ಇದಲ್ಲದೆ ಈ ಉಪವರ್ಗಗಳು ಮತ್ತೆ ಒಂಬತ್ತು ವಿಭಾಗಗಳಾಗಿ ಮಾಡಲ್ಪಟ್ಟಿವೆ.

**೩೦೦ ಸಮಾಜ ಶಾಸ್ತ್ರ**

೩೭೦ ಶಿಕ್ಷಣಶಾಸ್ತ್ರ

೩೭೧ ಶಿಕ್ಷಕರು, ಕಲಿಸುವ ಪದ್ಧತಿಗಳು

೩೭೨ ಪ್ರಾಥಮಿಕ ಶಿಕ್ಷಣ

....

೩೭೬ ಸ್ತ್ರೀಯರ ಶಿಕ್ಷಣ

೩೭೭ ಧಾರ್ಮಿಕ ಶಿಕ್ಷಣ ಇ.

ಇದು ಮೂರನೆಯ ಪಟ್ಟಿಯಲ್ಲಿ ಬರುವಂತಹದು. ಈ ಮೂರು ಸ್ಥಾನಗಳು ತುಂಬಿದೊಡನೆ ಅವುಗಳ ಮುಂದೆ ದಶಾಂಶ ಚಿಹ್ನೆ( . )ಯೊಂದನ್ನು ಇಟ್ಟು, ಮತ್ತೆ ಆ ಪುಸ್ತಕದ ನಿರ್ದಿಷ್ಟ ವಿಷಯಕ್ಕೆ ಬರುವವರೆಗೂ ಅದನ್ನು ವಿಭಾಗಿಸಬಹುದು. ಉದಾಹರಣೆಗೆ—

೮೦೦ ಸಾಹಿತ್ಯ

೮೨೦ ಇಂಗ್ಲಿಷ ಸಾಹಿತ್ಯ

೮೨೨ ಇಂಗ್ಲಿಷ ನಾಟಕ

೮೨೨.೩ ಎಲಿಜಾಬೆಥಳ ಕಾಲದ ನಾಟಕಗಳು

೮೨೨.೩೩ ಶೇಕ್ಸಪಿಯರನ ನಾಟಕಗಳು

ಹೀಗೆ ಬರಿ ಅಂಕಿಗಳ ಸಂಕೇತದಲ್ಲಿಯೇ ಬೇಕಾದಷ್ಟು ಸೂಕ್ಷ್ಮವಾಗಿ ಒಂದು ಪುಸ್ತಕವನ್ನು ವರ್ಗೀಕರಿಸಬಹುದು. ಇದರಂತೆಯೇ ವರ್ಗೀಕರಿಸುತ್ತ ಪುಸ್ತಕದ ನಿರ್ದಿಷ್ಟ ವಿಷಯವನ್ನು ತಲುಪಿದಾಗ ಅದು ಆ ಗ್ರಂಥದ ವರ್ಗ ಸಂಖ್ಯೆಯಾಗುತ್ತದೆ. ಮತ್ತು ಅದನ್ನು ಪ್ರತ್ಯೇಕಿಸಲು ವರ್ಗಸಂಖ್ಯೆಯ ಬುಡದಲ್ಲಿ 'ಗ್ರಂಥಸಂಖ್ಯೆ'ಯನ್ನೂ ಕಾಣಿಸಬೇಕು. ಡ್ಯೂಯಿ ಅವರ ಪ್ರಕಾರ ಈ ಗ್ರಂಥಸಂಖ್ಯೆಯನ್ನು ಗುರುತಿಸಲಿಕ್ಕೆ ಲೇಖಕರ ಹೆಸರಿನ ಮೊದಲಿನ ಮೂರು ಅಕ್ಷರಗಳನ್ನು ಬರೆಯುವ ಕ್ರಮವಿದೆ. ಇಂಗ್ಲಿಷಿನಲ್ಲಿ ಹೀಗಾದರೆ, ಕನ್ನಡದಲ್ಲಿ ಹೆಸರಿನ ಎರಡು ಅಕ್ಷರ ಬರೆದರೆ ಸಾಕು.

ನೆಹರೂರವರ ಆತ್ಮವೃತ್ತಾಂತ $\frac{\text{೯೨೩.೪}}{\text{ನೆಹ.}}$

## ಸಾಮಾನ್ಯ ಉಪವಿಭಾಗಗಳು

ಕೆಲವು ಉಪವಿಭಾಗಗಳು ಎಲ್ಲ ಮುಖ್ಯ ಅಥವಾ ಉಪವರ್ಗಗಳಲ್ಲಿ ಬರುವುವಿರುವುದರಿಂದ ಅವುಗಳಿಗಾಗಿ ಬೇರೆ ಸಂಕೇತವನ್ನು ಕೊಡಲಾಗಿದೆ. ಒಂದು ಪತ್ರಿಕೆ ಸಾಹಿತ್ಯಿಕ ಪತ್ರಿಕೆ ಇರಬಹುದು; ಗ್ರಂಥಾಲಯ ಶಾಸ್ತ್ರವೆಂಬ ಉಪವರ್ಗಕ್ಕೆ ಸಂಬಂಧಿಸಿದ ಪತ್ರಿಕೆ ಇರಬಹುದು. ಇಲ್ಲವೆ ಸಂಗೀತ ಮತ್ತು ಇತರ ಲಲಿತ ಕಲೆಗಳಿಗೆ ಸಂಬಂಧಿಸಿದ್ದಿರಬಹುದು. ಇವುಗಳಲ್ಲಿ ಪತ್ರಿಕೆ ಎಂಬುದು ಒಂದಲ್ಲದೆ ಇತರ ಕಡೆಗಳಲ್ಲೂ ಬರುವುದರಿಂದ ಅದಕ್ಕೆ ಸಾಮಾನ್ಯ ಉಪವಿಭಾಗ ಎಂದು ಕರೆಯಲಾಗಿದೆ.

ಇಂಥ ಇತರ ಉಪವಿಭಾಗಗಳು ಯಾವುವೆಂದರೆ:—

೦೧ ತಾತ್ವಿಕ ಹಿನ್ನೆಲೆ.
೦೨ ರೂಪರೇಷೆ, ಕೈಪಿಡಿ.
೦೩ ನಿಘಂಟು ಮತ್ತು ವಿಶ್ವಕೋಶ.
೦೪ ಪ್ರಬಂಧಗಳು, ಭಾಷಣಗಳು.
೦೫ ಪತ್ರಿಕೆಗಳು.
೦೬ ಸಂಸ್ಥೆಗಳು, ಪ್ರದರ್ಶನಗಳು.
೦೭ ಶಿಕ್ಷಣ.
೦೮ ಸಂಗ್ರಹಗಳು.
೦೯ ಐತಿಹಾಸಿಕ.

ಈ ಸಂಕೇತವನ್ನು ಇತರ ಸಂಕೇತಗಳಿಂದ ಗುರುತಿಸಲು, ಹಿಂದೆ ಒಂದು ಸೊನ್ನೆಯನ್ನು ( ೦ ) ಬರೆಯಬೇಕಾಗುವುದು. ಉದಾಹರಣೆಗೆ—

೮೦೫ ಸಾಹಿತ್ಯಿಕ ಪತ್ರಿಕೆ.
೦೨೦.೫ ಗ್ರಂಥಾಲಯದ ಮೇಲಿನ ಪತ್ರಿಕೆ.
೭೮೦.೫ ಸಂಗೀತದ ಮೇಲಿನ ಪತ್ರಿಕೆ.
೩೭೮.೦೫ ಕಾಲೇಜ 'ಮಿಸೆಲನಿ'ಯೊಂದು.

ಇದಕ್ಕೆ ಅಪವಾದವಾಗಿ ಇತಿಹಾಸ ವರ್ಗದಲ್ಲಿ ಮಾತ್ರ ಈ ಸಾಮಾನ್ಯ ಉಪವಿಭಾಗಗಳನ್ನು ಹೇಳುವಾಗ ಎರಡು ಸೊನ್ನೆಗಳನ್ನು ಸೇರಿಸಬೇಕಾಗುವುದು. ಏಕೆಂದರೆ ಒಂದೇ ಸೊನ್ನೆಯಿಂದ ಅಲ್ಲಿ ಕಾಲಾವಧಿಯನ್ನು ಸೂಚಿಸಿದಂತಾಗುವುದು.

## ಇತರ ವಿಧಾನಗಳು

ಮೇಲೆ ಹೇಳಿದಷ್ಟರಿಂದಲೇ ವರ್ಗೀಕರಣ ಮುಗಿಯುವುದಿಲ್ಲ. ಪುಸ್ತಕದ ವಿಷಯವು ವಿಶಿಷ್ಟ ಪ್ರಕಾರದಲ್ಲಿ ಅಥವಾ ವಿಶಿಷ್ಟ ದೃಷ್ಟಿಕೋನದಿಂದ ಬರೆಯಲಾಗಿರುತ್ತದೆ. ಇಲ್ಲವೆ ಇನ್ನೊಂದು ಬೇರೆ ವಿಷಯದೊಡನೆ ಹೊಂದಿಕೊಂಡಿರುತ್ತದೆ. ಇದಕ್ಕೆ ಕಾರಣ, ಪ್ರತಿಯೊಂದು ಪುಸ್ತಕದ ತನ್ನದೇ ಆದ ವಿಶಿಷ್ಟ ಸ್ವರೂಪ. ಇವುಗಳಿಗೆಲ್ಲ ವರ್ಗೀಕರಣ ಯೋಜನೆಯಲ್ಲಿ ಅನುಕೂಲತೆ ಇರಬೇಕಾಗುವುದು. ಅದಕ್ಕಾಗಿ ಕೆಲವು ವಿಧಾನಗಳಿವೆ. ಮತ್ತು ಈ ವಿಧಾನ ಅದೇ ಬಗೆಯಲ್ಲಿ, ಒಂದಲ್ಲದೆ ಇತರ ವರ್ಗ ಉಪವರ್ಗಗಳಲ್ಲಿಯೂ ಬಂದು ನೆನಪಿಡುವುದಕ್ಕೆ ಸುಲಭವಾಗುವುದು, ಮತ್ತು ವರ್ಗೀಕರಣ ಸಂಕೇತವು ಅನೇಕ ಕಡೆ ಕಿರಿದುಗೊಳ್ಳುವುದು. ಮೇಲೆ ಹೇಳಿದ 'ಸಾಮಾನ್ಯ ಉಪವಿಭಾಗ' ಈ ಬಗೆಯ ವಿಧಾನಗಳಲ್ಲೊಂದು.

ಇತರ ವಿಧಾನಗಳಲ್ಲಿ ಭಾಷಾವಾರ ವಿಭಾಗವು ಒಂದು ಮುಖ್ಯ ಅಂಶವಾಗಿದೆ. ಭಾಷಾಶಾಸ್ತ್ರ ಹಾಗೂ ಸಾಹಿತ್ಯ ವರ್ಗಗಳಲ್ಲಿ ಮೇಲಿಂದ ಮೇಲೆ ಭಾಷೆಗಳಿಗೆ ಸಂಕೇತದ ಅಗತ್ಯವಿರುತ್ತದೆ. ಆದುದರಿಂದ ಅವುಗಳಿಗೆಂದು ನಿರ್ದಿಷ್ಟ ಅಂಕಿಯನ್ನು ಕೊಡಲಾಗಿದೆ. ಅವುಗಳಲ್ಲಿ ಕೆಲವು ಇಂತಿವೆ:—

೧. ಅಮೇರಿಕನ್.
೨. ಇಂಗ್ಲಿಷ್.
೩. ಜರ್ಮನ್.
೪. ಫ್ರೆಂಚ್.
೫. ಇಟಾಲಿಯನ್.
೬. ಸ್ಪೇನಿಶ್.
೭. ಲ್ಯಾಟಿನ್.
೮. ಗ್ರೀಕ್.
೯. ಇತರ ಭಾಷೆಗಳು.

೪೦೦. ಭಾಷಾಶಾಸ್ತ್ರ. ೮೦೦. ಸಾಹಿತ್ಯ.
೪೧೦. (ತುಲನಾತ್ಮಕ ಭಾಷಾಭ್ಯಾಸ) ೮೧೦. ಅಮೇರಿಕನ್ ಸಾಹಿತ್ಯ.
೪೨೦. ಇಂಗ್ಲಿಷ ಭಾಷೆ. ೮೨೦. ಇಂಗ್ಲಿಷ್ ಸಾಹಿತ್ಯ.
೪೯೧.೨ ಸಂಸ್ಕೃತ ಭಾಷೆ. ೮೯೧.೨ ಸಂಸ್ಕೃತ ಸಾಹಿತ್ಯ ಇ.

ಇದರಂತೆ ಮುಖ್ಯತಃ ಇತಿಹಾಸ ವರ್ಗದಲ್ಲಿ ಪ್ರದೇಶಗಳು ಬರುತ್ತವೆ. ಅವುಗಳಿಗೂ ನಿರ್ದಿಷ್ಟ ಸಂಖ್ಯೆಯನ್ನು ಗೊತ್ತುಪಡಿಸಿದೆ. ಕಾಲಾವಧಿಯ ವಿಭಾಗಗಳನ್ನು ಸಾಹಿತ್ಯದಲ್ಲಿಯೂ, ಇತಿಹಾಸದಲ್ಲಿಯೂ ತೋರಿಸಬೇಕಾಗುತ್ತದೆ. ಕೊನೆಯದಲ್ಲದಿದ್ದರೂ, ಯಾವುದೇ ಭಾಷೆಯ ಸಾಹಿತ್ಯವಿರಲಿ, ಅವಕ್ಕೆಲ್ಲ ಸಾಮಾನ್ಯವಾಗಿರುವ ಸಾಹಿತ್ಯಿಕ ರೂಪಗಳಿಗೂ ಸಂಕೇತ ಇದೆ.

ಈ ಎಲ್ಲ ವಿಧಾನಗಳ ಅಥವಾ ವರ್ಗಗಳ ಸಂಕೇತದ ಕುರಿತು ಒಂದು ಮಾತು. ಇಂಗ್ಲಿಷ್ ಎಂದರೆ ಅದರ ಸಂಕೇತ ಯಾವಾಗಲೂ ೨. ಆದರೆ ೨ ಎಂಬ ಸಂಕೇತ ಬಂದಾಕ್ಷಣ ಅದು ಯಾವಾಗಲೂ ಇಂಗ್ಲಿಷ್ ಅಲ್ಲ. ಅದು ಧಾರ್ಮಿಕ ವರ್ಗವಾಗಬಹುದು, ಸಾಹಿತ್ಯ ವಿಭಾಗದಲ್ಲಿಯ ನಾಟಕವಾಗಬಹುದು.

ದಶಾಂಶ ಪದ್ಧತಿಯ ಬರಿಯೆ ರೂಪರೇಷೆಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ. ಹೆಚ್ಚಿನ ವಿವರಗಳನ್ನು, ವರ್ಗೀಕರಣ ಮಾಡುವಾಗ ಮೂಲ ಗ್ರಂಥ ನೋಡಿ, ತಿಳಿದುಕೊಂಡೇ ಮುಂದೆ ಸಾಗಬೇಕಾಗುತ್ತದೆ.

## ೪. ದ್ವಿಬಿಂದು ವರ್ಗೀಕರಣ

### ಮೆಕ್ಯಾನೊ ತಳಹದಿ

ಈ ಪದ್ಧತಿಯ ಮುಖ್ಯ ವೈಶಿಷ್ಟ್ಯವೆಂದರೆ, ದಶಾಂಶ ಪದ್ಧತಿಯಂತೆ ಸಿದ್ಧವಾಗಿಯೆ ಇದ್ದ ನಂಬರನ್ನು ಕೊಡಲು ಬರುವುದಿಲ್ಲ. ಉದಾ:— 'ಜರ್ಮನಿಯ

ರಾಜ್ಯದಾಡಳಿತ' ಎಂಬ ವಿಷಯಕ್ಕೆ ೩೫೪·೪೩ ಎಂಬ ನಂಬರನ್ನು ನಿರ್ದಿಷ್ಟವಾಗಿ ದಶಾಂಶ ವರ್ಗೀಕರಣದಲ್ಲಿ ಕಾಣಿಸಲಾಗಿದೆ. ಇಲ್ಲಿ ಹಾಗಿಲ್ಲ. ಎಂದರೆ ಕೆಲವು ಮೂಲ ಸಂಜ್ಞೆಗಳಿಂದ ನಾವು ಅದನ್ನು ಕಟ್ಟಬೇಕಾಗುತ್ತದೆ. ಇತಿಹಾಸ ವಿಷಯಕ್ಕೆ ಒಂದು ಸಂಜ್ಞೆ ಇದೆ. ಜರ್ಮನಿಗೆ ಸಂಕೇತ ಬೇರೆ, ಆಡಳಿತ ಎಂಬುದಕ್ಕೆ ಮತ್ತೊಂದು ಸಂಕೇತ. ಇವು ಮೂರನ್ನೂ ಕೂಡಿಸಿ ಆ ಗಳಿಗೆಗ ಒಂದು ನಂಬರನ್ನು ನಾವು ತಯಾರಿಸಬೇಕಾಗುತ್ತದೆ. ಮಕ್ಕಳ ಆಟಿಗೆಯ ಪೆಟ್ಟಿಗೆ ಇರುವುದಿಲ್ಲವೇ ? ಅದರಲ್ಲಿ ಬಿಡಿಬಿಡಿಯಾಗಿ ಅನೇಕ ಆಟಿಗೆಯ ಸಲಕರಣೆಗಳು ಇರುತ್ತವೆ. ಅವುಗಳ ಸಹಾಯದಿಂದ ಮಕ್ಕಳು ಒಂದು ಮಂದಿರವನ್ನು ರಚಿಸಬಹುದು, ಅಡಿಗೆಯ ಮನೆಯನ್ನು ಸಿದ್ಧಗೊಳಿಸಬಹುದು, ಗೌರಿಯನ್ನು ಕೂಡಿಸಿ ಹೂವಿನ್ಯದ ಮಂಟಪವನ್ನು ಮಾಡಬಹುದು. ಈ ನಿಮಿತ್ತ ಇದಕ್ಕೆ ಮೆಕ್ಯಾನೊ ರೀತಿ ಎಂದು ಕರೆಯಲಾಗಿದೆ. ಇದರಿಂದಾಗಿ, ಡ್ಯೂಯಿ ಅವರ ಪದ್ಧತಿಯಂತೆ ಪ್ರತಿಯೊಂದು ಸಣ್ಣ ವಿಷಯಕ್ಕೂ ನಂಬರು ಹಾಕಿ ಇಡುವುದೆಂಬ ಬಂಧನ ಇಲ್ಲ. ಮತ್ತಲ್ಲದೆ, ಮುಂದೆ ಯಾವುದೇ ವಿಷಯ ಬರಲಿ, ಅದಕ್ಕೆ ಸಮರ್ಪಕವಾದ ಸಂಕೇತವನ್ನು ಕೊಡಬಹುದು. ಹೈಡ್ರೋಜೆನ್ ಬಾಂಬಿನ ವಿಷಯದ ಮೇಲೆ ಪುಸ್ತಕ ಬಂದರೆ, ಡ್ಯೂಯಿ ಅವರ ಯೋಜನೆಯಲ್ಲಿ ಜಾಗ ಮಾಡುವುದು ಕಷ್ಟ. ಇಲ್ಲಿ ಆ ತೊಡಕಿಲ್ಲ. ಅವರು ಹೇಳಿಲ್ಲವಲ್ಲ ಎಂದು ಮಿಡುಕಬೇಕಿಲ್ಲ. ಅಂತು ದ್ವಿಬಿಂದು ಪದ್ಧತಿಯಲ್ಲಿ ಮೂಲವಾದ ಕೆಲವು ಸಂಕೇತಗಳನ್ನು ಕೊಟ್ಟಿದೆ. ಅವುಗಳ ಮೇಲಿಂದ ಬೇಕಾದ ವಿಷಯಕ್ಕೆ ನಿರ್ದಿಷ್ಟ ಸಂಕೇತವನ್ನು ರೂಪಿಸಬಹುದು.

## ಮುಖ್ಯ ವರ್ಗಗಳು

ಇಡೀ ಪುಸ್ತಕರೂಪೀ ಜ್ಞಾನಸಮುದಾಯವನ್ನು ಸ್ಥೂಲವಾಗಿ ವರ್ಗೀಕರಿಸುವಾಗ ಡ್ಯೂಯಿ ಅವರಲ್ಲಿ ಹತ್ತೇ ಮುಖ್ಯ ವರ್ಗಗಳನ್ನು ಕಲ್ಪಿಸಿದ್ದಾಗಿದೆ. ಆದರೆ ದ್ವಿಬಿಂದುವಿನಲ್ಲಿ ಅವು ೨೮ ಇವೆ. ಮುಖ್ಯ ವರ್ಗಗಳ ಹರಹು ಹೆಚ್ಚಿಗಿರುವುದರಿಂದ ಅವು ಹೆಚ್ಚು ನಿರ್ದುಷ್ಟವಾಗಿವೆ, ಮತ್ತು ಸಂಕೇತದ ಪ್ರಮಾಣ ತುಸು ಕಡಿಮೆಯಾಗುವುದಕ್ಕೆ ಅವಕಾಶವಿದೆ. ಆ ಇಪ್ಪತ್ತೆಂಟು ಮುಖ್ಯ ವರ್ಗಗಳು ಇಂತಿವೆ:—

## ಶಾಸ್ತ್ರಗಳು

A ಸಾಮಾನ್ಯ ವಿಜ್ಞಾನ.
B ಗಣಿತ ಶಾಸ್ತ್ರ.
C ಭೌತ ಶಾಸ್ತ್ರ.
D ಸ್ಥಾಪತ್ಯ.
E ರಸಾಯನ ಶಾಸ್ತ್ರ.
F ತಂತ್ರ ಶಾಸ್ತ್ರ.
(ಔದ್ಯೋಗಿಕ ರಸಾಯನ)
G ಜೀವ ವಿಜ್ಞಾನ.

H ಭೂಶಾಸ್ತ್ರ.
I ಸಸ್ಯ ಶಾಸ್ತ್ರ.
J ಕೃಷಿ ಶಾಸ್ತ್ರ.
K ಪ್ರಾಣಿ ಶಾಸ್ತ್ರ.
L ಔಷಧಿ ಶಾಸ್ತ್ರ.
M ಶಾಸ್ತ್ರ ಸಾಧಿತ.
ಉಪಯುಕ್ತ ಕಲೆಗಳು

Δ ಅನುಭಾವ.

## ಮಾನವ್ಯಗಳು

N ಲಲಿತ ಕಲೆಗಳು.
O ಸಾಹಿತ್ಯ.
P ಭಾಷಾಶಾಸ್ತ್ರ.
Q ಧರ್ಮ
R ತತ್ವಜ್ಞಾನ.
S ಮನಶ್ಶಾಸ್ತ್ರ.
T ಶಿಕ್ಷಣ.

U ಭೂಗೋಲ.
V ಇತಿಹಾಸ.
W ರಾಜ್ಯಶಾಸ್ತ್ರ.
X ಅರ್ಥಶಾಸ್ತ್ರ.
Y ಇತರ ಸಾಮಾಜಿಕ ಶಾಸ್ತ್ರಗಳು,
Z ನ್ಯಾಯಶಾಸ್ತ್ರ.

ಇಲ್ಲಿ ಮೊದಲಿಗೆ ಶಾಸ್ತ್ರ ವಿಷಯಗಳನ್ನು ಹೇಳಿ, ಆಮೇಲೆ ಮಾನವ್ಯಗಳನ್ನು ಹೇಳಿದೆ. ಇವೆರಡರ ಮಧ್ಯೆ ನಿಲ್ಲುವಂತಹದು ಅನುಭಾವ ಅಥವಾ ಅಧ್ಯಾತ್ಮ. ಇಲ್ಲಿಯೂ ಸಹಿತ, ನಾವು ತಾರ್ಕಿಕ ಸಂಬಂಧವನ್ನು ಕಾಣಬಹುದು. ಉದಾ:— ಲಲಿತ ಕಲೆಗಳಿಂದ ಮುಂದಿನ ವಿಷಯಗಳಲ್ಲಿ ನೋಡುವ. ಲಲಿತ ಕಲೆಗಳ ಮುಂದಣ ಹೆಜ್ಜೆಯೆ ಸಾಹಿತ್ಯ. ಸಾಹಿತ್ಯವಾದ ಕೂಡಲೇ ಅದರ ಜೊತೆಗೆ ಭಾಷಾಶಾಸ್ತ್ರವಿರುವುದು ಸ್ವಾಭಾವಿಕ. ಆನಂತರ ಧರ್ಮ ಬಂದುದಕ್ಕೆ, ಲೇಖಕರ ಮಾತಿನಲ್ಲಿ ಕಾರಣ ಹೇಳುವುದಾದರೆ, 'ಮನುಷ್ಯನ ಮಾತಿನ ಶಕ್ತಿಯ ನಿಜವಾದ ಉಪಯೋಗವು ದೇವರನ್ನು ಸ್ತುತಿಸುವಲ್ಲಿಯೆ

ಇದೆಯೆಂದು ನಮ್ಮ ಪೂರ್ವಜರು ಹೇಳಿಲ್ಲವೆ?' ತನ್ನ ಧರ್ಮ ಕಟ್ಟಿಕೊಂಡ ಮೇಲೆ ಮನುಷ್ಯನು, ದೇವರು ಮತ್ತು ಇತರ ವಿಷಯದಲ್ಲಿ ತಾತ್ವಿಕ ವಿಚಾರಕ್ಕೆ ತೊಡಗುವನು. ಆಪಕಾರಣ ಧರ್ಮ ಮುಗಿದೊಡನೆ ತತ್ವಶಾಸ್ತ್ರ ಬಂದಿದೆ. ಇದು ಮನಸ್ಸಿನ ಹೆಚ್ಚಿನ ಉಪಯೋಗವನ್ನು ಅವಲಂಬಿಸುವುದರಿಂದ, ಮನಶ್ಶಾಸ್ತ್ರವನ್ನು ಅನಂತರ ಕಾಣಿಸಲಾಯಿತು. ಮತ್ತೆ ಈ ಮನಸ್ಸನ್ನು ಅಣಿಗೊಳಿಸುವುದು ಶಿಕ್ಷಣ ತಾನೆ.

ಇನ್ನು ಈ ಯಾವ ವರ್ಗಗಳಿಗೂ ಸೇರಲಾಗದ ಕೆಲವು ವಿಷಯಗಳಿವೆ. ಉದಾ:— ವಿಶ್ವಕೋಶ, ನಿಘಂಟು, ಗ್ರಂಥಾಲಯಶಾಸ್ತ್ರ ಇತ್ಯಾದಿ. ಇಂಥವುಗಳನ್ನು ಸಾಮಾನ್ಯ ವಿಷಯಗಳೆಂದು ೧–೯ರ ವರೆಗಿನ ಅಂಕಿಗಳಿಂದ ಗುರುತಿಸಲಾಗಿದೆ.

## ಮುಂದಿನ ಹೆಜ್ಜೆ

ಈ ೨೮ ಮುಖ್ಯ ವರ್ಗಗಳಲ್ಲದೆ, ಮುಂದಣ ವರ್ಗೀಕರಣದಲ್ಲಿಯೂ ದ್ವಿಬಿಂದು ಪದ್ಧತಿಯು ಸ್ವತಂತ್ರ ದಾರಿಯನ್ನು ಹಿಡಿದಿದೆ. ಪ್ರತಿಯೊಂದು ಮುಖ್ಯ ವರ್ಗವನ್ನು ಯಾವ ಯಾವ ರೀತಿಯಿಂದ ಮುಂದುವರಿಸಬೇಕೆನ್ನುವಲ್ಲಿ, ಆ ವಿಷಯಕ್ಕೆ ಅನುರೂಪವಾದ ರೀತಿಯಲ್ಲೇ ಕೆಲವು ವೈಶಿಷ್ಟ್ಯಗಳನ್ನು ಗುರುತಿಸಿದ್ದಾಗಿದೆ. ಉದಾ:— ಸಾಹಿತ್ಯವೆಂಬ ಮುಖ್ಯ ವರ್ಗವನ್ನು ಯಾವ ರೀತಿಯಲ್ಲಿ ಮುಂದುವರಿಸಿದರೆ ವರ್ಗೀಕರಣವು ಸಯುಕ್ತಿಕವಾಗುವುದು ಎಂಬುದು ಮಹತ್ವದ ಮಾತಾಗಿದೆ. ಸಾಹಿತ್ಯಿಕ ಪುಸ್ತಕಗಳಲ್ಲಿ ಮೊದಲಿಗೆ ಅದರ ಭಾಷೆ ಮುಖ್ಯವಾದುದು; ಆಮೇಲೆ ಅವುಗಳ ಸಾಹಿತ್ಯರೂಪ, ಆನಂತರ ಅದನ್ನು ಬರೆದವರು, ಮತ್ತು ಈ ವಿಷಯದಲ್ಲಿ ಅದು ಅವರ ಎಷ್ಟನೆಯ ಕೃತಿ ಎಂಬುದು ಕ್ರಮಗೊಂಡು ಬರುವಂತಹದಾಗಿದೆ.

**ಸಾಹಿತ್ಯ** (ಭಾಷೆ): (ಸಾಹಿತ್ಯರೂಪ): (ಲೇಖಕ): (ಪು. ಸಂಖ್ಯೆ).

ಇತಿಹಾಸವನ್ನು ಅದಕ್ಕನುಗುಣವಾದ ರೀತಿಯಲ್ಲಿ ಮುಂದುವರಿಸಲಾಗಿದೆ:

**ಇತಿಹಾಸ** (ಪ್ರದೇಶ): (ಸಮಸ್ಯೆ): (ಕಾಲ). ಅದರಂತೆ

**ಭಾಷಾಶಾಸ್ತ್ರ** (ಭಾಷೆ): (ಕಾಲವಿಭಾಗ): (ಸಮಸ್ಯೆ): (ಒಳವಿಷಯ).

ಉದಾಹರಣೆಗಳಿಂದ ತುಸು ಸ್ಪಷ್ಟಪಡಿಸಬಹುದು:—

**ಕೇಶಿರಾಜನ ಶಬ್ದಮಣಿ ದರ್ಪಣ:** –

| | | |
|---|---|---|
| P | ಭಾಷಾಶಾಸ್ತ್ರ. | |
| P | 33 | ಕನ್ನಡ ಭಾಷಾಶಾಸ್ತ್ರ. |
| P | 33 : E | ಹಳಗನ್ನಡ. |
| P | 33 : E 4 | ,, ನಿಘಂಟು. |

ಮೇಲೆ ಕೊಟ್ಟ ದರ್ಶಕ ಪಟ್ಟಿಯಿಂದ ಇದನ್ನು ಹೋಲಿಸಿ ನೋಡಬಹುದು.

## ದ್ವಿಬಿಂದುವಿನ ಕಾರ್ಯ

ಮೇಲಿಲ್ಲ ಕಂಡುಬರುವ ದ್ವಿಬಿಂದು ಚಿಹ್ನದ ( : ) ಕೆಲಸವೇನೆಂಬುದನ್ನು ನೋಡುವ. ಈ ಉಪವರ್ಗಗಳನ್ನು ಕಲ್ಪಿಸುವಲ್ಲಿ ಒಂದಕ್ಕಿಂತ ಹೆಚ್ಚು ವೈಶಿಷ್ಟ್ಯಗಳು ಕಂಡುಬರುವವಷ್ಟೆ. ಉದಾ:— ಭಾಷಾಶಾಸ್ತ್ರದಲ್ಲಿ ಭಾಷೆ. ಕಾಲವಿಭಾಗ, ಸಮಸ್ಯೆ, ಅದರ ಒಳ ವಿಷಯ ಎಂದು ನಾಲ್ಕು ವೈಶಿಷ್ಟ್ಯಗಳಿವೆ. ಅಗತ್ಯವಿದ್ದಲ್ಲಿ ಇವುಗಳನ್ನು ಬೇರ್ಪಡಿಸುವ ಮತ್ತು ಪುನಃ ಕೂಡಿಸಿಕೊಳ್ಳುವ ಕೆಲಸವನ್ನು ಈ ದ್ವಿಬಿಂದು ಮಾಡುತ್ತದೆ ಎಲ್ಲಿ ವೈಶಿಷ್ಟ್ಯದ ಸ್ವರೂಪವು ಮಾರ್ಪಟ್ಟಿತೋ, ಅವನ್ನು ಗುರುತಿಸುವುದಕ್ಕೆ ಈ ದ್ವಿಬಿಂದು ಬರುತ್ತದೆ. ನಾವು ಕಟ್ಟಿದ ನಂಬರನ್ನು ಗಟ್ಟಿಯಾಗಿ ನಿಲ್ಲಿಸುವ ಕೀಲಗಳೆಂದು ಇವಕ್ಕೆ ಕರೆಯಬಹುದು. ದಶಾಂಶ ಪದ್ಧತಿಯಲ್ಲಿ ದಶಾಂಶ ಚಿಹ್ನಕ್ಕಿಂತ ಇದಕ್ಕೆ ಹೆಚ್ಚಿನ ಕಾರ್ಯಭಾರ ಇದೆಯೆನ್ನಬೇಕು.

## ಸಂಕೇತ

ಪ್ರತಿಯೊಂದು ವರ್ಗೀಕರಣ ಪದ್ಧತಿಗೂ ಸಾಂಕೇತಿಕ ಅಥವಾ ಕೃತ್ರಿಮ ಭಾಷೆಯೊಂದಿರುವುದನ್ನು ನಾವು ಈಗಾಗಲೇ ನೋಡಿದ್ದೇವೆ. ದ್ವಿಬಿಂದು ಪದ್ಧತಿಯ ಭಾಷೆಯು ಬರಿಯ ಅಂಕಿಗಳನ್ನೊಳಗೊಂಡದ್ದಾಗಿರದೆ, ಮಿಶ್ರವಾದುದಾಗಿದೆ. ಅಂತು ಇಲ್ಲಿ ಬರುವ ಸಂಜ್ಞೆಗಳು ಇವಿಷ್ಟು ಬಗೆಯವು. (೧) ಹತ್ತು ಅರೆಬಿಕ್ ಅಂಕಿಗಳು (0 ಮತ್ತು ೧–೯). (೨) ಇಪ್ಪತ್ತಾರು ಇಂಗ್ಲಿಷ ಮುಖ್ಯಾಕ್ಷರಗಳು (A–Z). (೩) ಇಪ್ಪತ್ತುನಾಲ್ಕು ಉಪಾಕ್ಷರಗಳು. (a–z). [ i ಮತ್ತು o ಇವುಗಳನ್ನು ಬಿಟ್ಟಿದೆ]. (೪) △ ತ್ರಿಕೋನ. (೫) ದ್ವಿಬಿಂದು ಚಿಹ್ನ. (೬) '—' ಗೆರೆ. ಸಂಜ್ಞೆಗಳ ಒಟ್ಟು ಸಂಖ್ಯೆ ೬೩.

ಇವುಗಳನ್ನು ಒಟ್ಟುಗೂಡಿಸಿ ಬರೆಯುವಾಗ ಸಂದಿಗ್ಧತೆ ಅಥವಾ ಅಸ್ಪಷ್ಟತೆ ಉಳಿಯದಂತೆ, ಸಂಜ್ಞೆಗಳ ತಾಕಲಾಟವಾಗದಂತೆ ಲೇಖಕರು ಬಹಳ ಪರಿಶ್ರಮ ಪಟ್ಟಿದ್ದಾರೆ.

ಈ ಸಂಜ್ಞೆಗಳು ಹಿಂದೆ ನೋಡಿದ ವರ್ಗಸಂಖ್ಯೆಯಲ್ಲೂ ಬರುತ್ತವೆ, ಗ್ರಂಥಸಂಖ್ಯೆಯಲ್ಲೂ ಬರುತ್ತವೆ. ದ್ವಿಬಿಂದು ಪದ್ಧತಿಯಲ್ಲಿ ವರ್ಗಸಂಖ್ಯೆಯು ಯಥಾರೀತಿ ವಿಷಯಾನುಗುಣವಾಗಿದೆ. ಗ್ರಂಥಸಂಖ್ಯೆಯು ಮಾತ್ರ ಸಾಮಾನ್ಯವಾಗಿ ಐದು ಘಟಕಗಳನ್ನು ಒಳಗೊಂಡಿರುತ್ತದೆ. (೧) ಆ ಪುಸ್ತಕದ ಭಾಷೆ. (೨) ಪ್ರಕಟಿತ ವರ್ಷ. (೩) ಹೆಚ್ಚಿನ ಪ್ರತಿಗಳು. (೪) ಸಂಪುಟ. (೫) ಪೂರಕಗಳು. ಇವುಗಳಲ್ಲಿ ಪ್ರತಿ ಪುಸ್ತಕಕ್ಕೆ ಐದೂ ಪ್ರಯೋಜನಕ್ಕಿವೆ ಎಂದು ಹೇಳಲು ಬಾರದು. ಹೆಚ್ಚಿನ ಪುಸ್ತಕಗಳಿಗೆ ಪ್ರಕಟಿತ ವರ್ಷವೊಂದೆಬರುತ್ತದೆ.

## ಸಾಮಾನ್ಯ ಉಪವಿಭಾಗಗಳು

ಸಾಮಾನ್ಯ ಉಪವಿಭಾಗಗಳಿಲ್ಲದೆ ಯಾವ ವರ್ಗೀಕರಣವೂ ಪೂರ್ಣವಾಗುವುದಿಲ್ಲ. ಇಲ್ಲಿಯ ವಿಭಾಗಗಳು ಹೆಚ್ಚು ವಿಸ್ತಾರವಾಗಿ ಇವೆ. ಇಂಗ್ಲಿಷಿನ ಎರಡನೆ ತರಗತಿಯ ಅಕ್ಷರಗಳನ್ನು ಇಲ್ಲಿ ಉಪಯೋಗಿಸಲಾಗಿದೆ. 'i' ಮತ್ತು 'o' ಇವು ಅಂಕಿಗಳ ಹಾಗೆ ಕಾಣುವುವೆಂದು ಅವೆರಡನ್ನು ಬಿಟ್ಟಿದೆ: ಎಂದರೆ ಒಟ್ಟು ೨೪ ಸಂಜ್ಞೆಗಳಿವೆ. **ಉದಾ:**—

a ವಿಷಯ ಸೂಚಿ.
b ಉದ್ದಿಮೆ.
c ಪ್ರಯೋಗಶಾಲೆ.
d ವಸ್ತು ಸಂಗ್ರಹಾಲಯ.
m ಪತ್ರಿಕೆಗಳು.
u ಪ್ರವಾಸ.
v ಐತಿಹಾಸಿಕ.
x ಸಂಕಲನಗಳು.
z ಸಂಗ್ರಹಗಳು.
:9 ವಿಮರ್ಶೆ.

ಇಲ್ಲಿಯ ಉಪವಿಭಾಗಗಳು ಎಲ್ಲ ವರ್ಗಗಳಿಗೂ ಅನ್ವಯಿಸುತ್ತವೆಂದೇನಲ್ಲ. ಆದರೂ ಬೇಕಾಗಬಹುದಾದ ಎಲ್ಲ ಇಂಥ ಉಪವಿಭಾಗಗಳಿಗೆ ಅವಕಾಶವನ್ನು ಒದಗಿಸಿಕೊಡಲಾಗಿದೆ. ಕೆಲವು ವರ್ಗಗಳಲ್ಲಿ ಈ ಸಂಕೇತಗಳಿಗೆ ಬೇರೆ ಅರ್ಥವೂ ಇದೆ. ಉದಾ:— ವೇದಾಂತ ವಿಭಾಗದಲ್ಲಿ 'x' ಇದಕ್ಕೆ ಟೀಕೆ ಅಥವಾ ವ್ಯಾಖ್ಯೆ ಎಂಬ ಅರ್ಥವಿದೆ: ಸಂಕಲನವೆಂದಲ್ಲ.

## ಇತರ ವಿಧಾನಗಳು

ಡ್ಯೂಯಿಯಂತೆ ಇಲ್ಲಿಯೂ ವರ್ಗೀಕರಣ ಪೂರ್ತಿಗೆ ಬೇಕಾಗುವ ಇತರ ವಿಧಾನಗಳನ್ನು ಕಲ್ಪಿಸಲಾಗಿದೆ. ಅವು ಹೆಚ್ಚು ಶಾಸ್ತ್ರಶುದ್ಧವಾಗಿಯೂ, ವಿಸ್ತಾರವಾಗಿಯೂ ಇವೆ.

ಮೊದಲನೆಯದಾಗಿ **ಭೌಗೋಲಿಕ ವಿಭಾಗಗಳನ್ನು** ನೋಡಬಹುದು. ಈ ವಿಭಾಗಗಳಿಗೆ ನಿರ್ದಿಷ್ಟ ಸಂಕೇತವಿದೆ; ಮತ್ತು ಅಂಕಿಗಳ ಸಂಜ್ಞೆಯನ್ನು ಉಪಯೋಗಿಸಲಾಗಿದೆ. ಉದಾ: ೪ ಏಶಿಯಾ, ೪೪ ಭಾರತ. ಇದನ್ನು ಹೀಗೆಯೇ ಮುಂದುವರಿಸಿ ಪ್ರತಿ ನಗರಕ್ಕೂ ಸಹಿತ ಒಂದು ಸಂಜ್ಞೆಯನ್ನು ಗೊತ್ತುಪಡಿಸಲಾಗಿದೆ. ಈ ಭೌಗೋಲಿಕ ವಿಭಾಗದ ಇನ್ನೊಂದು ವೈಶಿಷ್ಟ್ಯ ವೇನೆಂದರೆ:— ೧. ಜಗತ್ತು; ೨. ತಾಯಿನಾಡು; ೩. ಪ್ರಭಾವೀ ದೇಶ ಎಂದಿರುವ ವಿಭಾಗಗಳು. 'ತಾಯಿನಾಡು ೨' ಎಂಬಲ್ಲಿ ಎಷ್ಟು ಆಳವಾಗಿ ಯಾದರೂ ವಿಷಯ ವಿಭಜನೆ ನಡೆಯಬಹುದು. ಅದರಿಂದ ಒಟ್ಟಿನ ಸಂಕೇತವು ಕಿರಿದಾಗುವದು. ವಿಶೇಷತಃ ಕರ್ನಾಟಕಕ್ಕೆ ನಾವು ಯಾವಾಗಲೂ ೨ ಎಂಬ ಸಂಕೇತವನ್ನೆ ಬಳಸದೇ ಗತಿಯಿಲ್ಲ ಅದಕ್ಕೆ ಇನ್ನೊಂದು ಕಾರಣ. ಏಕೀಕೃತವಾಗದ ಕರ್ನಾಟಕಕ್ಕೆ ಡಾ. ರಂಗನಾಥನ್ನರು ನಂಬರು ಕೊಟ್ಟಿಲ್ಲ. ಆ ದೃಷ್ಟಿಯಿಂದ ಕರ್ನಾಟಕದ ವಿಭಾಗಗಳನ್ನು ಈ ರೀತಿ ಹೇಳಬಹುದು.

೨. ಕರ್ನಾಟಕ.
- ೨೧. ಮದ್ರಾಸ ಕರ್ನಾಟಕ.
- ೨೨. ಮೈಸೂರು.
- ೨೩. ಕೊಡಗು, ನೀಲಗಿರಿಗಳು.
- ೨೪. ದಕ್ಷಿಣ ಕನ್ನಡ ಜಿಲ್ಲೆ.
- ೨೫. ಮುಂಬಯಿ ಕರ್ನಾಟಕ.
- ೨೬. ಹೈದರಾಬಾದ ಕರ್ನಾಟಕ.
- ೧–೨. ಹೊರನಾಡ ಕರ್ನಾಟಕ.

ಎರಡನೆಯದಾಗಿ **ಭಾಷಾವಿಭಾಗಗಳು**. ಯಥಾಪ್ರಕಾರ ಸಾಹಿತ್ಯಕ್ಕೂ ಭಾಷಾಶಾಸ್ತ್ರದ ವಿಭಜನೆಗೂ, ಪ್ರತಿಯೊಂದು ಭಾಷೆಗೆ

ಒಂದೊಂದು ಸಂಕೇತ ಅವಶ್ಯವಷ್ಟೆ. ಶಾಸ್ತ್ರೀಯ ರೀತಿಯಲ್ಲಿ ಈ ವಿಭಾಗ ವಿವರಗಳು ಗೊತ್ತುಮಾಡಲ್ಪಟ್ಟಿವೆ.

೧. ಇಂಡೋ-ಯುರೋಪಿಯನ್ ವರ್ಗ. ೨. ಸೆಮಿಟಿಕ್ ಭಾಷೆಗಳು.
೩. ದ್ರಾವಿಡ ಭಾಷೆಗಳು. ೪–೯. ಏಶಿಯ, ಯುರೋಪ ಮುಂ.ಗಳ ಇತರ ಭಾಷೆಗಳು.

೯೯. ಕೃತ್ರಿಮ ಭಾಷೆಗಳು.

ಇಲ್ಲಿಂದ ಅವು ಪುನಃ ವಿಭಾಗಿಸಲ್ಪಟ್ಟು ಪ್ರತಿಯೊಂದು ಭಾಷೆಗೆ ವ್ಯವಸ್ಥಿತವಾಗಿ ಸಂಜ್ಞೆಯೊಂದು ಬರುವಂತಾಗಿದೆ.

**ಕಾಲ ವಿಭಾಗಗಳೂ** ಅವಶ್ಯವೆಂದು ನೋಡಿದ್ದೇವೆ. ಇಲ್ಲಿ ಇತಿಹಾಸ, ಭಾಷಾಶಾಸ್ತ್ರ, ಸಾಹಿತ್ಯಗಳಲ್ಲದೆ, ಸಾಮಾನ್ಯ ಉಪವಿಭಾಗಗಳಿಗೆ ಸಹಿತ ಕಾಲವಿಭಾಗಗಳ ಆವಶ್ಯಕತೆ ಇದೆ. ಇದರ ಯೋಜನೆಯನ್ನು ಸ್ವಲ್ಪವಾಗಿ ಹೀಗೆ ತೋರಿಸಬಹುದು.

A ಕ್ರಿ. ಶ. ಪೂ. ೨೦೦೦. E ಕ್ರಿ. ಶ. ೧೦೦೦–೧೦೯೯.
B ಕ್ರಿ. ಶ. ಪೂ. ೧೯೯೯–೧೦೦೦. F ಕ್ರಿ. ಶ. ೧೧೦೦–೧೧೯೯.
C ಕ್ರಿ. ಶ ಪೂ. ೯೯೯–೧. . . .
D ಕ್ರಿ. ಶ. ೧ ರಿಂದ ೯೯೯. N ಕ್ರಿ. ಶ. ೧೯೦೦–೧೯೯೯ರ ವರೆಗೆ

ಸಾಮಾನ್ಯವಾಗಿ ಪ್ರತಿ ನೂರು ವರುಷಕ್ಕೆ ಒಂದೊಂದು ಸಂಜ್ಞೆ ಕೊಡಲಾಗಿದೆಯಷ್ಟೆ. ಅದರಲ್ಲಿ ನಮಗೆ ನಿರ್ದಿಷ್ಟ ವರ್ಷವೇ ಬೇಕಾಗಿದ್ದರೆ, ಈ ಸಂಜ್ಞೆಯ ಮುಂದೆ ಆ ಸಂಖ್ಯೆಯನ್ನು ಸೇರಿಸಬೇಕು. ಎಂದರೆ ಹೀಗೆ:–

೧೯೫೩ನೆಯ ವರ್ಷ : N 53.

ಇನ್ನು ಗ್ರಂಥಸಂಖ್ಯೆಯಲ್ಲಿ ಬರುವ ಪ್ರಕಟನೆಯ ವರ್ಷಕ್ಕೆ ಈ ನೂರರ ಅವಧಿ ಸರಿಹೊಂದುವುದಿಲ್ಲವಾಗಿ, ಅದಕ್ಕೆ ಬೇರೆ ಸಂಜ್ಞೆ ಇದೆ. ೧೯೪೯ನೆಯ ವರ್ಷದಲ್ಲಿ ಪ್ರಕಟವಾದ ಪುಸ್ತಕಕ್ಕೆ ಸಂಕೇತವು H9 ಎಂದಲ್ಲದೆ, ಮೇಲೆ ಹೇಳಿದ ಪ್ರಕಾರ N 49 ಎಂಬುದಾಗಿಯಲ್ಲ.

ಈ ಇತರ ವಿಧಾನಗಳೊಳಗೆ, ದ್ವಿಬಿಂದು ಪದ್ಧತಿಯ ಸ್ಪಷ್ಟ ವೈಶಿಷ್ಟ್ಯವು ಕಂಡುಬರುವುದು, ಭಾರತದ ಪ್ರಾಚೀನ ಗ್ರಂಥರಾಶಿಯ ಪ್ರತ್ಯೇಕ

ವರ್ಗೀಕರಣಕ್ಕೆ ಅನುಕೂಲವನ್ನು ಕಲ್ಪಿಸಿರುವುದರಲ್ಲಿ. ಸಂಸ್ಕೃತ ಮತ್ತು ಇತರ ದೇಶಭಾಷೆಗಳ ಪ್ರಾಚೀನ ಸಾಹಿತ್ಯವು ಅಸಂಖ್ಯಾತವಾಗಿದ್ದು ಅವುಗಳ ಸ್ವರೂಪವೇ ಬೇರೆಯಾಗಿರುವುದರಿಂದ, ಯಾವುದೇ ಮುಖ್ಯ ವರ್ಗವಿರಲಿ, ಅದರಲ್ಲಿ ಈ ಬಗೆಯ ಮಹೋನ್ನತ ಗ್ರಂಥಗಳನ್ನು ಪ್ರತ್ಯೇಕಿಸುವುದಕ್ಕೋಸ್ಕರ, ಇದರಲ್ಲಿ ಮೊದಲು X ಸಂಜ್ಞೆಯನ್ನು ಪ್ರಯೋಗಿಸಿ, ಆ ಬಗೆಯ ಕೃತಿಗಳನ್ನು ಒಂದೆಡೆ ತಂದು, ಮತ್ತೆ ವರ್ಗೀಕರಣವನ್ನು ಮುಂದರಿಸಬಹುದು.

ಈ ಬಗೆಯ ಮಹೋನ್ನತ ಗ್ರಂಥಗಳು ಧರ್ಮ, ವೇದಾಂತ, ವ್ಯಾಕರಣ. ಔಷಧ, ಸಾಹಿತ್ಯ ಮುಂತಾದ ವರ್ಗಗಳಲ್ಲಿ ನಮಗೆ ದೊರೆಯುತ್ತವೆಯಷ್ಟೆ. ಅಲ್ಲೆಲ್ಲ ಈ ಸಂಜ್ಞೆಯನ್ನಿಟ್ಟು ವರ್ಗಸಂಖ್ಯೆಯನ್ನು ಕಟ್ಟಬೇಕಾಗುವುದು. **ಕೇಶಿರಾಜನ ಶಬ್ದಮಣಿದರ್ಪಣ**ವನ್ನು ಉದಾಹರಣೆಗೆ ತೆಗೆದುಕೊಳ್ಳಬಹುದು:—

| | |
|---|---|
| P | ಭಾಷಾಶಾಸ್ತ್ರ. |
| P 33 | ಕನ್ನಡ ಭಾಷಾಶಾಸ್ತ್ರ. |
| P 33 : C | ಹಳೆಗನ್ನಡ ಭಾಷಾಶಾಸ್ತ್ರ. |
| P 33 : CX | ——— |
| P 33 : CX 2 | ಹಳೆಗನ್ನಡ ವ್ಯಾಕರಣ. |
| P 33 : CX 21 | ಈ ಕೃತಿಗೆ ನಿಟ್ಟೂರು ನಂಜಯ್ಯ ಬರೆದ ಟೀಕೆ |

ಇವಲ್ಲದೆ ಇನ್ನೂ ಒಂದೆರಡು ಸಣ್ಣ ವಿಧಾನಗಳಿವೆ. ಒಂದು ವಿಷಯವನ್ನು ಬೇರೊಂದು ವಿಶಿಷ್ಟ ದೃಷ್ಟಿಕೋನದಿಂದ ಬರೆಯಲ್ಪಟ್ಟವಾಗ, ಅದರಲ್ಲಿ ಒಟ್ಟಿಗೆ ಎರಡು ಭಿನ್ನ ವಿಷಯಗಳು ಸೇರಿಕೊಂಡಿರುತ್ತವೆ. ಉದಾ: ಡಿ. ವಿ. ಜಿ. ಅವರ 'ಸಾಹಿತ್ಯ ಮತ್ತು ವಿಜ್ಞಾನ'. ಇಲ್ಲಿ ಎರಡು ಪ್ರತ್ಯೇಕ ವಿಷಯಗಳು ಸೇರಿರುವುದರಿಂದ, ಅವುಗಳಲ್ಲಿ ಮುಖ್ಯವಾದುದನ್ನು ಮೊದಲು ಬರೆದು, ಮಧ್ಯೆ ಒಂದು ಸೊನ್ನೆಯನ್ನು ಸೇರಿಸಿ, ಆ ಇನ್ನೊಂದು ವಿಷಯದ ಸಂಕೇತವನ್ನು ಕೊಡಬಹುದು. ಆ ಪ್ರಕಾರ ಮೇಲಿನ ಗ್ರಂಥದ ನಂಬರು ಈ ರೀತಿ ಆಗುತ್ತದೆ:—

| | |
|---|---|
| 033 : Q | ಸಾಮಾನ್ಯ ವಿಮರ್ಶೆ. |
| 033 : Q0A | ಸಾಹಿತ್ಯ ಮತ್ತು ವಿಜ್ಞಾನ. (A). |

ಇನ್ನು ಕೆಲವು ಸಂದರ್ಭಗಳಲ್ಲಿ ಒಂದೇ ಮುಖ್ಯ ವರ್ಗದಡಿಯಲ್ಲಿ ಬರುವ ಪುಸ್ತಕವಿರುತ್ತಿದ್ದು, ಅವುಗಳ ಉಪವರ್ಗಗಳಲ್ಲಿ ಎರಡು ಭಿನ್ನ ವಿಷಯಗಳು ಬರಬಹುದು. ಆಗ (0) ಸೊನ್ನೆಯ ಬದಲು (—) ಈ ಸಂಜ್ಞೆಯನ್ನು ಉಪಯೋಗಿಸಬೇಕು. 'ಮಧ್ಯಮವರ್ಗದ ಹೆಣ್ಣುಮಕ್ಕಳ' ಕುರಿತು ಇರುವ ಒಂದು ಸಮಾಜಶಾಸ್ತ್ರ ಪುಸ್ತಕವಿದೆಯೆಂದು ತಿಳಿಯುವ.

Y 1 ಸಮಾಜಶಾಸ್ತ್ರ.

Y 15 ಹೆಣ್ಣುಮಕ್ಕಳು.

ಇಲ್ಲಿಂದ ಮುಂದೆ ಮಧ್ಯಮವರ್ಗದವರೆಂದು ವರ್ಗೀಕರಣವನ್ನು ಬಳಸಲಿಕ್ಕೆ ನೇರ ವಿಭಜನೆ ಇಲ್ಲ. ಆದರೆ ಅದೇ ಮುಖ್ಯ ವರ್ಗದಲ್ಲಿ ಬೇರೊಂದೆಡೆ ವರ್ಗರೀತ್ಯಾ ಹೆಣ್ಣುಮಕ್ಕಳನ್ನು ವಿಂಗಡಿಸಲಾಗಿದೆ. ಅಲ್ಲಿ 53 ಮಧ್ಯಮವರ್ಗದ ಹೆಣ್ಣುಮಕ್ಕಳೆಂದು ತೋರಿಸುವುದು. ಇದರಿಂದ ಒಟ್ಟು ನಂಬರು ಹೀಗೆ:—

Y 115–53 ಮಧ್ಯಮವರ್ಗದ ಹೆಣ್ಣುಮಕ್ಕಳು.

## ಸಾಹಿತ್ಯವರ್ಗದ ವಿವರ ಪರಿಚಯ

ಕನ್ನಡ ಪುಸ್ತಕಗಳು ಹೆಚ್ಚಾಗಿ ಸಾಹಿತ್ಯಿಕವಾಗಿಯೆ ಇರುವುದರಿಂದ, ಆ ವರ್ಗವನ್ನಿಲ್ಲಿ ತುಸು ವಿವರಿಸಬಯಸಿದೆ. ಈ ಹಿಂದೆ ಹೇಳಿಯೇ ಇದ್ದಂತೆ, ಅದರಲ್ಲಿ ನಾಲ್ಕು ವಿಶೇಷತೆಗಳಿವೆ:—

**ಸಾಹಿತ್ಯ** (ಭಾಷೆ): (ಸಾಹಿತ್ಯ ಪ್ರಕಾರ): (ಲೇಖಕ): (ಪುಸ್ತಕ ಸಂಖ್ಯೆ)

ಪ್ರತಿಯೊಂದು ಭಾಷೆಗೆ ನಿರ್ದಿಷ್ಟ ಸಂಜ್ಞೆ ಇದೆಯೆಂಬುದಾಗಿ ಹಿಂದೆಯೇ ನೋಡಿದ್ದೇವೆ. ಆ ನಂಬರನ್ನಿಲ್ಲಿ ಬರೆಯಬೇಕು. ಆದರೆ ಯಾವ ಭಾಷೆಯ ಪುಸ್ತಕಗಳು ಒಂದು ಗ್ರಂಥಾಲಯದಲ್ಲಿ ಹೆಚ್ಚಿಗಿವೆಯೋ, ಅದರ ಭಾಷಾ ಸಂಖ್ಯೆಯನ್ನು ಬರೆಯುವ ಅಗತ್ಯವಿಲ್ಲ. ಕರ್ನಾಟಕ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿ ಇಂಗ್ಲಿಷ್ ಪುಸ್ತಕಗಳು ಹೆಚ್ಚಿಗಿವೆಯಷ್ಟೆ. ಇಂಗ್ಲಿಷ್ ಭಾಷೆಯ ನಂಬರನ್ನು ಬರೆಯಬೇಕಾದದ್ದಿಲ್ಲ. ಇದರಿಂದ ಪುಸ್ತಕೀಯ ಸಂಕೇತದ ಬರೆಯುವಿಕೆಯಲ್ಲಿ ಉಳಿತಾಯವಾಗುವ ಸ್ಪಷ್ಟ ಉದ್ದೇಶ ಇಲ್ಲಿದೆ.

ಎರಡನೆಯ ಸಾಹಿತ್ಯ ಪ್ರಕಾರವು ಒಟ್ಟಿನಲ್ಲಿ ಏಳು ಬಗೆಯದು: —

೧ ಕವಿತೆ. ೪ ಪತ್ರಸಾಹಿತ್ಯ.
೨ ನಾಟಕ. ೫ ಉಪನ್ಯಾಸಗಳು.
೩ ಕಟ್ಟುಕತೆ (ಕಥನ). ೬ ಇತರ ಗದ್ಯರೂಪಗಳು.
೭ ಚಂಪೂ.

ಸಾಹಿತ್ಯ ರೂಪಗಳೆಂಬುವು ವಿವಿಧ ಭಾಷೆಗಳಲ್ಲಿ, ವಿಧವಿಧವಾಗಿ ತಮ್ಮ ಸ್ವರೂಪದಲ್ಲಿ ಬದಲಾವಣೆ ಹೊಂದುತ್ತ ಹೋಗುವವಾದ್ದರಿಂದ ಹೆಚ್ಚಿನ ವಿಭಜನೆಗೆ ಡಾ. ರಂಗನಾಥನ್ನರ ಸಮ್ಮತಿ ಇಲ್ಲ. ಇತರ ಗದ್ಯರೂಪಗಳು ಎಂದು ಇದೆಯಷ್ಟೆ. ನಮ್ಮ ವಚನ ಸಾಹಿತ್ಯವನ್ನು ಇದರಲ್ಲಿ ಸೇರಿಸಬಹುದು. ದಿವಾಕರರ 'ಅಂತರಾತ್ಮನಿಗೆ' ಎಂಬ ಕೃತಿಯೂ, 'ಆನಂದ'ರ 'ಪಕ್ಷಿಗಾನ'ವೂ ಆರನೆಯ ಬಗೆಯಲ್ಲಿಯೇ ಬರಬೇಕಾದುವಾಗುತ್ತವೆ.

ಮೂರನೆಯ ವಿಶೇಷತೆಯಾದ ಲೇಖಕರ ಸ್ಥಾನವನ್ನು ಗುರುತಿಸಬೇಕಾದರೆ ಅದಕ್ಕಾಗಿ, ಆ ಲೇಖಕರ ಹುಟ್ಟಿದ ವರ್ಷವನ್ನು ನಿರ್ಮಿತ ಭಾಷೆಯಲ್ಲಿ ಹೇಳಬೇಕಾಗುವುದು. ಅದರಿಂದ ಕಾಲಾನುಕ್ರಮ ದೊರೆಯುವುದು. ನಿರ್ದಿಷ್ಟವಾಗಿ ಈ ಜನನವರ್ಷ ಗೊತ್ತಿರದಿದ್ದರೆ, ಅಂದಾಜಿನಲ್ಲಿ ಕೊಡಬಹುದು. ಹೊಸ ಲೇಖಕರಿದ್ದರೆ, 'ಯಾರು ಯಾರು' ಎಂಬ ಚುಟುಕಿನ ಚರಿತ್ರೆಯ ಪುಸ್ತಕವನ್ನು ನೋಡಬೇಕು (ಅದಿಲ್ಲದಿದ್ದರೆ ಒಂದು ಬರೆಸಬೇಕು), ಎಂದು ಸೂಚಿಸಿದ್ದಾರೆ. ಕನ್ನಡದಲ್ಲಿ ಹಳಗನ್ನಡ, ಹೊಸಗನ್ನಡ, ಎರಡೂ ಬಗೆಯ ಲೇಖಕರಲ್ಲೂ ಇದು ಕಷ್ಟದಾಯಕವಾಗುತ್ತದೆ. 'ಕರ್ನಾಟಕ ಕವಿಚರಿತೆ' ಇದ್ದರೂ ಅದರಲ್ಲಿ ಎಷ್ಟು ಜನ ಲೇಖಕರ ನಿರ್ದಿಷ್ಟ ವರ್ಷ ದೊರೆಯುತ್ತವೆ ?

ಕೊನೆಯದಾಗಿರುವ ಅವರ ಕೃತಿಸಂಖ್ಯೆ. ಅದನ್ನು ಮುನ್ನುಡಿ. ಪರಿಚಯ ಮುಂತಾದವುಗಳಿಂದ ತಿಳಿದುಕೊಳ್ಳಬಹುದು. ಮತ್ತು ಅಷ್ಟನೆಯ ಸಂಖ್ಯೆಯನ್ನು ಬರೆದರಾಯಿತು. ಆದರೆ ಹೀಗೆ ಲನೆಯ ಪುಸ್ತಕದ ವರೆಗೆ ಮಾತ್ರ ಮುಂದರಿಸಬಹುದು. ಲ ಕ್ಕಿಂತ ಹೆಚ್ಚು ಕೃತಿಗಳಿದ್ದರೆ, ಎಂಟೆಂಟು ಕೃತಿಗಳ ಒಂದೊಂದು ಗುಂಪನ್ನು ಮಾಡಿ ಆ ರೀತಿಯಲ್ಲಿ ಸಂಜ್ಞೆಯನ್ನು ಕೊಡಬೇಕು. ಮಾಷ್ಟ್ರಿಯುವರು ಐವತ್ತಕ್ಕಿಂತ ಹೆಚ್ಚು ಪುಸ್ತಕಗಳನ್ನು

ಬರೆದಿದ್ದಾರಷ್ಟೆ. ಅವರ ನಾಲ್ಕನೆಯ ಕೃತಿಗೆ ೧೪ ಎಂದು ಸಂಜ್ಞೆ ಬರುತ್ತದೆ. ೧೫ನೆಯ ಕೃತಿಗೆ ೨೭ ಎಂದಾಗುತ್ತದೆ. ೨೭ ಎಂದಾಗ ಎಂಟೆಂಟರ ೨ನೆಯ ಗುಂಪಿನಲ್ಲಿ ಏಳನೆಯ ಕೃತಿ : ಎಂದರೆ ಒಟ್ಟಿನಲ್ಲಿ ೧೫ನೆಯದು ಎಂದರ್ಥ ವಾಗುತ್ತಿದೆ. ಅದೇ ರೀತಿಯಲ್ಲಿ ೫೦ನೆಯದಕ್ಕೆ ಸಂಕೇತ ೬೨ ಎಂದು ಬರುವುದು.

## ದ್ವಿಬಿಂದು ಪದ್ಧತಿಯ ಕನ್ನಡೀಕರಣ

ಈ ಪದ್ಧತಿಯ ಸಂಜ್ಞೆಗಳು ಇಂಗ್ಲಿಷಿನಲ್ಲಿರುವುದರಿಂದ, ಅವನ್ನು ಎಲ್ಲ ಭಾರತೀಯ ಭಾಷೆಗಳಿಗೆ ಸಮವಾಗಿ ಸರಿಹೋಗುವಂತೆ ಪರಿವರ್ತಿಸುವ ಕಾರ್ಯ ನಡೆದಿದೆ. ಈ ಬಗ್ಗೆ ಡಾ. ರಂಗನಾಥನ್ನರೊಟ್ಟಿಗೆ ಬೇರೆ ಬೇರೆ ಭಾಷೆಗಳ ಪರವಾಗಿ ಚರ್ಚೆಯು ನಡೆದು, ಡಾ. ರಂಗನಾಥನ್ನರು ತಮ್ಮ ಕೊನೆಯ ನಿರ್ಣಯ ಕೊಟ್ಟಿದ್ದಾರೆ. ಕನ್ನಡದ ಪರವಾಗಿ ಶ್ರೀ. ಜಿ. ಎಸ್. ಪಾಟೀಲರೂ, ಈ ಲೇಖಕನೂ ಇದರಲ್ಲಿ ಭಾಗವಹಿಸಿದ್ದಾಗಿದೆ. ಶ್ರೀ. ಪಾಟೀಲರು ಇದರ ಹಿಂದೀಕರಣದ ಅಗತ್ಯವಾದರೂ ಏನು ಎಂದು ಶಂಕಿಸಿ ದ್ದುಂಟು. ಆವರೆ ಸ್ಥಳೀಯ ಓದುಗರ ಸೌಲಭ್ಯಕ್ಕೋಸ್ಕರ ದೇಶಭಾಷೆ ಯಲ್ಲೇ ಸಂಕೇತವಿರಬೇಕು ಎಂದು ಅನಿಸುವುದು ಸ್ವಾಭಾವಿಕ. ಮೂಲತಃ ಈ ಹಿಂದೀಕರಣದ ಪ್ರಶ್ನೆಯೆತ್ತಿ ಒಂದು ಯೋಜನೆಯನ್ನು ಕೊಟ್ಟವರು, ಪುಣೆಯ ಶ್ರೀ. ಜಿ. ಎಸ್. ದಾತೆಯವರು. ಆನಂತರ ಇತರರ ಸೂಚನೆ ಗಳನ್ನೂ ಪರಿಶೀಲಿಸಿ, ಡಾ. ರಂಗನಾಥನ್ನರು ಕೊನೆಯದಾದ ಒಂದು ರೂಪಾಂತರ ಪಟ್ಟಿಯನ್ನು ಕೊಟ್ಟಿದ್ದಾರೆ.

ದ್ವಿಬಿಂದುವಿನ ಸಂಜ್ಞೆಗಳು ಒಟ್ಟು ೬೩ ಎಂಬುದನ್ನೂ, ಅವುಗಳಲ್ಲಿ ೧-೯ರ ವರೆಗಿನ ಅಂಕಿಗಳನ್ನೂ, ‘Δ’ ‘:’ ‘—’ ಈ ಮೂರು ಸಂಜ್ಞೆ ಗಳನ್ನೂ ಇದ್ದಕ್ಕಿದ್ದಂತೆ ಇಡಬಹುದು. ಕಷ್ಟ ಬರುವುದು, ಇಪ್ಪತ್ತಾರು ಇಂಗ್ಲಿಷ ಅಕ್ಷರಗಳು ( A, B, C..... ), ಮತ್ತು ಇಪ್ಪತ್ತುನಾಲ್ಕು ಉಪಾಕ್ಷರಗಳು ( a, b, c..... ) —ಇವುಗಳನ್ನು ರೂಪಾಂತರಿಸುವಲ್ಲಿ. ಈ ಬಗ್ಗೆ ಡಾ. ರಂಗನಾಥನ್ನರವರ ಸೂಚನೆ ಹೀಗಿದೆ:—

| ವಿಷಯಗಳು | ಸಂಖ್ಯೆ |
|---|---|
| ೧. ಕರಣ ಶಾಸ್ತ್ರಗಳು | ಸ್ವರವರ್ಗ (ಇ. ಉ) |
| ೨. ವಸ್ತುಶಾಸ್ತ್ರಗಳು | ಕವರ್ಗ (ಕ, ಖ, ಗ, ಘ). |
| ೩. ಜೀವ ಶಾಸ್ತ್ರಗಳು | ಚ, ಟ, ವರ್ಗಗಳು. (ಚ, ಛ, ಜ, ಝ, ಟ). |
| ೪. ಉಪಯುಕ್ತ ಕಲೆಗಳು | ಡ ವರ್ಗ,. (ಡ, ಢ) |
| ೫. ಮಾನವ್ಯಗಳು | ತ, ಪ ವರ್ಗಗಳು. (ಥ, ದ, ನ, ಪ, ಫ, ಭ, ಮ) |
| ೬. ಸಾಮಾಜಿಕ ಶಾಸ್ತ್ರಗಳು | ಅವರ್ಗೀಯಗಳು. (ರ, ಲ, ಶ, ಸ, ಹ,) |

ಸ್ವರಗಳಲ್ಲಿ ಅ, ಆ ಇವನ್ನು ಪ್ರಾಮುಖ್ಯ ವಿಷಯಗಳಾಗಿ ತೆಗೆದಿರಿಸ ಬೇಕೆಂದು ಹೇಳಿದೆ. ಇನ್ನು ಉಪಾಕ್ಷರಗಳ ವಿಚಾರದಲ್ಲಿ, ಅವರು ಹೇಳುವುದು ಹೀಗೆ:— ಮುಖ್ಯಾಕ್ಷರ A ಇದರ ಸಮಾನಪದ 'ಕ' ಎಂಬುದಕ್ಕೆ ಅನುಸ್ವಾರ ಸೇರಿಸಬೇಕು. ಅದರ ಪ್ರಕಾರ Q = ಕಂ ಎಂದಾಗುವುದು. ದೇವನಾಗರೀ ಲಿಪಿಯಲ್ಲಿ ಅನುಸ್ವಾರವನ್ನು ಅಕ್ಷರದ ಮೇಲ್ಗಡೆ ಒಂದು ಬಿಂದುವಿನಿಂದ ಸೂಚಿಸುವುದಿರುವುದರಿಂದ ಆ ಲಿಪಿಯುಳ್ಳ ಭಾಷೆಗಳಿಗೆ ಅದು ಸರಿಹೋಗು ವುದು. ಆದರೆ ಕನ್ನಡ ಮೊದಲಾದ ದ್ರಾವಿಡ ಭಾಷೆಗಳಲ್ಲಿ ಕ್ರಮ ಹೀಗಿಲ್ಲ. ಅನುಸ್ವಾರವನ್ನು ಶಬ್ದದ ಮುಂದೆ ಒಂದು ಸೊನ್ನೆಯನ್ನು ಕೊಟ್ಟು, ನಿದರ್ಶಿ ಸುತ್ತೇವೆ ಎಂದು ರಂಗನಾಥನ್ನರಿಗೆ ತೋರಿಸಿಕೊಟ್ಟುದರಿಂದ, ದ್ರಾವಿಡ ಭಾಷೆಗಳು ಅನುಸ್ವಾರದ ಬದಲಿಗೆ ವ್ಯಂಜನವನ್ನು ಬಳಸಬೇಕು ಎಂಬ ನನ್ನ ಸೂಚನೆಯನ್ನು ಅವರು ಅನುಮೋದಿಸಿದರು.

ಮೇಲಿನ ರೀತಿಯು ಹೆಚ್ಚು ತೊಡಕಿನದಾಗಿದ್ದು, ಮುಖ್ಯಾಕ್ಷರಗಳ ರೂಪಾಂತರದಲ್ಲಿ ಆ ಅಕ್ಷರಗಳು ಹಿಂದುಮುಂದಾಗುವುದರಿಂದಲೂ, ಔತ್ತ ರೇಯ ಭಾಷೆಗಳಿಗೊಂದು ಬಗೆ, ದ್ರಾವಿಡ ಭಾಷೆಗಳಿಗೊಂದು ಬಗೆಯಾಗಿ ಸಮಾನತೆ ಕಂಡುಬಾರದುದರಿಂದಲೂ ಆ ದೃಷ್ಟಿಯಲ್ಲಿ ನನ್ನದೊಂದು ರೂಪಾಂತರವನ್ನು ಇಲ್ಲಿ ಕೊಡುತ್ತೇನೆ:—

| ಮುಖ್ಯ ವರ್ಗಗಳು | | | ಸಾಮಾನ್ಯ ಉಪವಿಭಾಗಗಳು | | |
|---|---|---|---|---|---|
| ಕ | ಸಾಮಾನ್ಯವಿಜ್ಞಾನ | A | ಕ್ | ವಾಙ್ಮಯ ಸೂಚಿ | a |
| ಖ | ಗಣಿತ ಶಾಸ್ತ್ರ | B | ಖ್ | ಉದ್ಯಮ | b |
| ಗ | ಭೌತಶಾಸ್ತ್ರ | C | ಗ್ | ಪ್ರಯೋಗಶಾಲೆ | c |
| ಘ | ಸ್ಥಾಪತ್ಯ | D | ಘ್ | ವಸ್ತುಸಂಗ್ರಹಾಲಯ | d |
| ಚ | ರಸಾಯನಶಾಸ್ತ್ರ | E | ಚ್ | ಉಪಕರಣಗಳು | e |
| ಛ | ತಂತ್ರಶಾಸ್ತ್ರ | F | ಛ್ | ನಕಾಶಗಳು | f |
| ಜ | ಜೀವವಿಜ್ಞಾನ | G | ಜ್ | ಚಿತ್ರಗಳು, ನಕ್ಷೆಗಳು. | g |
| ಝ | ಭೂಶಾಸ್ತ್ರ | H | ಝ್ | ಸಂಸ್ಥೆಗಳು | h |
| ಟ | ಸಸ್ಯಶಾಸ್ತ್ರ | I | | | |
| ಠ | ಕೃಷಿಶಾಸ್ತ್ರ | J | ಠ್ | ಸ್ಮಾರಕ ಗ್ರಂಥಗಳು | j |
| ಡ | ಪ್ರಾಣಿಶಾಸ್ತ್ರ | K | ಡ್ | ನಿಘಂಟು, ವಿಶ್ವಕೋಶ | k |
| ಢ | ಓಷಧಿ ಶಾಸ್ತ್ರ | L | ಢ್ | ಸಂಘಗಳು | l |
| ತ | ಉಪಯುಕ್ತ ಕಲೆ | M | ತ್ | ಪತ್ರಿಕೆಗಳು | m |
| △ | ಅನುಭಾವ | △ | | — | |
| ಥ | ಲಲಿತಕಲೆಗಳು | N | ಥ್ | ವಾರ್ಷಿಕಗಳು, ನಿರ್ದೇಶಿಕೆ | n |
| ದ | ಸಾಹಿತ್ಯ | O | | — | |
| ಧ | ಭಾಷಾಭ್ಯಾಸ | P | ಧ್ | ಸಮ್ಮೇಲನಗಳು | p |
| ಪ | ಧರ್ಮ | Q | ಪ್ | ಕಾಯದೆ ಮಸೂದೆ | q |
| ಫ | ತತ್ವಜ್ಞಾನ | R | ಫ್ | ಸರಕಾರೀ ವರದಿಗಳು | r |
| ಬ | ಮನಶ್ಶಾಸ್ತ್ರ | S | ಬ್ | ಅಂಕಿ-ಸಂಖ್ಯೆಗಳು | s |
| ಭ | ಶಿಕ್ಷಣ | T | ಭ್ | ಕಮೀಟಿಗಳು | t |
| ಯ | ಭೂಗೋಲ | U | ಯ್ | ಪ್ರವಾಸಗಳು | u |
| ರ | ಇತಿಹಾಸ | V | ರ್ | ಇತಿಹಾಸ | v |
| ಲ | ರಾಜ್ಯಶಾಸ್ತ್ರ | W | ಲ್ | ಚರಿತ್ರೆ, ಪತ್ರಸಂಗ್ರಹ | w |
| ವ | ಅರ್ಥಶಾಸ್ತ್ರ | X | ವ್ | ಸಂಗ್ರಹಗಳು | x |

| | | | | | |
|---|---|---|---|---|---|
| ಶ | ಸಾಮಾಜಿಕ ಶಾಸ್ತ್ರಗಳು | Y | ಶ್ | ವ್ಯಾಪ್ತಿ ಇ. ಇ. | y |
| ಷ | ನ್ಯಾಯಶಾಸ್ತ್ರ | Z | ಷ್ | ಸಂಗ್ರಹಗಳು | z |
| ಸ | ಪ್ರಾಮುಖ್ಯ ವಿಷಯ | | ಸ್ | — | |
| ಹ | ಎರಡನೆಯ ,, | | ಹ್ | — | |

ಇದರಲ್ಲಿ ಙ, ಞ, ಣ, ನ, ಮ ಎಂಬೀ ೫ ಅನುನಾಸಿಕಗಳನ್ನು ಉಚ್ಚಾರ ಕಷ್ಟದ ಮೂಲಕ ಬಿಟ್ಟಿದೆ. ಸ್ವರಗಳನ್ನು ಶ್ರೀ. ದಾತೆಯವರ ಮೂಲ ಸೂಚನೆಯನ್ನನುಸರಿಸಿ ಈ ಮುಖ್ಯಾಕ್ಷರಗಳನ್ನು ಕಾಗುಣಿತಗಳನ್ನಾಗಿ ಮಾಡಿಕೊಳ್ಳುವುದಕ್ಕೆಂದು ಬಿಟ್ಟಿದೆ. ದಾತೆಯವರ ಆ ಸೂಚನೆ ಏನೆಂದರೆ, ೧-೯ರ ವರೆಗಿನ ಅಂಕಿಗಳನ್ನು ಆ ದಿಂದ ಔ ದ ವರೆಗಿನ ಸ್ವರಗಳಿಗೆ ಸಮಾನವಾಗಿ ಇಟ್ಟುಕೊಂಡು, ಯಾವುದೇ ಮುಖ್ಯಾಕ್ಷರದ ಮುಂದೆ ಬರುವ ಅಂಕಿಗಳ ಬದಲಾಗಿ ಈ ಸ್ವರಚಿನ್ಹೆಯನ್ನು ಸೇರಿಸಿ ಕಾಗುಣಿತಗಳನ್ನು ಮಾಡಿಕೊಂಡು, ಒಟ್ಟಿನ ಸಂಕೇತದಲ್ಲಿ ಉಳಿತಾಯ ಮಾಡಿಕೊಳ್ಳುವುದಾಗಿದೆ :—
ಆ=೧, ಇ=೨, ಈ=೩, ಓ=೯. Ai=ಕ+ಆ=ಕಾ.

## ಕೊನೆ

ಇಷ್ಟರ ವರೆಗೆ ಸ್ಥೂಲವಾಗಿಯೆ ವಿವರಿಸಿದ ಈ ವರ್ಗೀಕರಣದ ಪದ್ಧತಿಯನ್ನು ನೋಡಿದರೆ, ಅದು ಅತ್ಯಂತ ಶಾಸ್ತ್ರೀಯವೂ, ಆಳವೂ ಎನಿಸಿದರೂ, ಆಚರಣೆಯಲ್ಲಿ ತರುವಲ್ಲಿ ಅತಿ ಕಷ್ಟದ್ದೆನಿಸಿಕೊಂಡಿದೆ. ಅಂತೆಯೆ ನಮ್ಮ ದೇಶದಲ್ಲಿ ಕೆಲವೇ ಕಡೆಗಳಲ್ಲಿ ಇದು ಪ್ರಯೋಜನದಲ್ಲಿದ್ದುದು. ಆದರೆ ಒಮ್ಮೆ ಈ ಪದ್ಧತಿಯನ್ನು ಸರಿಯಾಗಿ ಅರಿತುಕೊಂಡಲ್ಲಿ, ವರ್ಗಕಾರನ ಕೆಲಸ ಮುಂದೆ ನೀರು ಕುಡಿದಷ್ಟು ಸುಲಭ ಎನ್ನುವ ಮಾತಿನಲ್ಲಿಯೂ ತಥ್ಯಾಂಶವಿದೆ.



# ೫. ಸೂಚೀಕರಣ



## ೧. ತಾತ್ವಿಕ ವಿವೇಚನೆ

ಗ್ರಂಥಾಲಯದಲ್ಲಿರುವ ಪುಸ್ತಕಗಳ ಬರೀ ಪಟ್ಟಿಯೊಂದನ್ನು ಸಿದ್ಧಗೊಳಿಸುವುದಷ್ಟೇ ಸೂಚೀಕರಣ ಎಂದು ಇಂದಿನ ನಮ್ಮ ಗ್ರಹಿಕೆ. ಇದರಲ್ಲಿ ಎರಡು ಸಂಗತಿಗಳನ್ನು ನಾವು ಗಮನಕ್ಕೆ ತೆಗೆದುಕೊಂಡಿಲ್ಲ. ಒಂದು, ಗ್ರಂಥಾಲಯಗಳಲ್ಲಿ ಎರಡು ಸಾವಿರಕ್ಕಿಂತಲೂ ಹೆಚ್ಚಿಗೆ ಪುಸ್ತಕಗಳು ಇರುತ್ತವೆಯೆಂಬುದು; ಇನ್ನೊಂದು, ಸೂಚೀಕರಣದ ಕೆಲಸ ಬರಿಯ ಪಟ್ಟಿಯೊಂದನ್ನು ಮಾತ್ರ ಕೊಡುವುದಿಲ್ಲ ಎಂಬುದು. ಈಗ ಸದ್ಯ ನಾವು ಸಾಮಾನ್ಯವಾಗಿ ನೋಡುತ್ತಿರುವುದು ಪುಸ್ತಕದ ಹೆಸರು, ಲೇಖಕರ ಹೆಸರು, ಹೆಚ್ಚಾದರೆ ಪುಸ್ತಕದ ಬೆಲೆ, ಇವಿಷ್ಟು ಮಾತ್ರ. ಆದರೆ ಪುಸ್ತಕದ ಬಗ್ಗೆ ಇನ್ನೂ ಅನೇಕ ಮಾತುಗಳನ್ನು ಓದುಗರಿಗೆ ಸೂಚಿಸಿ ಕೊಡುವುದು ಅಗತ್ಯವಿರುತ್ತದೆ. ಇದು ಅಲ್ಲದೆ, ಒಂದು ಪುಸ್ತಕ ಹುಡುಕುವಲ್ಲಿ ಓದುಗರ ವೇಳೆಯೂ ಉಳಿಯುವಂತೆ, ನೋಡಿಕೊಳ್ಳಬೇಕಲ್ಲವೆ ? ಈ ಸೂಚಿಯ ಕಾರ್ಯಸ್ವರೂಪದಲ್ಲಿ ಕೊನೆಯದಲ್ಲದಿದ್ದರೂ ಇನ್ನೊಂದು ಮಾತು ಹೇಳಿಬಿಡಬಹುದು. ಅದೆಂದರೆ ಹೊಸ ಗ್ರಂಥಾಲಯದಲ್ಲಿ ಪುಸ್ತಕಗಳೊಂದೇ ಇರುವುದಿಲ್ಲ; ವಿಶಿಷ್ಟವಾದ ಹಸ್ತಪತ್ರಿಗಳಿರುತ್ತವೆ, ಚಿತ್ರಸಂಗ್ರಹಗಳಿರುತ್ತವೆ, ನಕ್ಷೆಗಳಿರುತ್ತವೆ. ಇದಕ್ಕೂ ಮುಂದೆ ಹೋದರೆ ಸಿನೇಮಾರೀಲಿನ ರೂಪದಲ್ಲಿ ಸಹ ಪುಸ್ತಕಗಳು ಸಿದ್ಧವಾದದ್ದು ಕಂಡುಬರುತ್ತವೆ; ಹಾಗೂ ಕುರುಡರಾದ ಓದುಗರಿಗಾಗಿ ಗ್ರಾಮೊಫೋನ್, ಬ್ರೆಲ್ ಎಂಬ ಹೆಸರಿನ ಲಿಪಿಯಲ್ಲಿಯೂ ಗ್ರಂಥಗಳಿವೆ. ಅವುಗಳನ್ನೆಲ್ಲ ವ್ಯವಸ್ಥಿತವಾಗಿ ಓದುಗರ ಅವಗಾಹನೆಗಿಡುವುದು ಸುಲಭದ ಮಾತಲ್ಲ.

### ದ್ವಾದಶ ಪ್ರಶ್ನೆಗಳು

ಸೂಚಿಯ ಕಾರ್ಯವೇನೆಂಬುದನ್ನು ವಿವರಿಸುವ ರೂಪದಲ್ಲಿ ಒಬ್ಬ ಬ್ರಿಟಿಶ್ ಭಂಡಾರಿಗ ೧೨ ಪ್ರಶ್ನೆಗಳನ್ನು ಕೇಳಿದ್ದಾನೆ. ನಾವು ಅನುಸರಿಸುವ

ಸೂಚಿಯು ಇದಕ್ಕೆ ಸಮಾಧಾನ ಹೇಳುವ ಹಾಗೆ ರಚಿತವಾಗಿದ್ದರೆ, ಎಷ್ಟರ ಮಟ್ಟಿಗೆ ಹಾಗೆ ಆಗಿದೆ ಎಂದು ನೋಡಿಕೊಳ್ಳುವ. ಆ ಪ್ರಶ್ನೆಗಳು ಯಾವು ವೆಂದರೆ:—

೧. ಶ್ರೀ......................ಅವರ ಇಂಥ ಒಂದು ಪುಸ್ತಕ ಇದೆಯೆ ?

೨. ಶ್ರೀ......................ಅವರ ಪುಸ್ತಕಗಳು ನಿಮ್ಮಲ್ಲಿ ಯಾವ ಯಾವುವಿವೆ ?

೩. ಶ್ರೀ......................ಅವರು ಅನುವಾದಿಸಿದ ಅಥವಾ ಸಂಪಾದಿಸಿದ ಪುಸ್ತಕಗಳು ಯಾವುವಿವೆ ?

೪. ......................ಎಂಬ ನಿರ್ದಿಷ್ಟ ವಿಷಯದ ಮೇಲೆ ನಿಮ್ಮಲ್ಲಿ ಯಾವ ಯಾವ ಪುಸ್ತಕಗಳಿವೆ ?

೫. ಹಾಗೆಯೇ......................ಎಂಬ ಸಾಮಾನ್ಯ ವಿಷಯದ ಮೇಲೆ ಯಾವ ಗ್ರಂಥಗಳಿವೆ ?

೬. ......................ಈ ಭಾಷೆಯಲ್ಲಿ ನಿಮ್ಮ ಸಂಗ್ರಹ ಎಷ್ಟಿದೆ ? ಯಾವವು ?

೭. ......................ಈ ವಾಙ್ಮಯದ ಪುಸ್ತಕಗಳು ಯಾವುವಿವೆ ?

೮. ......................ಈ ಪುಸ್ತಕ, —ಲೇಖಕರಾರೆಂದು ಗೊತ್ತಿಲ್ಲ, —ಇದೆಯೇ ?

೯. ......................ಈ ಗ್ರಂಥಮಾಲೆಯ ಪುಸ್ತಕಗಳು ಯಾವುವಿವೆ?

೧೦. ......................ಈ ಸಾಹಿತ್ಯರೂಪದ ಪುಸ್ತಕಗಳು ಯಾವುವಿವೆ ?

೧೧. ......................ಈ ಕಾಲಾವಧಿಯ ಅಥವಾ ಇಂಥದೇ ಆಂತರಿಕ ವಿಷಯವೊಂದರ ಬಗ್ಗೆ ಬರೆದ ಶ್ರೀ......................ಅವರ ಪುಸ್ತಕ ಯಾವುದು ?

೧೨. ಶ್ರೀ......................ಅವರ ಮಹತ್ವದ ಲೇಖ ಯಾವ ಗ್ರಂಥದಲ್ಲಿದೆ ?

ಓದುಗರ ಆವಶ್ಯಕತೆಗಳನ್ನು ಗಮನಿಸಿ ಈ ಪ್ರಶ್ನಮಾಲಿಕೆಯನ್ನು ಕೊಡಲಾಗಿದೆ. ನಮ್ಮಲ್ಲಿಯ ಸೂಚಿಯಲ್ಲಿ ಇವುಗಳಲ್ಲಿಯ ಯಾವುದೇ ಬಗೆಯ ಪ್ರಶ್ನೆಗೆ ಕೂಡಲೇ ಉತ್ತರ ದೊರೆಯುವಂತಾಗಬೇಕು. ಆದರೆ

ಪದ್ಧತಿದ ನಮ್ಮ ಸೂಚಿಯಲ್ಲಿ,—ಅಲ್ಲ, ಗ್ರಂಥಪಟ್ಟಿಯಲ್ಲಿ ಈ ಬಗೆಯ ಬೇಡಿಕೆಯನ್ನಿಟ್ಟುಕೊಂಡು ನೋಡುತ್ತಿದ್ದರೆ ಓದುಗನಿಗೆ ನಿರಾಶೆ ಕಟ್ಟಿಟ್ಟದ್ದು.

ಹಾಗೆಂದು ಈ ಹನ್ನೆರಡಕ್ಕೂ ಸಮಾಧಾನರೂಪಿಯಾದ ಯಾವ ಒಂದು ಸೂಚಿಯೂ ಸಾಧ್ಯವಿಲ್ಲ. ಆದರೂ ಬಹುಮಟ್ಟಿಗೆ ಓದುಗನ ಈ ಬೇಡಿಕೆಗಳು ಪೂರ್ಣವಾಗುವಂತೆ ನಮ್ಮ ಸೂಚಿಯು ರಚಿತವಾಗಿರಬೇಕಾಗುತ್ತದೆ.

ಆದುದರಿಂದ, ಸೂಚಿಯಲ್ಲಿ ಪ್ರತಿ ಪುಸ್ತಕದ ಲೇಖಕರ ಹೆಸರಿನಿಂದ ಪ್ರಾರಂಭ ಮಾಡಿ, ಯಾವುದೊಂದು ಪುಸ್ತಕದ ಭಾಷಾಂತರಕಾರ, ಸಂಪಾದಕ ಇವರನ್ನೂ ಹೆಸರಿಸಬೇಕಾಗುತ್ತದೆ. ಅಲ್ಲದೆ ಪ್ರಕಾಶಕರು, ಪುಟ, ಬೆಲೆ, ಆವೃತ್ತಿ ಇವುಗಳೂ ಇದ್ದರೆ ಆ ಪುಸ್ತಕದ ಬಗ್ಗೆ ಒಂದು ಕಲ್ಪನೆ ಓದುಗರಿಗಾಗುತ್ತದೆ; ಆಗಬೇಕು. ಲೇಖಕರ ನಂತರ—, ಯಾವದೊಂದು ವಿಷಯಕ್ಕಾಗಿ ಬರುವ ಓದುಗರಿದ್ದಾರೆ. ಅದಕ್ಕಾಗಿ ಒಂದು ವಿಷಯದ ಮೇಲಿನ ಎಲ್ಲ ಪುಸ್ತಕಗಳು ಒಂದೆಡೆ ಬರಬೇಕಾದುದಾದರೆ— ಪುಸ್ತಕದ ನಿರ್ದಿಷ್ಟ ವಿಷಯವೇನೆಂಬುದೂ ಇರಬೇಕು. ಅದರಂತೆ ತಲೆಬರಹ, ಗ್ರಂಥಮಾಲೆಗಳ ಹೆಸರನ್ನು ಸೂಚಿಸುವುದೂ ಅಷ್ಟೇ ಅಗತ್ಯದ ಮಾತಾಗುತ್ತದೆ. ಕೊನೆಯದಾಗಿ ಅಂತರ್ವಿಷಯಕ ನಮೂದನೆಯೂ ದರ್ಶಕ ನಮೂದುಗಳೂ ಓದುಗರಿಗೆ ಗೊತ್ತಾಗಬೇಕು. ಈಗ, 'ಜಡಭರತನ ಕನಸುಗಳು' ಎಂಬ ಪುಸ್ತಕದಲ್ಲಿ, ಕನಸುಗಳ ಮೇಲೆ ಬೇಂದ್ರೆಯವರ ಅಮೌಲ್ಯವಾದ ಹಿನ್ನುಡಿ ಇದೆ. ಕನಸುಗಳ ಬಗ್ಗೆ ತಿಳಿದುಕೊಳ್ಳಬಯಸುವ ಓದುಗನಿಗೆ ಆ ಭಾಗ ದೊರೆಯದೇ ಹೋಗುತ್ತದೆ. ಹೀಗೆ ಈ ಮರೆಯ ಸಾಮಗ್ರಿಯನ್ನು ಹೊರತೆಗೆಯಲು ಮೇಲೆ ಹೇಳಿದ ಅಂತರ್ವಿಷಯಕ ನಮೂದನೆಯೂ ಸೂಚಿಯಲ್ಲಿ ದೊರೆಯಬೇಕು.

## ಸೂಚಿಯ ಸ್ವರೂಪ

ಸೂಚಿಯ ಕಾರ್ಯವನ್ನು ಯೋಗ್ಯವಾಗಿ ನಿರ್ವಹಿಸಲು ಅನುಕೂಲವಾಗಬೇಕಾದರೆ ಸೂಚಿಯು ಯಾವ ಸ್ವರೂಪದಲ್ಲಿರಬೇಕು? ನಾವೀಗ ಅನುಸರಿಸುತ್ತಿರುವುದು ಹೊತ್ತಿಗೆಯ ರೂಪವನ್ನು, ಎಂದರೆ ಅಲ್ಲಿ ಪ್ರತಿ ಪುಟಕ್ಕೆ ಹತ್ತೋ, ಮೂವತ್ತೋ ಪುಸ್ತಕಗಳ ಹೆಸರು ಹಾಗೂ ಲೇಖಕರ ಪಟ್ಟಿ ಇರುತ್ತದೆ. ಇದರಿಂದ ಕಷ್ಟವೇನೆಂದರೆ ಹೊಸ ಪುಸ್ತಕಗಳು ಬಂದಾಗ

ಅವರ ಇತರ ವಿಷಯಗಳೊಂದಿಗೆ ನಡುವೆ ಅದನ್ನು ಸೇರಿಸುವುದಕ್ಕೆ ಅವಕಾಶವೇ ಇರುವುದಿಲ್ಲ. ಒಂದು ಸಲ ಈ ರೀತಿ ಬರೆದ ಮೇಲೆ ಅಥವಾ ಮುದ್ರಿಸಿಯಾದ ಮೇಲೆ ಅದರ ಕೆಲಸ ಮುಗಿದ ಹಾಗೆಯೇ. ಆದರೆ ನಿತ್ಯವೂ ಪುಸ್ತಕಗಳು ಬಂದು ಬೀಳುತ್ತಲೇ ಇರುವಾಗ, ನಮ್ಮ ಸೂಚಿಯು ಇಲ್ಲಿಗೆ ನಿಂತಿತು ಅಥವಾ ಹಳೆಯದಾಯಿತು, ಎನ್ನಲು ಬರುವಂತಿದೆಯೇ? ಇದು ಅದರ ದೊಡ್ಡ ಕೊರತೆ; ಪುಸ್ತಕಾಲಯ ಸೇವೆಯ ಮೂಲಭೂತ ತತ್ವದ ನಿರಾಕರಣೆ. ಬಹಳವಾದರೆ ಅದೊಂದು ಕಾಯಂ ದಾಖಲೆಯಾಗಿ ಉಳಿಯುವುದು. ಮುದ್ರಿತವಾಗಿದ್ದರೆ ಬುಕ್ ಡಿಪೋದವರ ಕೆಟಲಾಗಿನಂತಾಗಿ ಅದನ್ನೂ ಮನೆಗೆ ಕೊಂಡೊಯ್ಯಬಹುದು. ಇಷ್ಟೇ ಅದರ ಪ್ರಯೋಜನ. ಮತ್ತು ಮೇಲೆ ಕೇಳಿದ ದ್ವಾದಶ ಪ್ರಶ್ನೆಗಳಲ್ಲಿ ಒಂದಕ್ಕೂ ತಾತ್ಕಾಲಿಕವಾದ ಮತ್ತು ಶೀಘ್ರದ ಉತ್ತರ ಇಲ್ಲಿ ದೊರೆಯುವುದಿಲ್ಲ.

ಅಂತೆಯೇ ಸಾರ್ವತ್ರಿಕವಾಗಿ ಇಂದು ಬಳಕೆಯಾಗುತ್ತ ನಡೆದಿರುವುದೆಂದರೆ ಕಾರ್ಡುಗಳ ರೂಪದಲ್ಲಿಯ ಸೂಚಿಯು. ಈ ಪತ್ರಕಗಳು ಒಂದೇ ಆಕಾರದ (೫" × ೩") ವಿದ್ದು, ಅದರ ಒಂದು ಮಗ್ಗಲಿಗೆ ಗೆರೆಗಳಿರುತ್ತವೆ; ಮತ್ತು ಪುಸ್ತಕಗಳ ನಮೂದನೆಯಿದ್ದ ಪತ್ರಕಗಳನ್ನು ಒಂದು ನಿರ್ದಿಷ್ಟ ಕ್ರಮದಲ್ಲಿ ಹೊಂದಿಸಿಡಲಾಗುತ್ತದೆ. ಸುಮಾರು ೨೦೦ ಕಾರ್ಡುಗಳಿಗಾಗುವಷ್ಟು ಒಂದೊಂದು ಪಾತ್ರಕವಿದ್ದು ಅಂಥ ಕೆಲವು ಪಾತ್ರಕಗಳಿಂದ ಕೂಡಿದ ಒಂದು ಕೆಬಿನೆಟ್ ಇರುತ್ತದೆ.

ಇತ್ತ ಪ್ರತಿ ಒಂದು ಕಾರ್ಡಿಗೆ ಒಂದೊಂದು ವಿಶಿಷ್ಟ ನಮೂದನೆ ಇರುತ್ತದೆ. ಅವು ಬಿಡಿಬಿಡಿಯಾಗಿರುವುದರಿಂದ ಹೊಸತಾಗಿ ಬರುವ ಪತ್ರಕಗಳನ್ನು ಈಗಿದ್ದ ಕ್ರಮವನ್ನು ಕೆಡಿಸದೆ ಮಧ್ಯದಲ್ಲಿ ಸೇರಿಸಬರುವಂತಿರುತ್ತವೆ. ಅದರಿಂದ ಸೂಚಿಯಲ್ಲಿ ಪ್ರತಿದಿನಕ್ಕೂ ಪರಿಪೂರ್ಣತೆಯನ್ನೂ, ನಿತ್ಯನೂತನತೆಯನ್ನೂ ಕಾಯ್ದುಕೊಳ್ಳುವುದು ಸಾಧ್ಯವಾಗುತ್ತದೆ. ಇನ್ನೊಂದು ಪ್ರಯೋಜನವೆಂದರೆ ಯಾವುದೊಂದು ಹೊತ್ತಿಗೆಯನ್ನು ಕಪಾಟಿನಿಂದ ಹಿಂತೆಗೆದುಕೊಂಡಾಗ ಆ ಕಾರ್ಡನ್ನು ಸಹಿತ ಸುಲಭದಲ್ಲಿ ಬೇರ್ಪಡಿಸಿಕೊಳ್ಳಬಹುದು. ಪುಸ್ತಕರೂಪದಲ್ಲಿದ್ದ ಸೂಚಿಯಾದರೆ ಅದನ್ನು ಕಾಟು ಹೊಡೆಯಬೇಕಲ್ಲವೇ?

ಇದರಂತೆ ಯಾವುದೊಂದು ಸಣ್ಣ ಬದಲಾವಣೆಯೂ, ಕಾರ್ಡುಗಳಿದ್ದುವಾದರೆ ಸುಲಭದಲ್ಲಿ ನೆರವೇರಬಹುದು.

ಹೀಗೆ ಕಾರ್ಡು ಬಿಡಿಬಿಡಿಯಾಗಿರುವುದರಿಂದ ಇರುವ ಲಾಭಗಳ ಜೊತೆಗೆ, ಅದೇ ದೆಸೆಯಿಂದಾಗಿ, ಯಾವದೊಂದು ಕಾರ್ಡು ಕಳಚಿ ಬಿದ್ದು ಹೋಗಬಹುದು; ಹಿಂದು ಮುಂದಾಗಬಹುದು. ಅದಕ್ಕೆಂದು ಈ ಕಾರ್ಡುಗಳ ಮಧ್ಯೆ, ಕೆಳಭಾಗದಲ್ಲಿ ಒಂದು ರಂಧ್ರವನ್ನು ಮಾಡಿ, ಅದರೊಳಗಿಂದ ಪಾತ್ರಕಕ್ಕೆ ಜೋಡಿಸಿದ ಒಂದು ಲೋಹದ ಸಣ್ಣ ಸಳಿಯನ್ನು ಹಾಯಿಸಿಕೊಂಡು ತರುವ ಕ್ರಮವುಂಟು.

ಆದರೆ ಕಾರ್ಡಿನ ಸೂಚಿಯು ಹೆಚ್ಚು ಜಾಗ ತಿನ್ನುವುದು. ಮತ್ತು ಇದಕ್ಕೆ ವೆಚ್ಚವೂ ಬಹಳ. ಅದಕ್ಕಾಗಿ ಕಾರ್ಡಿನ ಆಕಾರದ ಅಥವಾ ಅದಕ್ಕೂ ದೊಡ್ಡ ಪತ್ರಕಗಳ ರೂಪದಲ್ಲಿ ಸೂಚಿಯನ್ನು ರಚಿಸುವ ಮೂರನೆಯ ಕ್ರಮವೊಂದುಂಟು. ಇಂಥ ಬಿಡಿಹಾಳೆಗಳನ್ನು ಹೊಂದಿಸಿ ಸಣ್ಣ ಸಣ್ಣ ಫೈಲುಗಳಲ್ಲಿ ಹಾಕಿ ಇಡುತ್ತಾರೆ. ಇದರಿಂದ ಕಾರ್ಯವಾಹಕರ ಕೆಲಸ ಹೆಚ್ಚು. ಮತ್ತು ಓದುಗರ ಬಳಕೆ ಹೆಚ್ಚಿದಂತೆ ಅಂಥ ಕಾಗದಗಳು ಮುದುಡಿಕೊಂಡು ಹೊಲಸಾಗಿ ಕಾಣುತ್ತವೆಯಾದ್ದರಿಂದ ಇದು ಹೆಚ್ಚು ಪ್ರಚಾರದಲ್ಲಿಲ್ಲ.

## ಕಾರ್ಡು ಸೂಚಿಯ ವಿಷಯಗಳು

ಇಂಥ ಒಂದು ಕಾರ್ಡಿನಲ್ಲಿ ಬರುವ ಎಲ್ಲ ವಿಷಯಗಳನ್ನು ಇಲ್ಲಿ ಕೊಟ್ಟಿದೆ:—

೧. **ಲೇಖಕ:—** ಕಾರ್ಡಿನಲ್ಲಿ ಯಾವಾಗಲೂ ಲೇಖಕನ ಹೆಸರಿಗೆ ಪ್ರಥಮ ಗೌರವ ಸಲ್ಲುತ್ತಿದೆ; ಮತ್ತು ಅದನ್ನು ಇಡಿಯಾಗಿ ಬರೆಯಬೇಕು. ಬಿರುದುಗಳು, ಪದವಿಗಳು ಬರಕೂಡದು.

೨. **ಪುಸ್ತಕದ ಹೆಸರು:—** ಇದನ್ನು ಸಂಪೂರ್ಣವಾಗಿ ಬರೆಯಬೇಕು. ಬೇರೆ ಭಾಷೆಯ ಪುಸ್ತಕಗಳಿದ್ದರೆ ಆ ಭಾಷೆಯಲ್ಲೇ ಪುಸ್ತಕದ ತಲೆಬರಹವನ್ನು ಬರೆದು ಮುಂದೆ ಕಂಸಿನಲ್ಲಿ ಬೋಧವಾದ ಅದರ ಭಾಷಾಂತರ ಕೊಡಬಹುದು. ಮತ್ತೆ ಇಲ್ಲಿ ಬರಿಯೆ ತಲೆಬರೆಹವೊಂದೇ ಅಲ್ಲದೆ ಯಾರಾದರೂ ಅನುವಾದಕರಿದ್ದರೆ ಅವರ ಹೆಸರೂ, ಮತ್ತೆ ಆವೃತ್ತಿ ಸಂಖ್ಯೆಯೂ ಬರುವುದು.

೩. **ಪ್ರಕಾಶನ:—** ಇಲ್ಲಿ ಪುಸ್ತಕ ಪ್ರಕಟವಾದ ಸ್ಥಳ, ಪ್ರಕಾಶನ ಮಂದಿರ ಹಾಗೂ ವರ್ಷವನ್ನು ಕಾಣಿಸಬೇಕಾಗುವುದು.

೪. **ಇತರ ವಿಷಯ:—** ಇದರಲ್ಲಿ ಪುಸ್ತಕದ ಪುಟಸಂಖ್ಯೆ, ನಕ್ಷೆ ಹಾಗೂ ಚಿತ್ರಗಳಿದ್ದರೆ, ಅವುಗಳನ್ನೂ ಗ್ರಂಥಮಾಲೆಯ ಹೆಸರು ಮುಂತಾದುದನ್ನೂ ಬರೆಯಲಾಗುತ್ತದೆ. ಟಿಪ್ಪಣಿ ರೂಪದಲ್ಲಿ ಪುಸ್ತಕದ ಬಗ್ಗೆ ಕೆಲ ಸಂದರ್ಭದಲ್ಲಿ ಸೇರಿಸಬಹುದು.

೫. ಕಾರ್ಡಿನ ಎಡಭಾಗದ ಮೇಲ್ಗಡೆ ಕ್ರಮಕ ಸಂಖ್ಯೆ ಹಾಗೂ ಕೆಳಗಡೆ ಪ್ರಾಥಮಿಕ ಸಂಖ್ಯೆಯನ್ನು ಕೊಡಬೇಕು.

ಇವುಗಳಲ್ಲಿ ಯಾವದು ಎಲ್ಲಿ ಬರಬೇಕು ಎಂಬುದಕ್ಕೆ ಎಲ್ಲರಿಗೂ ಒಪ್ಪಿತವಾದ ನಿರ್ದಿಷ್ಟ ನಿಯಮಗಳಿವೆ. ಇವುಗಳನುಸಾರ ಒಂದು ಕಾರ್ಡು ಹೇಗಿರಬೇಕು ಎಂಬುದನ್ನು ಇಲ್ಲಿ ಕೊಡಲಾಗಿದೆ.

### ಮುಖ್ಯ ಹಾಗೂ ಸಹಾಯಕ ಪತ್ರಕಗಳು

ಮೇಲೆ ಕೊಟ್ಟ ಮಾದರಿಯು ಮುಖ್ಯ ಪತ್ರಕವೆನ್ನಿಸಿಕೊಳ್ಳುವುದು. ಇದಂತೂ ಒಂದು ಪುಸ್ತಕಕ್ಕೆ ಅತ್ಯಗತ್ಯ. ಆನಂತರ ಇನ್ನೂ ಕೆಲವು ಪತ್ರಕಗಳನ್ನು ಮಾಡಬೇಕಾಗುತ್ತದೆ ಅವಕ್ಕೆ ಅಧಿಕ ಅಥವಾ ಸಹಾಯಕ ಪತ್ರಕಗಳೆನ್ನಬಹುದು.

ಮುಖ್ಯ ಪತ್ರಕವು, ಮೇಲೆ ಕಾಣಿಸಿದಂತೆ ಲೇಖಕರ ಹೆಸರಿನಿಂದ ಪ್ರಾರಂಭವಾಗಿ, ಒಂದು ಗ್ರಂಥದ ಬಗ್ಗೆ ಎಲ್ಲ ಮಾಹಿತಿಯನ್ನು ಕೊಡುತ್ತದೆ. ಮತ್ತು ಈ ಪತ್ರಕದ ಮಾಹಿತಿಯನ್ನವಲಂಬಿಸಿಯೇ ಇತರ ಅಧಿಕಪತ್ರಕಗಳನ್ನು ಸಿದ್ಧಗೊಳಿಸಬೇಕಾಗುತ್ತದೆ.

ಈ ಸಹಾಯಕ ಪತ್ರಕಗಳು ಯಾವಯಾವವೆಂಬುವನ್ನು ನೋಡುವ: ಈ ಮುನ್ನಿನ ಎಂಟನೆಯ ಪ್ರಶ್ನೆಗೆ ಉತ್ತರವಾಗಿ, ಎಂದರೆ, ಪುಸ್ತಕದ ತಲೆಬರಹದ ಪತ್ರಕವೊಂದು ಬೇರೆಯಾಗಿ ಇರಬೇಕು. ಇನ್ನು ಅನುವಾದಕರು, ಸಂಗ್ರಾಹಕರು ಇರುತ್ತಾರೆ. ಅವರಿಗಾಗಿಯೂ ಇಂಥ ಪತ್ರಕಗಳನ್ನು ಸಿದ್ಧಗೊಳಿಸಬೇಕು. ಲೇಖಕರಲ್ಲೇ ಇಬ್ಬರು ಲೇಖಕರಿದ್ದರೆ, ಆ ಸಹಾಯಕ ಲೇಖಕನ ನಮೂದನೆಯೂ ಬೇಕು. ಇದು ಅಲ್ಲದೆ, ಮಹತ್ವದ ಗ್ರಂಥಮಾಲೆ ಇದ್ದರೆ, ಒಂದು ಮಾಲಾಪತ್ರಕವೂ ತಯಾರಾಗಬೇಕು. ಹಾಗೆಯೇ

# ಪತ್ರಕದ (ಕಾರ್ಡಿನ) ಮಾದರಿ

| | | |
|---|---|---|
| | | (ಪುಸ್ತಕ ವಿಷಯ) |
| ಕ್ರ. ಸಂಖ್ಯೆ | ಲೇಖ | ಕರ ಹೆಸರು. |
| | | ತಲೆಬರಹ; ಅನುವಾದಕರು : ಆವೃತ್ತಿ. |
| | | ಪ್ರಕಾಶನ ಸ್ಥಳ, ಪ್ರಕಾಶಕರು, ವರ್ಷ. |
| ಪ್ರಾ. ಸಂ. | | ಪುಟಸಂಖ್ಯೆ, ಮಾಲೆ, ಟಿಪ್ಪಣಿ. |

ಪುಸ್ತಕದ ವಿಷಯವನ್ನು ಕುರಿತು ಸಹಾಯಕ ಪತ್ರಕವನ್ನು ಅಣಿಗೊಳಿಸ ಬೇಕಾಗುವುದು. ಕೊನೆಯದಾಗಿ, ಎರಡು ಬೇರೆ ಬೇರೆ ವಿಷಯಗಳು ಒಂದು ಪುಸ್ತಕದಲ್ಲಿದ್ದು ಯಾವುದಾದರೂ ಒಂದು ವಿಷಯ ಮಾತ್ರ ಬಹಿರಂಗವಾಗಿ ನಾಮಾವಲಿಯಲ್ಲಿ ಬರುತ್ತದೆ. ಆ ಇನ್ನೊಂದು ವಿಷಯವೂ ಓದುಗರಿಗೆ ಗೊತ್ತಾಗಲೆಂದು ಅಂತರ್ವಿಷಯಕವಾದ ಒಂದು ಪತ್ರಕವನ್ನೂ ಸಿದ್ಧಗೊಳಿಸ ಬೇಕಾಗುವುದು.

ಮಹತ್ವದ ಮಾತೆಂದರೆ, ಈ ಎಲ್ಲ ಸಹಾಯಕ ಪತ್ರಗಳನ್ನು ಸಿದ್ಧಗೊಳಿ ಸುವಾಗ ಯಾವ ಮಾತು ಮುಖ್ಯವೋ, ಅದನ್ನು ನಿರ್ದೇಶನ ಸೌಲಭ್ಯಕ್ಕಾಗಿ ಮೊದಲಿಗೆ ಬರೆದು, ಮುಖ್ಯ ಪತ್ರಕದ ಉಳಿದ ವಿಷಯಗಳಲ್ಲಿ ಎಷ್ಟು ಅಗತ್ಯವೋ ಅಷ್ಟನ್ನು ಮಾತ್ರ ಉಳಿಸಿಕೊಳ್ಳಲಾಗುತ್ತದೆ. ಇವುಗಳ ಒಂದೊಂದು ಮಾದರಿಯನ್ನು ಇಲ್ಲಿ ಕೊಡಲಾಗಿದೆ: (ಪು. ೨೭೫ರಿಂದ ಪು. ೨೮೧)

## ಸಂಯುಕ್ತ ಸೂಚೀಕರಣ

ಇಂಥ ಪತ್ರಕಗಳನ್ನು ಅಮೇರಿಕೆಯ 'ಲೈಬ್ರರಿ ಆಫ್ ಕಾಂಗ್ರೆಸ್'ನವರು ಮುದ್ರಿಸಿ ಇತರ ಗ್ರಂಥಾಲಯಗಳಿಗೆ ಮಾರುತ್ತಾರೆ. ಇದರಿಂದ ಆಗುವ ಪ್ರಯೋಜನ ಅಷ್ಟಿಷ್ಟಲ್ಲ. ಈ ಪತ್ರಕಗಳನ್ನು ಪ್ರತಿಯೊಂದು ಭಂಡಾರದವರು ಬರೆಯುತ್ತ ಕೂಡ್ರುವ ವೇಳೆ ಮತ್ತು ಶ್ರಮ ಉಳಿಯುತ್ತದೆ. ವೆಚ್ಚವೂ ಕಡಿಮೆ. ಹಾಗೂ ಗ್ರಂಥಾಲಯವಲ್ಲಿ ಇನ್ನಿತರ ಕೆಲಸಕ್ಕೂ ಅದು ಉಪ ಯೋಗಕ್ಕೆ ಬರುವುದು.

ಹೀಗೆ ಒಂದು ಮಧ್ಯವರ್ತಿ ಸ್ಥಳದಲ್ಲಿ ಸೂಚೀಕರಣದ ಕಾರ್ಯ ನಡೆಯುವುದು ನಿಜಕ್ಕೂ ಅಪೇಕ್ಷಣೀಯ. ಇದರಂತೆ ಯಾವುದೊಂದು ಪುಸ್ತಕ ಎಲ್ಲಿದ್ದರೂ ಒಬ್ಬ ಓದುಗನಿಗೆ ದೊರೆಯಬೇಕಾದರೆ, ಎಲ್ಲ ಪುಸ್ತಕಾಲಯಗಳ ಪತ್ರಕಗಳ ಒಂದು ಪ್ರತಿ ಹೀಗೆ ಮಧ್ಯವರ್ತಿ ಸ್ಥಳದಲ್ಲಿ ಇರುವುದುಂಟು. ಇದರಿಂದ ಗ್ರಂಥಗಳ ಅಂತರ್ವಿತರಣೆ ಸುಲಭವಾಗುತ್ತದೆ. ಈ ಬಗೆಯ ಏಕತ್ರಿತ ಸೂಚೀಕರಣವನ್ನು ಆ ಆ ಮಧ್ಯವರ್ತಿ ಕೇಂದ್ರಗಳು ಕೈಕೊಳ್ಳ ಬೇಕಾಗಿದೆ.

ಟಿಳಕ ಬಾಲ ಗಂಗಾಧರ.

ಕ್ರ. ಸಂಖ್ಯೆ

ಶ್ರೀಮದ್ಭಗವದ್ಗೀತಾರಹಸ್ಯ ಅಥವಾ ಕರ್ಮಯೋಗಶಾಸ್ತ್ರ; ಬಾಲ ಗಂಗಾಧರ ಟಿಳಕ
ರಿಂದ. ವೆಂ. ಭೀ. ಆಲೂರ ಹಾಗೂ ವಾ. ಶ್ರೀ. ಕರೂರರಿಂದ ಅನುವಾದಿತ.

ಹುಬ್ಬಳ್ಳಿ, ಬಿಂದು ನಾರಾಯಣ ಮುತಾಲಿಕದೇಸಾಯಿ, ೧೯೧೯.

ಪುಟ ೫೧ + ೮೫೮.

ಪ್ರಾ. ಸಂ.

| | | |
|---|---|---|
| | | |
| ಕ್ರ. ಸಂಖ್ಯೆ | ಸ್ನೋ,<br>ಮೂಲ<br>ಯುವ | ಎಡರ್. (ಸರ).<br><br>ಚೀನದ ಬಾಳು ಬದುಕು : ಚೀನೀ ಆಧುನಿಕ ಸಣ್ಣ ಕತೆಗಳ ಸಂಗ್ರಹ: ಇಂಗ್ಲೀಷಿನಲ್ಲಿ ಎಡರ್ ಸ್ನೋ ಅವರಿಂದ. ಬೇಂದ್ರೆ, ಮಂಗಲಗಿ, ಕುರ್ತಕೋಟಿ ಮತ್ತು ವರಗಿರಿ ಯಿಂದ ಅನುವಾದಿತ.<br><br>ಧಾರವಾಡ, ಮನೋಹರ ಗ್ರಂಥಮಾಲೆ, ೧೯೫೦.<br><br>ಪುಟ ೨೭+೪೦೬. (ಮನೋಹರ ಗ್ರಂಥಮಾಲೆ ೯೯-೧೦೦.) |
| ಪ್ರಾ. ಸಂ. | | |

ಅನುವಾದಕ ಪತ್ರಿಕ ೧.

| | | |
|---|---|---|
| | | |
| ಕ್ರ. ಸಂಖ್ಯೆ<br><br><br>ಪ್ರಾ. ಸಂ. | ಆಲೂರ<br><br>ಹಾಗೂ | ವೆಂ. ಭೀ. (ಅನು.)<br><br>ಶ್ರೀಮದ್ಭಗವದ್ಗೀತಾ ರಹಸ್ಯ; ಬಾಲ ಗಂಗಾಧರ ಟಿಳಕರಿಂದ. ವೆಂ. ಭೀ. ಆಲೂರ ವಾ. ಶ್ರೀ. ಕೆರೂರರಿಂದ ಅನುವಾದಿತ.<br><br>೧೯೧೯. |

| | | |
|---|---|---|
| | | |
| ಕ್ರ. ಸಂಖ್ಯೆ | ಕೆರೂರ<br>ನೆಂ. | ವಾ. ಶ್ರೀ. [ಅನು.]<br>ಶ್ರೀಮದ್ಭಗವದ್ಗೀತಾ ರಹಸ್ಯ : ಬಾಲ ಗಂಗಾಧರ ಟಿಳಕರಿಂದ.<br>ಭೀ. ಆಲೂರ ಹಾಗೂ ವಾ. ಶ್ರೀ. ಕೆರೂರರಿಂದ ಅನುವಾದಿತ.<br>೧೯೧೯. |
| ಪ್ರಾ. ಸಂ. | | |

| | | |
|---|---|---|
| • | | |
| ಕ್ರ. ಸಂಖ್ಯೆ | | ಮನೋಹರ ಗ್ರಂಥಮಾಲೆ. |
| | ೯೯-೧೦೦ | ಸ್ನೋ, ಎಡರ್; ಚೀನದ ಬಾಳು ಬದುಕು; ಬೇಂದ್ರೆ ಮುಂತಾದವರಿಂದ ಅನುವಾದಿತ. |
| | | ೧೯೫೦. |
| ಪ್ರಾ. ಸಂ | | |

# ವಿಷಯ ಪತ್ರಕ ೧

| | | |
|---|---|---|
| | | ಚೀನಾ-ಕತೆಗಳು |
| ಕ್ರ. ಸಂಖ್ಯೆ | ಸ್ನೋ, | ಎಡರ್. |
| | ಚೇಂದ್ರೆ, | ಚೀನದ ಬಾಳು ಬದುಕು; ಇಂಗ್ಲೀಷಿನಲ್ಲಿ ಮೂಲ ಎಡರ್ ಸ್ನೋ ಅವರಿಂದ. ಮಂಗಲಗಿ, ಕೀರ್ತಿ, ವರಗಿರಿ ಇವರಿಂದ ಅನುವಾದಿತ. |
| | | ಧಾರವಾಡ, ಮನೋಹರ ಗ್ರಂಥ ಮಾಲೆ, ೧೯೫೦. |
| | | ಪುಟ ೨೭ + ೪೦೬ (ಮನೋಹರ ಗ್ರಂಥಮಾಲೆ, ೯೯-೧೦೦) |
| ಪ್ರಾ. ಸಂ | | |

# ವಿಷಯ ಪತ್ರಕ ೨

| | | |
|---|---|---|
| | | ಭಗವದ್ಗೀತೆ |
| ಕ್ರ. ಸಂಖ್ಯೆ | ಟಿಳಕ | ಬಾಲ ಗಂಗಾಧರ |
| | ರಿಂದ. | ಶ್ರೀಮದ್ಭಗವದ್ಗೀತಾ ರಹಸ್ಯ ಅಥವಾ ಕರ್ಮಯೋಗಶಾಸ್ತ್ರ: ಬಾಲ ಗಂಗಾಧರ ಟಿಳಕ ವೆಂ ಭೀ. ಆಲೂರ, ವಾ. ಶ್ರೀ. ಕೆರೂರರಿಂದ ಅನುವಾದಿತ. |
| | | ಹುಬ್ಬಳ್ಳಿ, ಬಿಂದು ನಾರಾಯಣ ಮುತಾಲಿಕದೇಸಾಯಿ, ೧೯೧೯. |
| | | ಪುಟ. ೫೧ + ೮೫೮. |
| ಪ್ರಾ. ಸಂಖ್ಯೆ | | |

# ೨. ಸೂಚಿಯ ಪ್ರಕಾರಗಳು

ಓದುಗರು ಸೂಚಿಯನ್ನು ಯಾವಯಾವುದಕ್ಕಾಗಿ ನೋಡುವ ರೆಂಬುದನ್ನು ಹನ್ನೆರಡು ಪ್ರಶ್ನೆಗಳ ಮೂಲಕ ಹೇಳಿದೆಯಷ್ಟೆ. ಅವುಗಳನ್ನು ಪೂರೈಸಲು ಅನುಕೂಲವಾದ ಸೂಚಿಯು ಎಂಥದಿರಬೇಕು? ಯಾವುದಾದರೂ ಒಂದು ಬಗೆಯ ವ್ಯವಸ್ಥೆ ಎಲ್ಲ ಪ್ರಶ್ನೆಗಳಿಗೂ ಉತ್ತರ ಕೊಡಲಸಮರ್ಥ ವೆಂಬುದನ್ನು ಹಿಂದೆಯೇ ಹೇಳಿದೆ. ಆದರಿಂದಾಗಿ ಸೂಚಿಯಲ್ಲಿ ಕೆಲವು ಪ್ರಕಾರಗಳನ್ನು ಮಾಡಬಹುದು.

## ಲೇಖಕ ಸೂಚಿ

ಒಂದು ಗ್ರಂಥದ ಬಾಹ್ಯ ವಿಷಯಗಳಲ್ಲಿ ಲೇಖಕನ ಹೆಸರು ಅತ್ಯಂತ ಮಹತ್ವದ್ದಷ್ಟೆ. ಲೇಖಕರ ಹೆಸರಿನ ಅಕಾರಾದಿಯಲ್ಲಿ ಹೊಂದಿಸಿಟ್ಟ ನಾಮಾವಲಿಯೇ ಇದು. ಇದಲ್ಲದೇ ಸೂಚಿಯ ಕಾರ್ಯವು ಪೂರ್ಣವಾಗುವುದಿಲ್ಲ. ಇನ್ನು ಕೆಲವೆಡೆ ಇದರಲ್ಲಿ, ಲೇಖಕನ ಹೆಸರಲ್ಲದೇ ಅವನ ಬಗ್ಗೆ ಇರುವ ವಿಮರ್ಶೆಗಳನ್ನೂ ಚರಿತ್ರೆಗಳನ್ನೂ, ಆ ಹೆಸರಿನಡಿಯಲ್ಲಿಯೇ ಪತ್ರಕವನ್ನು ಸಿದ್ಧಗೊಳಿಸಿ ಇಡಲಾಗುತ್ತದೆ. "ಬೇಂದ್ರೆ, ದ. ರಾ.' ಎಂಬ ಹೆಸರಿನ ಪತ್ರಕಗಳ ಜೊತೆಗೆ, 'ದತ್ತವಾಣಿ' ಎಂಬ ಪುಸ್ತಕದ ಪತ್ರಕವೂ, 'ಕವಿವರ ಬೇಂದ್ರೆ' ಎಂಬುದರ ಪತ್ರಕವೂ ಇರುತ್ತವೆ.

## ವಿಷಯ ಸೂಚಿ

ಯಾವುದೊಂದು ಪುಸ್ತಕದ ವಿಷಯವನ್ನು ಮೇಲೆ ಬರೆದು, ಅದರ ಅನುಕ್ರಮದಲ್ಲಿ ಕಾರ್ಡುಗಳನ್ನು ಅಣಿಗೊಳಿಸುವುದು ಇಲ್ಲಿ ಕಂಡುಬರುತ್ತದೆ. ಸಣ್ಣ ಪುಸ್ತಕಾಲಯವೊಂದಕ್ಕೆ ಇದು ಸಾಧ್ಯವಾಗಬಲ್ಲ ವ್ಯವಸ್ಥೆಯಾದೀತು. ಪುಸ್ತಕಾಲಯಗಳು ಬೆಳೆದ ಹಾಗೆಲ್ಲ, ವಿಷಯಗಳು ಹೆಚ್ಚಾಗುತ್ತವೆ. ಅದರ ಜೊತೆಗೆ ಅಂತರ್ವಿಷಯಕ ನಮೂದುಗಳು ಹೆಚ್ಚಾಗಬೇಕಾಗುತ್ತದೆ. ಇದರಿಂದ ನಿರ್ದಿಷ್ಟ ವಿಷಯ ಇಂಥದೇ ಎಂದು ತಿಳಿಯಾಗಿ ಗೊತ್ತಾಗದೇ ಓದುಗನಿಗೆ ತನ್ನ ಪುಸ್ತಕ ಹುಡುಕುವುದು ಕಷ್ಟವಾಗುವುದು.

## ನಿಘಂಟು ಸೂಚಿ

ಒಂದು ಶಬ್ದಕೋಶದಲ್ಲಿ ಎಲ್ಲ ಶಬ್ದಗಳನ್ನು ಅಕ್ಷರಾನುಕ್ರಮದಲ್ಲಿ ಹೊಂದಿಸುವಂತೆ ಇಲ್ಲಿ ಎಲ್ಲ ಬಗೆಯ ಪತ್ರಕಗಳನ್ನು, ಅದು ಲೇಖಕನದಿರಲಿ,

ಪುಸ್ತಕ ಶೀರ್ಷಿಕೆಯಿದಿರಲಿ, ಶಬ್ದಾನುಕ್ರಮದಲ್ಲಿ ಹೊಂದಿಸಿಡುವುದೇ ಇದರ ವೈಶಿಷ್ಟ್ಯ. ಓದುಗನಿಗೆ ಒಂದು ಪುಸ್ತಕದ ಬಗ್ಗೆ ಯಾವುದೊಂದು ಎಳೆ ಗೊತ್ತಿದ್ದರೆ ಸಾಕು, ಆ ಪುಸ್ತಕವನ್ನು ಹುಡುಕಿಕೊಳ್ಳಬಹುದು. ಇದನ್ನು ಉಪಯೋಗಿಸುವುದೆಂದರೆ ನಿಘಂಟಿನಲ್ಲಿ ಒಂದು ಶಬ್ದ ಹುಡುಕಿದ ಹಾಗೆ. ಮೇಲಿನ ೧೨ ಪ್ರಶ್ನೆಗಳಲ್ಲಿ ಹೆಚ್ಚಾಗಿ ಎಲ್ಲದಕ್ಕೂ ಇದರಲ್ಲಿ ಉತ್ತರ ದೊರೆಯುತ್ತದೆ. ಆದರೆ ಇದನ್ನು ಕಾರ್ಯರೂಪದಲ್ಲಿ ಸುಲಭವಾಗಿ ತರಲು ಸಾಧ್ಯವಿಲ್ಲವೆಂದಾಗಿದೆ. ಮತ್ತು ಒಂದು ವಿಷಯದ ಮೇಲಿನ ಹಾಗೂ ತತ್ಸಂಬಂಧಿಯಾದ ವಿಷಯಗಳ ಪುಸ್ತಕಗಳು ಒಂದೆಡೆ ಸಿಕ್ಕುವುದಿಲ್ಲ. ಹಾಗೆ ದೊರೆಯುವಂತೆ ಮಾಡಬೇಕಾದರೆ 'ಈ ವಿಷಯ ನೋಡಿರಿ,' 'ಅದನ್ನು ನೋಡಿರಿ' ಎಂಬ ದರ್ಶಕ ಪತ್ರಕಗಳ ದೊಡ್ಡ ಹೊರೆಯನ್ನೇ ಇಡಬೇಕಾಗುವುದು.

## ವರ್ಗೀಕೃತ ಸೂಚಿ

ಗ್ರಂಥಾಲಯದಲ್ಲಿ ಯಾವ ವರ್ಗೀಕರಣ ಪದ್ಧತಿಯನ್ನು ಅವಲಂಬಿಸಿದೆಯೋ ಅದೇ ರೀತಿಯಲ್ಲಿ ಪತ್ರಕಗಳನ್ನು ಹೊಂದಿಸಿಡುವ ಸೂಚಿಗೆ ವರ್ಗೀಕೃತ ಸೂಚಿ ಎಂದು ಹೆಸರು. ಪತ್ರಕದ ಎಡಭಾಗದ ಮೇಲ್ಗಡೆ ಇರುವ ಕ್ರಮಿಕ ಸಂಖ್ಯೆಯ ಪ್ರಕಾರ ಇಲ್ಲಿ ಪತ್ರಕಗಳನ್ನು ಹೊಂದಿಸಲಾಗುವುದು. ಒಂದೇ ಕ್ರಮಿಕ ಸಂಖ್ಯೆಯಲ್ಲಿ ೨-೩ ಪುಸ್ತಕಗಳಿದ್ದರೆ, ಲೇಖಕರ ಹೆಸರಿನ ಮೂಲಕ, ಲೇಖಕರ ಹೆಸರೂ ಒಂದೇ ಆದರೆ—ತಲೆಬರೆಹದ ಮೂಲಕ, ಹೊಂದಿಸಬೇಕಾಗುವುದು. ಇದು ಶೀಘ್ರ ಫಲಕಾರಿಯೆಂದು ಕಂಡುಬಾರದಿದ್ದರೂ, ಇದರ ತಳಹದಿ ಭದ್ರವಾದುದು. ಒಂದು ವಿಷಯದ ಮೇಲಿನ ಪೂರ್ವಾಪರಗಳೆಲ್ಲ ತಿಳಿದು, ಅಭ್ಯಾಸಿಗನಿಗೆ ತುಂಬ ಉಪಯುಕ್ತವಾಗುವಂತಿದೆ. ಆದರೆ, ಅದಕ್ಕಾಗಿ ಗ್ರಂಥಾಲಯದಲ್ಲಿ ಅನುಸರಿಸುವ ವರ್ಗೀಕರಣ ಪದ್ಧತಿಯನ್ನು (ಸ್ವಲ್ಪ ಮಟ್ಟಿಗಾದರೂ) ಓದುಗ ಅರಿತವನಾಗಿರಬೇಕಲ್ಲ, ಎಂಬುದೇ ಇದರ ಮೇಲಿನ ಪ್ರಮುಖ ಆಕ್ಷೇಪ.

## ಯಾವುದರ ಅನುಸರಣೆ?

ಮೇಲೆ ಹೇಳಿದವುಗಳಲ್ಲಿ ಮುಖ್ಯತಃ, ವರ್ಗೀಕೃತ ನಾಮಾವಲಿಯನ್ನು ಅನುಸರಿಸಬೇಕೋ, ನಿಘಂಟು ರೂಪವನ್ನು ಗ್ರಹಿಸಬೇಕೋ ಎಂಬುದಾಗಿ ಸಾಕಷ್ಟು ಚರ್ಚೆಯಾಗಿ, ಅದೀಗ ಚರ್ವಿತಚರ್ವಣವೆನ್ನಿಸಿ

ಕೊಂಡಿವೆ. ನಮಗೆ ಸೂಕ್ತವಾದ ಮಾರ್ಗ ಯಾವುದೆಂದು ಸ್ವಲ್ಪದರಲ್ಲಿಯೆ ಹೇಳಿ ಮುಗಿಸಿಬಿಡಬಹುದು. ಕೋಶಸೂಚಿಯಲ್ಲಿಯಂತೆ ಎಲ್ಲವನ್ನೂ ಕಲಸು ಮೇಲೋಗರ ಮಾಡಿ, ಒಂದೆಡೆ ಸೇರಿಸದೆಯೇ, ಅವನ್ನ ಮೂರು ಮುಖ್ಯ ಭಾಗವಾಗಿ ವಿಂಗಡಿಸಬೇಕು. ಎಂದರೆ ಲೇಖಕರ ಹೆಸರಿನ ಪತ್ರಕಗಳದಷ್ಟೇ ಒಂದು ಸೂಚಿ, ಪುಸ್ತಕ ತಲೆಬರೆಹದ್ದಿನ್ನೊಂದು; ಕೊನೆಯದು ವರ್ಗೀಕೃತ ನಾಮಾವಲಿ.

ಒಂದು ಪುಸ್ತಕ ಬಂದೊಡನೆ ಅದಕ್ಕೆ ಇಷ್ಟು ರೀತಿಯಲ್ಲಿ ಪತ್ರಕಗಳನ್ನು ಮಾಡುತ್ತೇವಷ್ಟೆ:—

೧. ಮುಖ್ಯ ಪತ್ರಕ
೨. ಲೇಖಕ ಪತ್ರಕ
೩. ಶೀರ್ಷಿಕಾ ಪತ್ರಕ
೪. ವಿಷಯ ಪತ್ರಕ
೫. ಅನುವಾದಕರ, ಸಂಗ್ರಾಹಕ ಅಥವಾ ಸಹಾಯಕ ಪತ್ರಕ
೬. ಗ್ರಂಥಮಾಲಾ ಪತ್ರಕ
೭. ಅಂತರ್ವಿಷಯಕ ಪತ್ರಕ.

ಈ ಏಳರಲ್ಲಿ ಮುಖ್ಯ ಪತ್ರಕವನ್ನು ವರ್ಗೀಕೃತ ನಾಮಾವಲಿಯಲ್ಲಿಯೂ, ಲೇಖಕ ಪತ್ರಕವನ್ನು ಮತ್ತು ಅನುವಾದಕ ಇತ್ಯಾದಿಗಳ ಪತ್ರಕಗಳನ್ನು ಲೇಖಕ ಸೂಚಿಯಲ್ಲಿಯೂ, ಶೀರ್ಷಿಕೆ, ಗ್ರಂಥಮಾಲೆ, ವಿಷಯ ಹಾಗೂ ಅಂತರ್ವಿಷಯಕ ಪತ್ರಕಗಳನ್ನು ಶೀರ್ಷಿಕೆಯ ಸೂಚಿಯಲ್ಲಿಯೂ ಸೇರಿಸಬಹುದೆಂದು ತೋರುತ್ತದೆ. ವರ್ಗೀಕೃತ ನಾಮಾವಲಿಯಿದ್ದಾಗ್ಗ ವಿಷಯ ಪತ್ರಕಗಳನ್ನು ಮಾಡುವ ಅಗತ್ಯ ಅಷ್ಟಿಲ್ಲ.

## ೩. ಸೂಚೀಕರಣದ ನಿಯಮಗಳು

ಪತ್ರಕಗಳನ್ನು ಸಿದ್ಧಗೊಳಿಸುವಾಗ, ಒಂದು ಕ್ರಮಬದ್ಧತೆ ಇರುವುದಗತ್ಯ ವಾಗುತ್ತದೆ. ಅದಿಲ್ಲದಿದ್ದರೆ, ಭಿನ್ನ ಭಿನ್ನವಾದ ಪತ್ರಕಗಳು ಒಂದುಗೂಡಿದಾಗ ಅವನ್ನು ಹೊಂದಿಸುವುದು ಕಷ್ಟ; ಓದುಗರಿಗೂ ನಿಷ್ಪ್ರಯೋಜನಕಾರಿಯಾಗುತ್ತದೆ. ಇದು ಅಲ್ಲದೆ, ಪುಸ್ತಕಗಳು ವಿಶಿಷ್ಟ ಬಗೆಯಲ್ಲಿ ಹೊರಬರುವುದರಿಂದ ಕೆಲ ಸಮಸ್ಯೆಗಳು ಏಳುತ್ತವೆ. ಉದಾ:— ಒಬ್ಬ ಲೇಖಕ ಒಂದು ಸಾರೆ ತನ್ನ ನಿಜ ಹೆಸರಿನಿಂದಲೂ, ಮತ್ತೊಂದು ಸಲ ಗುಪ್ತನಾಮದಿಂದಲೂ ಪುಸ್ತಕಗಳನ್ನು ಪ್ರಕಟಿಸುವುದುಂಟು. ಇಂಥ ಲೇಖಕನ ಎಲ್ಲ ಕೃತಿಗಳು ಒಂದೆಡೆ

ಬರಬೇಕಾದರೆ ಹೇಗೆ, ಎಂದು ನೋಡಬೇಕಾಗುತ್ತದೆ. ಇತ್ತ, ಸರಕಾರೀ ಪ್ರಕಟನೆಗಳಿರುತ್ತವೆ, ಹಸ್ತಪ್ರತಿಯಲ್ಲಿಯ ಗ್ರಂಥಗಳಿರುತ್ತವೆ. ಅವುಗಳ ಪತ್ರಕಗಳನ್ನು ಯಾವ ರೀತಿ ಸಿದ್ಧಗೊಳಿಸಬೇಕೆಂಬುದು ತುಸು ತೊಡಕಿನ ಮಾತಾಗುವುದು. ಇವೆಲ್ಲವುಗಳಿಗಾಗಿ ಕೆಲವು ನಿರ್ದಿಷ್ಟ ನಿಯಮಗಳನ್ನು ಅಮೇರಿಕನ್ ಲೈಬ್ರರಿ ಅಸೋಸಿಯೇಶನ್ನಿನವರು ಹಾಕಿಕೊಟ್ಟಿದ್ದಾರೆ. ಈ ನಿಯಮಗಳು ಮೂಲತಃ ಮೂರು ನಾಲ್ಕು ಬಗೆಯಾಗಿವೆ: -

(೧) **ಮುಖ್ಯ ನಮೂದಿನ ಬಗೆ:—** ಸಾಮಾನ್ಯವಾಗಿ ಲೇಖಕನ ಹೆಸರಿನಿಂದ ಆರಂಭಿಸಿ ಇದನ್ನು ಕೊಡಬೇಕೆಂದು ಹೇಳಿದ್ದರೂ ಕೆಲ ಸಲ ಒಬ್ಬರಿಗಿಂತ ಹೆಚ್ಚು ಲೇಖಕರಿರುತ್ತಾರೆ, ಮತ್ತೆ ಹಲವೆಡೆ ಲೇಖಕರ ಹೆಸರೇ ಇರುವುದಿಲ್ಲ. ಇನ್ನು ಕೆಲವೆಡೆ ಸಂಸ್ಥೆಗಳ ಹೆಸರುಗಳಿರುತ್ತವೆ. ಅವುಗಳನ್ನೆಲ್ಲ ನಿಯಮನಗೊಳಿಸುವುದಗತ್ಯ; ಮತ್ತು ಇದಕ್ಕೆ ಸಂಬಂಧಪಟ್ಟ ನಿಯಮಗಳೆಲ್ಲ ಇದರಡಿ ಬರುತ್ತವೆ.

(೨) **ಲೇಖಕರ ನಮೂದಿನ ಬಗೆ:—** ಲೇಖಕರ ಹೆಸರನ್ನು ಯಾವ ರೀತಿಯಲ್ಲಿ ಬರೆಯಬೇಕೆಂಬುದೂ ಅನೇಕ ಪುಸ್ತಕಗಳ ವಿಚಾರದಲ್ಲಿ ತಲೆ ತಿನ್ನುತ್ತದೆ. ಸಾಮಾನ್ಯತಃ ಅಡ್ಡ ಹೆಸರನ್ನು ಮೊದಲು ಕಾಣಿಸಬೇಕು ಎಂದಿದೆ. ಬೆಳ್ಳೂರು ಮೈಲಾರ ಶ್ರೀಕಂಠಯ್ಯ ಎಂಬಲ್ಲಿ, ಯಾವ ಹೆಸರನ್ನು ಮುಖ್ಯವೆಂದು ತೆಗೆದುಕೊಳ್ಳಬೇಕು ? ಸ್ತ್ರೀಯರ ಹೆಸರನ್ನು ಯಾವ ಕ್ರಮ ದಲ್ಲಿ ಬರೆಯುವುದು ? ಅದರಂತೆ ಪ್ರಾಚೀನ ಲೇಖಕರಲ್ಲಿ ಮುಖ್ಯ–ಅಮುಖ್ಯ ಹೆಸರೆಂಬ ಭೇದವೇ ಇಲ್ಲ. ಇಂತಹವುಗಳಿಗೆ ಸಂಬಂಧಪಟ್ಟ ನಿಯಮಗಳೆಲ್ಲ ಇಲ್ಲಿ ಸಮಾವೇಶವಾಗುತ್ತವೆ.

(೩) **ಸಂಸ್ಥೆಗಳ ನಮೂದಿನ ಬಗೆ:—** ಪುಸ್ತಕಾಲಯ ಶಾಸ್ತ್ರ ದಲ್ಲಿ, ಯಾವುದೊಂದು ಸಂಸ್ಥೆ ಒಂದು ಗ್ರಂಥ ನಿರ್ಮಾಣಕ್ಕೆ ಪೂರ್ಣ ಹೊಣೆ ಯಾಗಿದ್ದರೆ ಅದನ್ನು ಲೇಖಕ ಎಂದು ಪರಿಗಣಿಸಲಾಗುತ್ತದೆ. ಆ ದೃಷ್ಟಿಯಿಂದ ಇಂಥ ಸಂಸ್ಥೆಗಳ ಪ್ರಥಮ ನಮೂದನೆ ಎಂತು ಇರಬೇಕೆಂದೂ ವಿವೇಚಿಸ ಬೇಕಾಗುತ್ತದೆ.

ಇವಲ್ಲದೆ ಯಾವುದೊಂದು ನಾಡಿನ ಅಥವಾ ಪ್ರದೇಶದ ಹೆಸರಿನಿಂದ ಪ್ರಾರಂಭಿಸಿ, ಪತ್ರಕವನ್ನು ತಯಾರಿಸಬೇಕಾದರೆ ನಿರ್ದಿಷ್ಟಪಡಿಸಲಾದ ಕೆಲವು

ನಿಯಮಗಳನ್ನೂ ವಿವರದಲ್ಲಿ ಗೊತ್ತುಮಾಡಲಾಗಿದೆ. ಕೊನೆಯದಾಗಿ ಸಹಾಯಕ ಪತ್ರಕಗಳನ್ನು ಬರೆಯುವ ಕ್ರಮದ ನಿರ್ದಿಷ್ಟ ನಿಯಮಗಳನ್ನೂ ಕೊಡಲಾಗಿದೆ. ಇವುಗಳ ನಡೆಯಲ್ಲಿ ನಮಗೆ ಪ್ರಯೋಜನವಿರುವಷ್ಟರ ನಿಯಮಗಳನ್ನು ಇನ್ನುಮುಂದೆ ಕೊಡಲಾಗಿದೆ:—

## ಮುಖ್ಯ ನಮೂದಿನ ಬಗೆ

**೧. ಸಾಮಾನ್ಯ ನಿಯಮ:—** ಸಾಮಾನ್ಯವಾಗಿ ಒಂದು ಗ್ರಂಥವನ್ನು ಅದರ ಲೇಖಕರ ಹೆಸರಿನಡಿಯಲ್ಲಿ ನಮೂದಿಸಬೇಕು.

ಕಾರಂತ, ಕೋಟ ಶಿವರಾಮ.

ಮರಳಿ ಮಣ್ಣಿಗೆ. *

**೨. ಒಬ್ಬರಿಗಿಂತ ಹೆಚ್ಚು ಲೇಖಕರ ಕೃತಿ:—** ಒಂದು ಗ್ರಂಥಕ್ಕೆ ಇಬ್ಬರು ಅಥವಾ ಹೆಚ್ಚು ಲೇಖಕರಿದ್ದರೆ, ಮೊದಲ ಲೇಖಕನ ಹೆಸರಿನಡಿ ಮುಖ್ಯ ಪತ್ರಕವನ್ನು ಸಿದ್ಧಗೊಳಿಸಬೇಕು. ಆನಂತರ ಇನ್ನೊಬ್ಬ ಲೇಖಕನ ಹೆಸರಿನ ಮುಂದೆ 'ಸಹ–ಲೇಖಕ' ಎಂದು ಕಂಸಿನಲ್ಲಿ ಕಾಣಿಸಿ ಇನ್ನೊಂದು ಪತ್ರಕವನ್ನು ಬರೆಯಬೇಕು.

(ಅ) ತೇಲಕರ, ಶ್ರೀಧರ.

ಕರ್ನಾಟಕದ ಸಮರಭೇರಿ: ಶ್ರೀಧರ ತೇಲಕರ & ಹಿರೇಮಲ್ಲೂರ ಈಶ್ವರನ್ನರಿಂದ.

(ಆ) ಹಿರೇಮಲ್ಲೂರ, ಈಶ್ವರನ್ (ಸಹ–ಲೇಖಕ)

ಕರ್ನಾಟಕದ ಸಮರಭೇರಿ: ಶ್ರೀಧರ ತೇಲಕರ & ಹಿರೇಮಲ್ಲೂರ ಈಶ್ವರನ್ನರಿಂದ.

**೩. ಸಂಗ್ರಹಗಳು:—** ಇಬ್ಬರು ಮುವ್ವರಿಗಿಂತ ಹೆಚ್ಚು ಲೇಖಕರಿದ್ದು, ಅವರಲ್ಲಿ ಯಾರೊಬ್ಬರೂ ಆ ಗ್ರಂಥದ ಹುಟ್ಟಿಗೆ ಮುಖ್ಯ ಕಾರಣರಾಗಿರದೇ, ಬೇರೊಬ್ಬರು ಅರ್ಥಾತ್ ಸಂಗ್ರಾಹಕ ಅಥವಾ ಸಂಪಾದಕನೊಬ್ಬ

* ಸಂಕ್ಷಿಪ್ತತೆಯ ದೃಷ್ಟಿಯಿಂದ ಒಂದು ಮುಖ್ಯ ಪತ್ರಕದಲ್ಲಿರಬೇಕಾದ ಉಳಿದ ವಿಷಯಗಳನ್ನು ಉದಾಹರಣೆಯಲ್ಲಿ ಕೊಟ್ಟಿಲ್ಲ.

ಇದ್ದುದಾದರೆ ಅಂಥ ಸಂಗ್ರಾಹಕ ಅಥವಾ ಸಂಪಾದಕನ ಹೆಸರಿನಲ್ಲಿ ಮುಖ್ಯ ನಮೂದನೆಯನ್ನು ಮಾಡಬೇಕು.

ರಂಗಣ್ಣ, ಎಸ್. ವಿ. (ಸಂ.)
ರನ್ನಕವಿ ಪ್ರಶಸ್ತಿ.

ಇನ್ನು, ಸಂಗ್ರಹಿತ ಪುಸ್ತಕಗಳಲ್ಲಿ ಸಂಪಾದಕನ ಹೆಸರು, ಪ್ರಮುಖವಾಗಿ ಎನ್ನಿರಿ—ಬಾರದೇ ಇದ್ದರೆ ಪುಸ್ತಕದ ಶೀರ್ಷಿಕೆಯಡಿಯಲ್ಲಿಯೇ ಮುಖ್ಯ ನಮೂದನ್ನು ಮಾಡಿ, ಅಮುಖ್ಯವಾಗಿ ಬಂದಿರುವ ಸಂಗ್ರಾಹಕನ ಹೆಸರಲ್ಲಿ ಒಂದು ಸಹಾಯಕ ನಮೂದನ್ನು ಮಾಡಬೇಕು.

(ಅ) ಮೂರು ಆಶುನಾಟಕಗಳು: ಮನೋಹರ ಗ್ರಂಥಮಾಲೆಯು ವತಿಯಿಂದ ಜಿ. ಬಿ. ಜೋಶಿ ಸಂಕಲಿಸಿದುದು.

(ಆ) ಜೋಶಿ, ಜಿ. ಬಿ. (ಸಂ.)
ಮೂರು ಆಶುನಾಟಕಗಳು

೪. **ನಿಘಂಟು, ವಿಶ್ವಕೋಶಗಳು:—** ಇವುಗಳಲ್ಲಿ ಸಂಪಾದಕರು ಎದ್ದುಕಾಣುವಂತಿದ್ದರೆ, ಅವರ ಹೆಸರಿನಡಿಯಲ್ಲಿಯೇ ನಮೂದಿಸಬೇಕು. ಇಲ್ಲವಾದರೆ ಆ ತಲೆಬರೆಹದಡಿಯಲ್ಲಿ ಮುಖ್ಯ ನಮೂದನ್ನು ಮಾಡಬೇಕು.

(ಅ) ಕಾರಂತ, ಕೋಟ ಶಿವರಾಮ.
ಬಾಲಪ್ರಪಂಚ— ಭಾಗ ೧.

(ಆ) ಕಿಟೆಲ್, ಎಫ್.
ಕನ್ನಡ-ಇಂಗ್ಲಿಷ ಡಿಕ್ಸನರಿ.

೫. **ಪತ್ರಿಕೆಗಳು:—** ವೃತ್ತಪತ್ರ ಅಥವಾ ಮಾಸಿಕಗಳನ್ನು ಅವುಗಳ ಹೆಸರಿನಡಿಯಲ್ಲಿಯೇ ಬರೆಯಬೇಕು. ಹೆಸರನ್ನದು ಮಧ್ಯೆ ಬದಲಿಸಿದರೆ ಈಚಿನ ಹೆಸರನ್ನು ಉಪಯೋಗಿಸಿ, ಹಳೆಯ ಹೆಸರಿಗೆ ಒಂದು ದರ್ಶಕ ನಮೂದನೆಯನ್ನು ಮಾಡಬೇಕು.

(ಅ) ಕತೆಗಾರ.
ಸಣ್ಣಕತೆಗಳ ಮಾಸಪತ್ರಿಕೆ, ಸಂಪುಟ ೧೫.

(ಅ) ಜಯ ಹಿಂದ್

ವಾರಪತ್ರಿಕೆ, ೧೯೪೭ರ ವರೆಗೆ ಹುಬಳಿ ಗಜೆಟ್ ಎಂಬ ಹೆಸರಲ್ಲಿ.

(ಇ) ಹುಬಳಿ ಗಜೆಟ್.

'ಜಯ ಹಿಂದ್' ನೋಡಿರಿ.

ಯಾವುದೊಂದು ಸಂಸ್ಥೆಯು ಪತ್ರಿಕೆಯನ್ನು ಪ್ರಕಟಿಸುತ್ತಿದ್ದರೆ ಆ ಸಂಸ್ಥೆಯ ಹೆಸರಲ್ಲಿ ಸಹಾಯಕ ನಮೂದನೆಯೊಂದನ್ನು ಮಾಡಬೇಕು.

(ಅ) ಕನ್ನಡ ಗುಡಿ

ತ್ರೈಮಾಸಿಕ, ಹೊರನಾಡ ಕನ್ನಡಿಗರ ಸಂಸ್ಥೆಯ ಮುಖಪತ್ರ.

(ಆ) ಹೊರನಾಡ ಕನ್ನಡಿಗರ ಸಂಸ್ಥೆ.

ಕನ್ನಡಗುಡಿ, ತ್ರೈಮಾಸಿಕ.

ಅದರಂತೆ ನಾಮದರ್ಶಕಗಳನ್ನೂ, ವಾರ್ಷಿಕಗಳನ್ನೂ, ವಿಷಯಸೂಚಿಗಳನ್ನೂ ಅವುಗಳ ತಲೆಬರೆಹದಡಿಯಲ್ಲಿಯೇ ನಮೂದಿಸಬೇಕು.

೬. **ಹಸ್ತಪ್ರತಿಗಳು:—** ಇವುಗಳು ಮುದ್ರಿತ ಪುಸ್ತಕಗಳಿದ್ದರೆ ಹೇಗೋ, ಹಾಗೆಯೇ ಪರಿಗಣಿಸಿ ನಮೂದನೆಗಳು ಸಿದ್ಧವಾಗಬೇಕಾಗುತ್ತದೆ. ಆದರೆ ಅದು ಹಸ್ತಪ್ರತಿ ಎಂಬ ಬಗ್ಗೆ ಟಿಪ್ಪಣಿಯಲ್ಲಿ ಕಾಣಿಸಿರಬೇಕು. ಯಾವುದೊಂದು ವಿಶಿಷ್ಟ ಹೆಸರಿನ ಸಂಗ್ರಹದಲ್ಲೊಂದಾಗಿದ್ದರೆ ಆ ಹೆಸರನ್ನೂ ಕೊಡಬೇಕು.

೭. **ಅನುವಾದಗಳು:—** (ಅ) ಅನುವಾದದ ಕೃತಿಯನ್ನು ಮೂಲ ಲೇಖಕನ ಹೆಸರಿನಡಿ ನಮೂದಿಸಿ ಅನುವಾದಕನಿಗಾಗಿ ಸಹಾಯಕ ಪತ್ರಕವನ್ನು ಸಿದ್ಧಗೊಳಿಸಬೇಕು.

ಇಬ್ಸೆನ್, ಹೆನ್ರಿಕ್.

ಆರ್ಯಕ; ಹೆನ್ರಿಕ್ ಇಬ್ಸೆನ್ನನ 'ವೈಕಿಂಗ್ಸ ಎಟ್ ಹೆಲ್ಗೆಲೆಂಡ್' ಎಂಬ ನಾಟಕದ ಅನುವಾದ; ಎಸ್. ಜಿ. ಶಾಸ್ತ್ರಿಗಳಿಂದ.

ಶಾಸ್ತ್ರಿ, ಎಸ್. ಜಿ. (ಅನು).
ಆರ್ಯಕ; ಹೆನ್ರಿಕ್ ಇಬ್ಸೆನ್ನನ 'ವೈಕಿಂಗ್ಸ್ ಎಟ್ ಹೆಲ್ಗೆಲೆಂಡ್' ನಾಟಕದ ಅನುವಾದ.

(ಆ) ಇನ್ನು, ಅನುವಾದಕ ಬೇರೆ ಬೇರೆ ಲೇಖಕರ ಕೃತಿಗಳನ್ನು ಒಟ್ಟುಗೂಡಿಸಿ ಅನುವಾದಿಸಿದ್ದಾಪರೆ ಅನುವಾದಕನ ಹೆಸರಲ್ಲಿಯೇ ಮುಖ್ಯ ನಮೂದನ್ನು ಮಾಡಬೇಕು.

ಕಾಮತ್, ಎನ್. ಜಿ. (ಅನು.)
ಆ ಸುಂದರಿಯ ಗಂಡ ಮತ್ತು ಇತರ ಮಲೆಯಾಳೀ ಕತೆಗಳು.

೮. **ಪರಿವರ್ತನಗಳು:—** ಯಾವುದೊಂದು ಕೃತಿಯನ್ನು ಬೇರೊಂದು ಸಾಹಿತ್ಯರೂಪಕ್ಕೆ ಪರಿವರ್ತಿಸಲಾದವುಗಳನ್ನು, ಪರಿವರ್ತನ ಕಾರನ ಹೆಸರಲ್ಲಿ ನಮೂದಿಸಬೇಕು; ಮತ್ತು ಮೂಲ ಲೇಖಕನ ಹೆಸರಿಗೆ ಒಂದು ಸಹಾಯಕ ನಮೂದನ್ನು ಮಾಡಬೇಕು.

(ಅ) ಶ್ರೀಕಂಠಯ್ಯ, ಬಿ. ಎಂ. (ಪರಿ.)
ಗದಾಯುದ್ಧ ನಾಟಕಂ: ರನ್ನಕವಿಯ ಗದಾಯುದ್ಧ ಕಾವ್ಯದ ನಾಟಕರೂಪ.

(ಆ) ರನ್ನ
ಗದಾಯುದ್ಧ ನಾಟಕಂ: ಪರಿವರ್ತನೆ 'ಶ್ರೀ' ಯುವರಿಂದ,

೯. **ಗುಪ್ತನಾಮವುಳ್ಳ ಕೃತಿಗಳು:—** ಕೆಲವೆಡೆ ಲೇಖಕರು ತಮ್ಮ ನಿಜವಾದ ಹೆಸರಲ್ಲಿ ಬರೆಯದೇ ಬೇರೊಂದು ಹೆಸರಲ್ಲಿ ಅಥವಾ ಕಾವ್ಯನಾಮದಲ್ಲಿ ಬರೆಯುತ್ತಾರೆ. ಉದಾ:— 'ಶ್ರೀನಿವಾಸ' — ಮಾಸ್ತಿ ವೆಂಕಟೇಶ ಅಯ್ಯಂಗಾರ್, 'ವಿನಾಮ' —ಮ. ವಿ. ನಾಯಕ. ಇಂಥ ಕೃತಿಗಳ ನಮೂದನ್ನು ಲೇಖಕರ ನಿಜವಾದ ಹೆಸರಿನಡಿಯಲ್ಲಿಯೇ ಮಾಡಬೇಕು. ಮತ್ತು ಈ ಮುಚ್ಚುಹೆಸರಿಗೆ ದರ್ಶಕ ನಮೂದನೆಯೊಂದು ಬೇಕಾಗುವುದು.

(ಅ) ಬೇಂದ್ರೆ, ದತ್ತಾತ್ರೇಯ ರಾಮಚಂದ್ರ,
ಮೂರ್ತಿ ಮತ್ತು ಕಾಮಕಸ್ತೂರಿ.

(ಆ) "ಅಂಬಿಕಾತನಯ ದತ್ತ"
'ಬೇಂದ್ರೆ, ದ ರಾ.' ಎಂದು ನೋಡಿರಿ.

ಇನ್ನು ಗುಪ್ತನಾಮವೇ ಹೆಚ್ಚು ಪ್ರಚಾರದಲ್ಲಿದ್ದು ಅದರಿಂದಲೇ ಓದುಗರು ಸಾಮಾನ್ಯವಾಗಿ ಲೇಖಕನನ್ನು ಗುರುತಿಸುವುದಿದ್ದರೆ, ಗುಪ್ತನಾಮದಡಿಯಲ್ಲಿಯೇ ಒಂದು ಸಹಾಯಕ ಪತ್ರವನ್ನು ಸಿದ್ಧಗೊಳಿಸಬೇಕು.

'ಮುದ್ದಣ'
ರಾಮಾಶ್ವಮೇಧಂ : ನಂದಳಿಕೆ ಲಕ್ಷ್ಮೀನಾರಣಪ್ಪನವರಿಂದ.

ಲೇಖಕನ ನಿಜವಾದ ಹೆಸರು ಒಟ್ಟೀ ತಿಳಿಯದೆ ಹೋದರೆ, ಗುಪ್ತನಾಮದಡಿಯಲ್ಲಿಯೇ ನಮೂದನೆ ಸಿದ್ಧಗೊಳ್ಳಬೇಕೆಂದು ಬೇರೆ ಹೇಳಬೇಕಿಲ್ಲ.

೧೦. **ಅನಾಮಧೇಯಗಳು:—** ಕೆಲವು ಕೃತಿಗಳ ಮೇಲೆ ಲೇಖಕರ ಹೆಸರೇ ಇರುವುದಿಲ್ಲ. ಇದ್ದರೂ 'ಓರ್ವ ಅನುಭವಿಕ'ರಿಂದ ಎಂಬ ರೀತಿಯಲ್ಲಿ ಇರುವುದುಂಟು. ಇವುಗಳನ್ನೂ ಅನಾಮಧೇಯಗಳೆಂದು ತಿಳಿಯಬಹುದು. ಇಂಥ ಕೃತಿಗಳ ನಿಜ ಲೇಖಕರನ್ನು ಗೊತ್ತುಹಚ್ಚಿ ಅವರ ಹೆಸರಲ್ಲಿಯೇ ಪತ್ರಕವನ್ನು ಸಿದ್ಧಗೊಳಿಸಬೇಕು. ಒಂದು ಪಕ್ಷಕ್ಕೆ ಅದು ತಿಳಿಯದೇ ಹೋದರೆ, ಪುಸ್ತಕದ ಶಿರೋನಾಮದ ಅಡಿಯಲ್ಲಿಯೇ ಪತ್ರಕವನ್ನು ಸಿದ್ಧಗೊಳಿಸಬೇಕು.

ಮೆಟ್ರಿಕ್ ಕನ್ನಡ ಕೈಪಿಡಿ; ಓರ್ವ ನುರಿತ ಶಿಕ್ಷಕರಿಂದ.

ಕೆಲವು ಕಡೆ ಲೇಖಕರ ಹೆಸರು 'ವಿ. ಸೀ.', 'ಎನೆಸ್ಜಿ' 'ಮೋಶಂಸು' ಎಂದು ಅಂಕಿತಗಳಲ್ಲಿ ಸಂಕ್ಷಿಪ್ತವಾಗಿ ಬಂದಿರುತ್ತದೆ. ಆಗ್ಗೂ ಸಹ ಪೂರ್ಣ ಹೆಸರಲ್ಲಿಯೇ ಮುಖ್ಯ ನಮೂದನೆ ಮಾಡಿ ಅಗತ್ಯವಿದ್ದರೆ ಮಾತ್ರ ಸಂಕ್ಷಿಪ್ತ ಹೆಸರಿಗೆ ದರ್ಶಕ ನಮೂದನ್ನು ಕೊಡಬೇಕು.

೧೧. **ಆರ್ಷೇಯ ಗ್ರಂಥಗಳು:—** ವೇದ ಮುಂತಾದ ಪ್ರಾಚೀನ ಕೃತಿಗಳಿಗೆ ಲೇಖಕರೆಂಬ ಅಭಿಧಾನವಿರುವುದಿಲ್ಲ. ಆದುದರಿಂದ ಕೃತಿಗಳ ಹೆಸರಿನಡಿಯಲ್ಲಿಯೇ ಅವನ್ನು ಕೊಡಬೇಕು.

ವೇದಗಳು, ಋಗ್ವೇದ

ಆರಣ್ಯಕಗಳು, ಐತರೇಯಾರಣ್ಯಕವು.

ಉಪನಿಷತ್ತುಗಳು, ಕಠೋಪನಿಷತ್ತು ಇ.

## ಲೇಖಕರ ಹೆಸರನ್ನು ಬರೆಯುವ ಬಗೆ

೧. **ಸಾಮಾನ್ಯ ನಿಯಮ:—** ಲೇಖಕರ ಹೆಸರನ್ನು ಮೇಲ್ಗಡೆ ಬರೆಯುವಾಗ ಸಾಮಾನ್ಯವಾಗಿ ಅವರ ಪೂರ್ಣ ಹೆಸರನ್ನು ಬರೆಯಬೇಕು. ಮತ್ತು ಅವರ ಮುಖ್ಯ ಹೆಸರನ್ನು ಮೊದಲು ಬರೆದು. ಆ ಮೇಲೆ ಅವರ ಸ್ವಂತ, –ಅಥವಾ ಸ್ವಲ್ಪ ಮುಖ್ಯ ಹೆಸರು, ನಂತರ ತಂದೆಯ ಹಾಗೂ ಅಮುಖ್ಯ ಹೆಸರುಗಳು ಬರಬೇಕು. ಲೇಖಕರ ಪೂರ್ಣ ಹೆಸರು ಗೊತ್ತಿರದಿದ್ದ ಪಕ್ಷದಲ್ಲಿ, ಪ್ರಾರಂಭದ ಅಕ್ಷರದ ಮುಂದುಗಡೆ ತುಸು ಜಾಗ ಬಿಡಬೇಕು.

(ಅ) ಮಾಳವಾಡ, ಸಂಗಪ್ಪ ಸಂಗನಬಸಪ್ಪ.
ಕರ್ನಾಟಕ ಸಾಹಿತ್ಯ ಸಂಸ್ಕೃತಿ ದರ್ಶನ.

(ಆ) ಜೋಶಿ, ಹ ಪೀ
ಭಾವಪ್ರಭಾತ

ಒಂದೇ ಹೆಸರಿನ ಇಬ್ಬರು ಲೇಖಕರಿದ್ದರೆ ಅವರು ಹುಟ್ಟಿದ ವರ್ಷ ದಿಂದಾಗಲೀ ಊರ ಹೆಸರನ್ನು ಕಾಣಿಸುವುದರಿಂದಾಗಲೀ ಪ್ರತ್ಯೇಕಿಸಬೇಕು.

೨. **ಹೆಸರಿನ ಬದಲಾವಣೆ:—** ಮೂಲ ಹೆಸರನ್ನು ಯಾವು ದೊಂದು ಕಾರಣದಿಂದ ಬದಲು ಮಾಡಿಕೊಂಡಿದ್ದರೆ, ಆ ಹೊಸ ಹೆಸರಿ ನಲ್ಲಿಯೇ ನಮೂದನ್ನು ಮಾಡಬೇಕು. ಒಂದು ವೇಳೆ ಮೊದಲಿನ ಹೆಸರೆ ಹೆಚ್ಚು ಪ್ರಸಿದ್ಧವಿದ್ದರೆ ಮೊದಲಿನದರಲ್ಲೇ ಬರೆಯಬೇಕು.

(ಅ) ಜಾಗೀರದಾರ, ರಂಗಾಚಾರ್ಯ ವಾಸುದೇವಾಚಾರ್ಯ.
ಶೋಕ ಚಕ್ರ.

(ಆ) ಆದ್ಯ, ರಂಗಾಚಾರ್ಯ,
'ಜಾಗೀರದಾರ, ರಂ, ವಾ' ನೋಡಿರಿ.

ಅದರಂತೆ, ಮದುವೆಯಾದ ಸ್ತ್ರೀಯರ ಹೆಸರೂ ಬದಲಾಗುವುದಷ್ಟೆ. ಮದುವೆಗಿಂತ ಮುಂಚೆಯೂ ಲೇಖಿಕೆಯೆಂದು ಪ್ರಕಟವಾಗಿದ್ದರೆ, ಆಗ ಹೊಸ ಹೆಸರಿನಲ್ಲಿಯೇ ನಮೂದನ್ನು ಸಿದ್ಧಗೊಳಿಸಿ, ಹಳೆಯ ಹೆಸರಿಗಾಗಿ ಒಂದು ಸಹಾಯಕ ನಮೂದನ್ನು ಮಾಡಬೇಕು.

## ಯಾವುದು ಮುಖ್ಯ ಹೆಸರು ?

ನಮ್ಮಲ್ಲಿ ಹೆಸರುಗಳನ್ನು ಬರೆದುಕೊಳ್ಳುವ ಕ್ರಮ ವಿವಿಧವಾಗಿರುವುದರಿಂದ ಈ ವಿಚಾರದಲ್ಲಿ ಕೆಲವು ಸಮಸ್ಯೆಗಳು ತಲೆದೋರುವವು. ಉದಾ:—

ಚಿತ್ತರಂಜನ ದಾಸ್ — ಮುದವೀಡು ಕೃಷ್ಣರಾಯ

ಸರ್ವಪಲ್ಲಿ ರಾಧಾಕೃಷ್ಣನ್ — ಅ. ನ. ಕೃಷ್ಣರಾಯ

ಲಾಲಚಂದ ಹೀರಾಚಂದ — ಬುಳ್ಳಾರು ಸುಬ್ರಾಯ ಅಡಿಗ

ಎಸ್ ಎಲ್. ನಾರಾಯಣಭಟ್ಟ ಅಥವಾ ಎಸ್. ಎಲ್. ಎನ್. ಭಟ್ಟ.

ಗೊರೂರು ರಾಮಸ್ವಾಮಿ ಅಯ್ಯಂಗಾರ್.

ಮೇಲಣವುಗಳಲ್ಲಿ ಯಾವ ಬಗೆಯ ಹೆಸರು ಮೊದಲಿಗೆ ಬರಬೇಕು? ಪಾಶ್ಚಾತ್ಯರಲ್ಲಿ ಸಾಮಾನ್ಯವಾಗಿ ಹೆಸರಿನಲ್ಲಿ ಮನೆತನದ ಹೆಸರೇ ಮುಖ್ಯವಾದುದಿರುತ್ತಿದ್ದರೂ, ಭಾರತದಲ್ಲಿ ಮೂಲವಾಗಿ ಹಾಗಿಲ್ಲ. ಸರ್ವಪಲ್ಲಿ ರಾಧಾಕೃಷ್ಣನ್ ಎಂಬಲ್ಲಿ ರಾಧಾಕೃಷ್ಣನ್ ಎಂಬ ನಿಜ ನಾಮ ಮುಖ್ಯ. ಸರ್ವಪಲ್ಲಿ ಎಂಬ ಊರ ಹೆಸರಲ್ಲ. ಈ ಮುಖ್ಯ ಹೆಸರು ಇಲ್ಲಿ ನಿಜನಾಮವೇ ಆಗಿದ್ದರೆ ಕೆಲವೆಡೆ ಅದು ತಂದೆಯ ಹೆಸರಾಗಿರುತ್ತದೆ—ಗುಜರಾತಿಗಳ ಹಾಗೆ. ಇನ್ನೂ ಕೆಲವೆಡೆ ಉದ್ಯೋಗದ ಹೆಸರಾಗಿರುತ್ತದೆ; ಮತ್ತೆ ಕೆಲವೆಡೆ ರಾವ್, ಮೂರ್ತಿ, ದಾಸ್, ಭಟ್ಟ ಎಂದೂ ಉಳಿಯುವುದು. ಇವುಗಳಲ್ಲಿ ಕೊನೆಯದು ಈಚಿನದು. ಇಂಥ ಸಂದರ್ಭಗಳಲ್ಲಿ ಮುಖ್ಯ ಹೆಸರು ಯಾವುದಿದೆಯೋ ಅದಕ್ಕೆ ಅಂಟಿಕೊಂಡು, ಬೇರೊಂದು ರೀತಿಯಲ್ಲಿ ಓದುಗ ನೋಡಬಹುದು ಎಂದೆನಿಸಿದರೆ ಅದರಡಿಯಲ್ಲಿ ದರ್ಶಕ ನಮೂದನೆಯನ್ನು ಕೊಡಬೇಕು.

(ಅ) ದಾಸ್, ಚಿತ್ತರಂಜನ (ಮುಖ್ಯ) ದಾಸ್, ಸಿ, ಆರ್.
(ದರ್ಶಕ)

(ಆ) ರಾಧಾಕೃಷ್ಣನ್, ಸರ್ವಪಲ್ಲಿ ,,

(ಇ) ಲಾಲಚಂದ, ಹೀರಾಚಂದ ,,

(ಈ) ನಾರಾಯಣಭಟ್ಟ, ಎಸ್. ಎಲ್. ,, ಭಟ್ಟ, ಎಸ್. ಎಲ್. ಎನ್.
(ದರ್ಶಕ)

(ಉ) ಗೊರೂರು, ರಾಮಸ್ವಾಮಿ ಅಯ್ಯಂಗಾರ (ಮುಖ್ಯ)
ರಾಮಸ್ವಾಮಿ ಅಯ್ಯಂಗಾರ್ ಗೊರೂರು ( ದರ್ಶಕ ).

ಇನ್ನು ಸಂಸ್ಥೆ ಅಥವಾ ಸರಕಾರೀ ಖಾತೆಯು ಪುಸ್ತಕದ ಹುಟ್ಟಿಗೆ ಕಾರಣವಾಗಿದ್ದರೆ, ಅದರ ಹೆಸರಿನಡಿ ಮುಖ್ಯ ನಮೂದನ್ನು ಮಾಡಬೇಕೆಂದು ಹೇಳಿದೆ. ಸರಕಾರೀ ಖಾತೆಯಿದ್ದರೆ ಮೊದಲು ಆ ಸರಕಾರದ ಸೀಮೆ ಬಂದು, ಆನಂತರ ಆ ಖಾತೆಯನ್ನು ಅದರ ಮುಂದೆ ಕಾಣಿಸಬೇಕು.

ಮುಂಬಯಿ ಸರಕಾರ, ಪ್ರಸಿದ್ಧಿ ಶಾಖೆ.
ಪಂಚವಾರ್ಷಿಕ ಯೋಜನೆ

ಕೊನೆಯದಾಗಿ, ವಿಷಯಪತ್ರಕಗಳಲ್ಲಿ ವಿಷಯವನ್ನು ನಿರ್ದಿಷ್ಟವಾಗಿ ಬರೆಯುವುದಕ್ಕೆ ಕೂಡ ಕೆಲ ನಿಯಮಗಳನ್ನು ಹಾಕಿಕೊಂಡಿರುವುದು ಆಗತ್ಯವಾಗಿದೆ. ವಿಷಯಗಳ ಇಂಗ್ಲಿಷ ಪದಗಳ ಅಂಥ ಒಂದು ಪಟ್ಟಿ ಇದೆ. ನಮ್ಮ ಗ್ರಂಥಾಲಯಗಳಲ್ಲಿ ಸೂಚೀಕರಣದ ಕೆಲಸ ಶಾಸ್ತ್ರೀಯವಾಗಿ ಬೆಳೆದಾಗ, ಕರ್ನಾಟಕ ಗ್ರಂಥಾಲಯವೋ, ಇತರ ಬೇರೆ ಸಂಸ್ಥೆಯೋ ಈ ಕೆಲಸವನ್ನು ಕೈಕೊಳ್ಳುವ ಆವಶ್ಯಕತೆ ಬರುವುದೆನ್ನೋಣ.



# ೬. ಸಂದರ್ಭ ಸೇವೆ



## ೧. ಸ್ವರೂಪ ವಿವರಣೆ

ಗ್ರಂಥಾಲಯದ ಕಾರ್ಯವನ್ನು ಸಾಮಾನ್ಯವಾಗಿ ನಾಲ್ಕು ವಿಭಾಗವಾಗಿ ಮಾಡಬಹುದು. ಒಂದು, ಪುಸ್ತಕಸಂಗ್ರಹ; ಎರಡು, ಅದರ ಸಿದ್ಧತೆ; ಮೂರು, ವಿತರಣ; ನಾಲ್ಕನೆಯದು ಈ ಸಂದರ್ಭಸೇವೆ. ಸಂದರ್ಭಸೇವೆಯು ಸ್ಥೂಲ ಅರ್ಥವಿಷ್ಟೇ, ಗ್ರಂಥಾಲಯಕ್ಕೆ ಬಂದವರಿಗೆ ಅವರ ಸಾಮಯಿಕ ಕೇಳಿಕೆಗೆ ಉತ್ತರವನ್ನು ಒದಗಿಸಿ ಕೊಡುವುದು. ನಮ್ಮಲ್ಲಿ ಸದ್ಯ ಈ ಕೆಲಸವನ್ನು ಪುಸ್ತಕಾಲಯದಲ್ಲಿ ಇರುವ ಒಬ್ಬನೇ ಒಬ್ಬ ವ್ಯಕ್ತಿ 'ಭಂಡಾರಿಗ'ನೇ ಮಾಡುತ್ತಾನೆ. ದೊಡ್ಡ ದೊಡ್ಡ ಭಂಡಾರಗಳಲ್ಲಿ ಈ ವಿಭಾಗಕ್ಕೆ ಪ್ರತ್ಯೇಕ ಜನ ಇರುತ್ತಾರೆ. ಆ ಕಾರ್ಯಕ್ಕೆ ಬೇಕಾಗುವ ಕೆಲವು ಪುಸ್ತಕಗಳನ್ನು ಪ್ರತ್ಯೇಕವಾಗಿಯೇ ಇಟ್ಟಿರುತ್ತಾರೆ.

### ಸಂದರ್ಭಸೇವೆಯ ಅಗತ್ಯ

ಪುಸ್ತಕಭಂಡಾರದ ಯಾವುದೇ ಕೆಲಸವನ್ನು ಯಂತ್ರ ಅಥವಾ ಒಂದು ಕ್ರಮದಿಂದ ರೂಢಿಸಬಹುದು; ಆದರೆ ಸಂದರ್ಭಸೇವೆಯನ್ನಲ್ಲ. ಬಸ್ಸುಗಳಲ್ಲಿ ಟಿಕೇಟು ಕೊಡುವುದಕ್ಕೆ ಸಹಿತ ಅಮೇರಿಕೆಯಲ್ಲಿ ಕಂಡಕ್ಟರನೆಂಬ ವ್ಯಕ್ತಿ ಇರುವುದಿಲ್ಲವಂತೆ. ಅದೇಕೆ, ಪುಸ್ತಕಭಂಡಾರದಲ್ಲಿ ಪುಸ್ತಕ ವಿತರಣವನ್ನು ಸಹಿತ ಮನುಷ್ಯಸಹಾಯವಿಲ್ಲದೇ ಬಹುಮಟ್ಟಿಗೆ ನಡೆಸಬಹುದು; ಇದೊಂದರಲ್ಲಿ ಮಾತ್ರ ಸಾಧ್ಯವಿಲ್ಲ. ವ್ಯಕ್ತಿಗತ ಸಹಾಯ ಓದುಗರಿಗೆ ಎಷ್ಟೊಂದು ಹಿತ ಮಿತವಾಗಿರುತ್ತದೆಂಬುದನ್ನು, ಪುಸ್ತಕಾಲಯದ ಮೂರನೆಯ ಸೂತ್ರವನ್ನು ಗಮನಿಸುವಾಗ ಹೇಳಿದೆ. ಓದುಗನು ಎಲ್ಲವನ್ನು ಬಲ್ಲ ಸರ್ವಜ್ಞನಿದ್ದರೂ, ಸಂದರ್ಭ ಸಹಾಯಕನಿಗಿಂತ ಸಾವಿರ ಪಾಲು ವಿಷಯ ತಿಳಿದವನಿದ್ದರೂ, ತತ್ಕಾಲಕ್ಕೆ ಏನೋ ಒಂದು ಮಾಹಿತಿ ಬೇಕಾಗಿರುತ್ತದೆ. ಒಂದು

ವಿಷಯದ ಮೇಲೆ ಎಲ್ಲ ಆಧಾರಗಳು ಬೇಕಾಗುತ್ತವೆ. ಅಥವಾ ಅದು ಬಲು ಬೇಗ ಗೊತ್ತಾಗುವುದು ಅವನಿಗೆ ಅಗತ್ಯವಾಗಿರುತ್ತದೆ. ಆಗೊಬ್ಬ ಸಹಾಯಕನಿದ್ದರೆ ಎಷ್ಟು ಚೆನ್ನ ಎಂದು ಅವನಿಗೆ ಅನಿಸದಿರದು.

## ವಿವರಣೆ

ಹೀಗೆ ವಿಷಯಜ್ಞಾನ ಮಾಡಿಕೊಳ್ಳುವುದು ಓದುಗನ ಕಾರ್ಯ. ಅದಕ್ಕೆ ನೆರವಾಗುವುದು ಸಂದರ್ಭ ಸಹಾಯಕನ ಕಾರ್ಯ. ಸಂದಳಿಕೆ ಲಕ್ಷ್ಮೀನಾರಣಪ್ಪನೇ ಮುದ್ದಣ ಹೌದೇ ಎಂದು ತಿಳಿಯಬಂದ ಓದುಗನಿಗೆ ಅದನ್ನು ವಿವರಿಸುವ ಕೆಲಸ ಸಂದರ್ಭ ಸಹಾಯಕನದಲ್ಲ. ಅದಕ್ಕೆ ಸಂಬಂಧಪಟ್ಟ ಲೇಖನ, ಪುಸ್ತಕಗಳನ್ನು ಒದಗಿಸಿ ಕೊಡುವುದು ಅವನ ಪಾಲಿನ ಕಾರ್ಯಭಾಗ. ಹೀಗೆ ಆತ ಓದುಗರ ಗುರುವಾಗಬೇಕಾದ್ದಿಲ್ಲ. ಹಾಗೆಂದು ಸೇವಕನೂ ಅಲ್ಲ. 'ಅಲ್ಲಿದೆ, ಇಲ್ಲಿದೆ' ಎಂದು ಕೈಬೆರಳಿನ ಗುರುತಿನಿಂದ ತೋರಿಸುವ ದರ್ಶಕ ಫಲಕದಂತೆ ಅವನ ಕಾರ್ಯವಲ್ಲ. ಓದುಗರ ಜೊತೆಯಲ್ಲೇ ನಡೆದು, ತಾನಿತ್ತ ನೆರವು ಬರೀ ಯಾಂತ್ರಿಕವಾಗದಂತೆ ಅಥವಾ ಅತಿಯಾದ ಪ್ರದರ್ಶನವಾಗದಂತೆ, ಅವರ ಕೇಳಿಕೆಗೆ ನೆರವಾಗುವುದು ಅವನ ಹೊಣೆ. ಹೀಗೆ ತೋರಿಕೆಗೆ ತಾತ್ಕಾಲಿಕ ಸಮಸ್ಯೆಯನ್ನು ಪರಿಹರಿಸುವ ಕಾರ್ಯವೆಂದು ಕಂಡುಬಂದರೂ ಪರಿಣಾಮದಲ್ಲಿ ಸಂದರ್ಭ ಸೇವೆಯು ಓದುಗ ಮತ್ತು ಪುಸ್ತಕ ಭಂಡಾರದಲ್ಲಿಯ ಓದಿನ ಸಾಧನಗಳ ನಡುವೆ ಸಂಬಂಧವನ್ನು ಬೆಸೆಯುವುದಾಗಿದೆ. ಪುಸ್ತಕಗಳ ಪ್ರಯೋಜನವನ್ನು ಓದುಗನಿಗೆ ಸೂಚ್ಯವಾಗಿ ಸಮಯಾನುಸ್ಸಾರ ತಿಳಿಸಿಕೊಡುವುದೇ ಸಂದರ್ಭಸೇವೆ.

## ಸಂದರ್ಭಸೇವೆಯ ಸ್ವರೂಪ

ಈ ಸಹಾಯವನ್ನು ಓದುಗರಿಗೆ ಎಷ್ಟರಮಟ್ಟಿಗೆ ಒದಗಿಸಿಕೊಡಬೇಕು? ಮೇಲಿನ ಉದಾಹರಣೆಯನ್ನೇ ತೆಗೆದುಕೊಳ್ಳುವ. ಮುದ್ದಣನ ನಿಜನಾಮ ತಿಳಿಯಲು ಓದುಗನೊಬ್ಬ ಬಂದಿದ್ದಾನೆ. ಆಗ ಮುಳಿಯ ತಿಮ್ಮಪ್ಪಯ್ಯನವರ, ಇತರರ ಬಿಡಿ ಲೇಖನಗಳು, ಮುದ್ದಣನ ಮೇಲಿರುವ ಎರಡು ಪುಸ್ತಕಗಳ ಹೆಸರುಗಳನ್ನು ಓದುಗನಿಗೊಪ್ಪಿಸಿ ಬಿಟ್ಟರೆ ಸಾಕೆ? ಕೆಲಮಟ್ಟಿಗೆ ಅದು ಸಾಕೆಂದು ತೋರುತ್ತದೆ. ಏಕೆಂದರೆ ಓದುಗರ ಕೆಲಸವನ್ನು ನಾವೇ ಮಾಡಬೇಕಾದದ್ದಿಲ್ಲ. ಆತ ನೋಡಿಕೊಳ್ಳಲಾರನೆ? ಅಥವಾ ಒಂದು ಹೆಜ್ಜೆ

ಮುಂದೆ ಹೋಗಿ ತೋರಿಸಿದ ಸಾಧನಗಳನ್ನು ನಾವೇ ಅವನಿಗೆ ತಂದುಕೊಟ್ಟರೆ ಹೇಗೆ ? ಆದೀತು. ಅಷ್ಟರಮಟ್ಟಿಗೆ ಸೂಚಿಯನ್ನು ಕೆದಕುವ ಅವರ ವೇಳೆ ಉಳಿಯಿತೆನ್ನುವ. ಇದೇ ಜಾಡಿನಲ್ಲಿ ಮುಂದರಿದು ಹೋಗಿ, ಕೊಟ್ಟಿರುವ ಸಾಧನಗಳಲ್ಲೇ ಓದುಗರಿಗೆ ಆ ನಿರ್ದಿಷ್ಟ ಭಾಗವನ್ನು ಮಾತ್ರ ತೋರಿಸಿದರೆ ಯಾಕಾಗದು ? ಅದರಿಂದ ಅವರ ವೇಳೆ ಉಳಿಯುವುದಲ್ಲ ? ವೇಳೆ, ಶ್ರಮ ಉಳಿಸುವುದೇ ಎಂದು ಇಟ್ಟುಕೊಂಡ ಮೇಲೆ ಓದುಗರ ಕೇಳಿಕೆಗೆ ಪೂರ್ಣ ಸಮಾಧಾನವಾಗುವವರೆಗೂ ಅವರ ಜೊತೆಗಿದ್ದು ಅದನ್ನು ಪೂರೈಸಿ ಕೊಡ ಬಹುದಲ್ಲವೇನು ?

ಇಲ್ಲಿ ಕಟ್ಟುನಿಟ್ಟನ್ನು ಹಾಕುವುದು ಸಾಧ್ಯವಿಲ್ಲವೆಂದು ಸ್ಪಷ್ಟವೇ ಇದೆ. ಅದು ಬಂದ ಓದುಗನನ್ನು ಅವಲಂಬಿಸಿದೆ. ಅವನ ಸಮಸ್ಯೆಯ ಬಗೆಯನ್ನು ಅವಲಂಬಿಸಿದೆ. ಅದಕ್ಕೇ ಸಂದರ್ಭಸೇವೆಯನ್ನು ಒಂದು ಕ್ರಮದಲ್ಲಿ ರೂಢಿಸಲು ಸಾಧ್ಯವಿಲ್ಲ, ಎಂದು ಹೇಳಿದುದು.

## ತಾತ್ಕಾಲಿಕ ಹಾಗೂ ದೀರ್ಘಕಾಲೀನ ಸಂದರ್ಭಸೇವೆ

ಸಂದರ್ಭಸೇವೆಯಲ್ಲಿ ಎರಡು ಮುಖ್ಯ ಪ್ರಕಾರಗಳನ್ನು ಡಾ. ರಂಗನಾಥನ್ನರವರು ಮಾಡಿದ್ದಾರೆ. ಒಂದು ತಾತ್ಕಾಲಿಕ ಸಂದರ್ಭಸೇವೆ, ಇನ್ನೊಂದು ದೀರ್ಘಕಾಲೀನ ಸಂದರ್ಭಸೇವೆ. ತಾತ್ಕಾಲಿಕ ಸಂದರ್ಭಸೇವೆಯು ಹೆಚ್ಚಾಗಿ ಒಂದು ಪುಸ್ತಕದ ಹೆಸರು, ಅಂಕಿಸಂಖ್ಯೆಗಳು, ವರ್ಷ ಇಂತಹ ಸಣ್ಣಪುಟ್ಟ ವಿಷಯಗಳಲ್ಲಿ ಮುಗಿಯುತ್ತದೆ. ಇಂಥ ಕೇಳಿಕೆಗಳಿಗೆ ತಕ್ಕುದಾದ ವಿಶ್ವಕೋಶ, ನಿಘಂಟು, ಡಿರೆಕ್ಟರಿಗಳು ಇದ್ದುಬಿಟ್ಟರೆ ಉತ್ತರ ಕೊಡುವುದಕ್ಕೆ ಚಿಟಿಕೆ ಹೊಡೆಯುವಷ್ಟು ಕಾಲ ಸಾಕಾಗಬಹುದು. ಅದು ಎಷ್ಟೇ ತೊಡಕಿನ ದಾಗಿರಲಿ, ಸಂದರ್ಭ ಸಾಧನ ಸಾಕಷ್ಟು ಇದ್ದರೆ, ಮತ್ತು ಅವುಗಳ ಆಳ ಪರಿಚಯ ಸಹಾಯಕನಿಗೆ ಇದ್ದುದಾದರೆ ತಡ ಹತ್ತುವುದಿಲ್ಲ. ದೀರ್ಘಕಾಲೀನ ಸಂದರ್ಭಸೇವೆಯಲ್ಲಿ ಒಂದು ನಿರ್ದಿಷ್ಟ ಕೇಳಿಕೆ ಸಾಮಾನ್ಯವಾಗಿ ಇರುವುದಿಲ್ಲ. ಒಂದು ವೇಳೆ ಹಾಗಿದ್ದರೂ, ತಮ್ಮ ಪುಸ್ತಕಭಂಡಾರದಲ್ಲೇ ಅದಕ್ಕೆ ಪರಿಹಾರ ದೊರೆಯದೆ, ಅದಕ್ಕೆ ಬೇರೆ ಪುಸ್ತಕಭಂಡಾರಗಳಿಗೆ ಹೋಗಬೇಕಾಗಿ ಬರ ಬಹುದು. ಅಲ್ಲಿಯೂ ದೊರೆಯದೇನೆ, ಗೊತ್ತಿದ್ದ ಬೇರೆಯವರಿಗೆ ಮುಖತಃ ಕೇಳಿ ಉತ್ತರ ದೊರಕಿಸುವ ಸಂದರ್ಭವೂ ಬರಬಹುದು. ಹುಬ್ಬಳ್ಳಿಯ

ಸಿದ್ಧಾರೂಢಸ್ವಾಮಿಯ ಮಠದ ಪೂರ್ವೇತಿಹಾಸ ಬೇಕಿದ್ದರೆ, ಅಲ್ಲಿಗೆ ಹೋಗಿ ಅಥವಾ ಅಲ್ಲಿದ್ದವರಿಗೆ ಬರೆದು ತರಿಸಿಕೊಳ್ಳಬಹುದಲ್ಲದೇ ಯಾವ ಪುಸ್ತಕವೂ ಸಹಾಯಕ್ಕೆ ಇಲ್ಲವಷ್ಟೆ.

ಇದು ಅಲ್ಲದೆ, ವಿಶ್ವವಿದ್ಯಾಲಯ ಮತ್ತು ಸಂಶೋಧನ ಮಂಡಳದಂತಹ ಉಚ್ಚವರ್ಗದ ಗ್ರಂಥಾಲಯಗಳಲ್ಲಿ ತಾತ್ಕಾಲಿಕ ಸಂದರ್ಭಸೇವೆ ಸಾಲದು. ಅಭ್ಯಾಸಿಗಳಿಗೆ ವಿಷಯದ ಸಂಪೂರ್ಣ ಪರಿಚಯ ಆಗುವುದಕ್ಕೆ ಗ್ರಂಥಸೂಚಿಗಳನ್ನು ತಯಾರುಮಾಡಿಕೊಡುವ ಹೊಣೆಯೂ ಸಂದರ್ಭ ಸಹಾಯಕನ ಮೇಲಿರುತ್ತದೆ ಇನ್ನೂ ಅನೇಕ ರೀತಿಯಲ್ಲಿ ಅವರಿಗೆ ನೆರವು ಬೇಕಾಗುತ್ತದೆ. ಎಂದಾಗ ಸಂದರ್ಭ ಸಹಾಯಕನ ತಿಳಿವು, ಯೋಗ್ಯತೆ, ಚಾಕಚಕ್ಯತೆ ಎಷ್ಟರ ಮಟ್ಟಿಗೆ ಇದ್ದೀತೋ ಅಷ್ಟು ಜ್ಞಾನಪ್ರಸಾರ ಸಾಧ್ಯವಾಗುವುದು. ಆಗ ಗ್ರಂಥಾಲಯ ಸೇವೆಯ ಸಾರ್ಥಕತೆಯನ್ನು ಕಾಣಬಹುದು.

## ೨. ಸಂದರ್ಭ ಸಾಹಿತ್ಯ

ಇತರ ಪುಸ್ತಕಗಳಿಗೂ, ಸಂದರ್ಭ ಪುಸ್ತಕಗಳಿಗೂ ಒಂದು ಸ್ಪಷ್ಟವಾದ ಅಂತರವಿದೆ. ಎಂದರೆ ಇತರ ಪುಸ್ತಕಗಳನ್ನು ಮೊದಲಿಂದ ಕೊನೆಯವರೆಗೆ ಓದುತ್ತೇವೆ. ಅವು ಓದುವುದಕ್ಕೆ. ಸಂದರ್ಭ ಪುಸ್ತಕವಿದ್ದರೆ ಒಂದು ನಿರ್ದಿಷ್ಟ ಮಾಹಿತಿ ಅಥವಾ ವಿಷಯಕ್ಕಾಗಿ ಅಷ್ಟರ ಮಟ್ಟಿಗೆ ನೋಡುತ್ತೇವೆ. ಹೀಗೆ ಇವು ಸಾಂದರ್ಭಿಕ ಉಪಯೋಗಕ್ಕಾಗಿ ಇವೆ. ನಿಘಂಟುವನ್ನು ಯಾರೂ ಮೊದಲಿಂದ ಕೊನೆವರೆಗೆ ಓದುವುದಿಲ್ಲ ತಾನೆ. ಆದರೆ ಈ ಅಂತರವನ್ನು ಬಹಳಷ್ಟು ಎಳೆಯಕೂಡದು. ಕವಿರಾಜಮಾರ್ಗವನ್ನು ನಾವು ಒಂದು ಪದ್ಯಕ್ಕಾಗಿ ಮಾತ್ರ ನೋಡಬಹುದು ಆ ಮಟ್ಟಿಗೆ ಅದೂ ಸಂದರ್ಭಗ್ರಂಥವೇ. ಬಾಲಪ್ರಪಂಚದಂತಹ ಸಂದರ್ಭಗ್ರಂಥವನ್ನು ಇಡಿಯಾಗಿಯೂ ಓದಬಹುದಲ್ಲ. ಹೀಗೆ ಓದುಗರು ಉಪಯೋಗ ಮಾಡಿಕೊಳ್ಳುವ ಬಗೆಯನ್ನು ಅನುಸರಿಸಿ, ಅದಕ್ಕೆ ಸಂದರ್ಭಸಾಹಿತ್ಯವೆಂದು ಕರೆಯಬಹುದು; ಮತ್ತು ತಾತ್ಕಾಲಿಕವಾಗಿ ಉಪಯೋಗಿಸಲ್ಪಡುವುದರಿಂದ. ಸಾಮಾನ್ಯವಾಗಿ ಗ್ರಂಥಾಲಯದಿಂದ ಹೊರಗಡೆ ಅವನ್ನು ಕೊಡುವ ಆಗತ್ಯವಿಲ್ಲ. ಗ್ರಂಥಾಲಯದಲ್ಲೇ

ಅವುಗಳ ಉಪಯೋಗ. ಇದರ ಮೋಜು ಏನೆಂದರೆ, ಇಂದು ನಮ್ಮಲ್ಲಿ, ಯಾವ ಪುಸ್ತಕಗಳನ್ನು ಗ್ರಂಥಾಲಯದಿಂದ ಹೊರಗೆ ಕೊಡಬಾರದೋ ಅವುಗಳಿಗೆ ಮಾತ್ರ ಸಂದರ್ಭಗ್ರಂಥಗಳೆಂದು ಕರೆದು, ನಾಮಾವಲಿಯಲ್ಲಿ ನಿರ್ದೇಶಿಸಿರುವುದು ಕಂಡುಬರುತ್ತದೆ! ಹೆಚ್ಚು ಬೆಲೆಯುಳ್ಳ ಪುಸ್ತಕಗಳು, ವಿರಲ ಕೃತಿಗಳು ಇವು ಸಹಿತ—ಅಥವಾ ಇವೇ (!) ನಮ್ಮಲ್ಲಿ ಸಂದರ್ಭ ಗ್ರಂಥಗಳೆನ್ನಿಸಿಕೊಳ್ಳುವಂತಾಗಿದೆ.

ತಾತ್ಕಾಲಿಕ ಸಂದರ್ಭಸೇವೆಗೆ ಸಿದ್ಧವಾಗಿರುವ ಸಂದರ್ಭ ಸಾಹಿತ್ಯವಿದೆ; ಅದಿದ್ದರೆಯೇ ಕೆಲಸ ಹಗುರು ಎಂದು ಮೇಲೆ ಹೇಳಿದೆ. ಅವು ಅನೇಕ ಬಗೆಯಾಗಿವೆ. ವಿಶ್ವಕೋಶಗಳು, ನಿಘಂಟುಗಳು, ವಾರ್ಷಿಕಗಳು, ಕೈಪಿಡಿಗಳು, ನಕಾಶಗಳು, ಗೆಝೆಟಿಯರುಗಳು ಇತ್ಯಾದಿ. ಇವೆಲ್ಲ ಜ್ಞಾನಮಾರ್ಗಕ್ಕೆ ಒಳಹಾದಿಗಳಿದ್ದಂತೆ; ಮತ್ತು ಅವುಗಳನ್ನು ಎಷ್ಟು ಸುಲಭವಲ್ಲಿ ಉಪಯೋಗಿಸಿ ತಟ್ಟನೆ ನಮಗೆ ಬೇಕಾದುದನ್ನು ದೊರಕಿಸಿಕೊಳ್ಳುತ್ತೇವೆಯೋ, ಅಷ್ಟು ಅದನ್ನು ಸಿದ್ಧಗೊಳಿಸುವಾಗ ಆಗುವ ಶ್ರಮ, ವೇಳೆ ಇವುಗಳು ಉಪಯೋಗಿಸುವವರ ಲಕ್ಷ್ಯಕ್ಕೆ ಬರುವಂತಹವಲ್ಲ.

## ಸಂದರ್ಭ ಸಾಹಿತ್ಯದ ಪ್ರಕಾರಗಳು

ಪುಸ್ತಕಗಳು, ಪತ್ರಿಕೆಗಳು, ಪುಸ್ತಿಕೆಗಳು, ನಕಾಶಗಳು, ದಾಖಲೆಗಳು, ಚಿತ್ರಗಳು, ಇವು ಸಂದರ್ಭಸಾಹಿತ್ಯದ ಬಾಹ್ಯ ಸ್ವರೂಪವನ್ನನುಲಕ್ಷಿಸಿ ಪ್ರಕಾರಗಳೆಂದು ಹೆಸರಿಸಬೇಕಾದುವು. ಇದಲ್ಲದೆ, ಒಳಗಣ ವಿಷಯದ ದೃಷ್ಟಿಯಿಂದ ಈ ರೀತಿಯಾಗಿ ಸಂದರ್ಭ ಸಾಧನಗಳಿವೆಯೆಂದು ಹೇಳಬಹುದು:—

೧. ನಿಘಂಟುಗಳು.
೨. ವಿಶ್ವಕೋಶಗಳು.
೩. ಡಿರೆಕ್ಟರಿಗಳು ಅಥವಾ ನಾಮದರ್ಶಕಗಳು.
೪. ಆವಳಿಗಳು— ಪತ್ರಿಕೆಗಳು, ವಾರ್ಷಿಕಗಳು, ವರದಿಗಳು.
೫. ವಿಷಯಸೂಚಿಗಳು.
೬. ನಕಾಶಗಳು, ಚಿತ್ರಗಳು.
೭. ಇತರ ಸಾಧನಗಳು.

## ಯೋಗ್ಯತಾ ನಿರ್ಣಯ

ಸಂದರ್ಭ ಸಾಹಿತ್ಯ ನಿರ್ದಿಷ್ಟ ಮಾಹಿತಿಗಾಗಿ ಇರುವುದರಿಂದ, ಪ್ರತಿಯೊಂದು ಸಂದರ್ಭಗ್ರಂಥದ ಸ್ವರೂಪ ಹಾಗೂ ಅದರ ಪ್ರಾಮಾಣ್ಯವನ್ನು ಮೊದಲೇ ನೋಡಿಕೊಂಡಿರಬೇಕು. ಸಂದರ್ಭಗ್ರಂಥಗಳು ಅನೇಕ ವಿಷಯಗಳನ್ನು ಒಳಗೊಂಡವಾಗಿರುವುದರಿಂದ, ಕೊಟ್ಟಿರುವ ಮಾಹಿತಿಯು ಸತ್ಯತೆ ಸಂಶಯ ತರುವಂತಾಗಬಾರದು. ಇದರ ಜೊತೆಗೆ ಆ ವಿಷಯದ ಮೇಲೆ ಇತ್ತೀಚೆಗೆ ಹೊಸ ಬೆಳಕು ಬಿದ್ದಿದ್ದಾದರೆ, ಅದರ ವಿವರಣೆಯೂ ಅದರಲ್ಲಿರಬೇಕು. ಜೊತೆಗೆ ವಿಷಯವನ್ನರಸುವ ಕೆಲಸ ಶೀಘ್ರವಾಗಿಯೂ, ಸುಲಭದಲ್ಲಿಯೂ ಮುಗಿಯುವಂತೆ ಅದರ ಹೊಂದಾವಣೆ ಇರಬೇಕು. ಪ್ರತಿಯೊಂದು ಸಂದರ್ಭಪುಸ್ತಕಕ್ಕೆ ಪ್ರತ್ಯೇಕವಾಗಿಯೇ ಅದರ ಯೋಗ್ಯತಾ ನಿರ್ಣಯವಾಗಬೇಕಾದುದಾದರೆ ಸಾಮಾನ್ಯವಾಗಿ ಈ ಕೆಳಗಿನ ದೃಷ್ಟಿಕೋನಗಳಿಂದ ಸಂದರ್ಭ ಸಾಹಿತ್ಯವನ್ನು ತೂಗಿನೋಡಬೇಕಾಗುವುದು :—

೧. ಲೇಖಕ. ೨. ವಿಷಯ ವಿಸ್ತಾರ. ೩. ಪ್ರತಿಪಾದನೆ. ೪. ಹೊಂದಾವಣೆ. ೫. ಬಾಹ್ಯ ಆಕಾರ. ೬. ವಿಶಿಷ್ಟ ಲಕ್ಷಣಗಳು.

ಯಾವುದೇ ಸಂದರ್ಭ ಸಾಹಿತ್ಯವಿರಲಿ, ಅದನ್ನು ಬರೆದವರು ಆ ವಿಷಯದಲ್ಲಿ ತಜ್ಞರಾದವರಿರಬೇಕು. ವಿಶ್ವಕೋಶದಂತಹ ಕೃತಿಗಳಲ್ಲಿ ಹತ್ತಾರು ಜನ ಲೇಖಕರಿದ್ದಾಗ ಅದನ್ನು ಬರೆಯಿಸುವ ವರ್ಗ ಪ್ರಾಮಾಣ್ಯವೇ ಎಂಬುದನ್ನು ಕಂಡುಕೊಳ್ಳಬೇಕು. ಈ ಸಾಹಿತ್ಯ ಯಾವುದರ ಬಗ್ಗೆ ಇದೆ, ಎಷ್ಟರ ಮಟ್ಟಿಗೆ ಒಂದು ವಿಷಯವನ್ನು ಪ್ರತಿಪಾದಿಸ ಹೊರಟಿದ್ದಾಗಿದೆ ಎಂಬುದನ್ನು ನೋಡಬೇಕು. ಶೀರ್ಷಿಕೆಯ ಪುಟದಲ್ಲೇ ಇದನ್ನು ಕಾಣಿಸುವುದುಂಟು. ಆದರೆ ಶೀರ್ಷಿಕೆಯಲ್ಲಿ ಒಂದನ್ನು ಹೇಳಿಕೊಂಡು, ಒಳಗಡೆ ಹಾಗೆ ಇರದೆಯೂ ಹೋಗಬಹುದಾದುದರಿಂದ ಒಳಗಿನ ಕೆಲವು ಮಾದರಿಗಳನ್ನು ನೋಡಿರುವುದೊಳಿತು. ನಿರೂಪಣೆಯ ಬಗೆಯೂ, ವಿಷಯಗಳ ಹೊಂದಾವಣೆಯೂ, ಓದುಗರಿಗೆ ಈ ಮುನ್ನ ಹೇಳಿದಂತೆ ಸುಲಭದಲ್ಲಿ ಹಾಗೂ ಶೀಘ್ರದಲ್ಲಿ ವಿಷಯ ಸಾಧನೆಯಾಗುವುದಕ್ಕಿವೆ. ನಿರೂಪಣೆಯ ಬಗೆ ಸಾಮಾನ್ಯರಿಗೂ ಸುಲಭ ಗ್ರಾಹ್ಯವಾಗಿರಬೇಕೆಂಬುದಲ್ಲದೆ, ಸತ್ಯತೆ ಹಾಗೂ ಪೂರ್ಣತೆ ಇವುಗಳಿಗೂ

ಗಮನ ಕೊಡಲಾಗಿದೆಯೇ ಎಂದು ಪರೀಕ್ಷಿಸುವುದಗತ್ಯ. ವಿಷಯಗಳ ಹೊಂದಾವಣೆ ಅಕ್ಷರಾನುಕ್ರಮದಲ್ಲಿ ಬರಬೇಕಾದುದು ನ್ಯಾಯವೇ ಆಗಿದೆ. ಇದನ್ನುಳಿದು ಕೆಲ ಸಲ ಪ್ರಾದೇಶಿಕವಾಗಿಯೂ, ವರ್ಗೀಕೃತವಾಗಿಯೂ, ಕಾಲಾನುಕ್ರಮದಲ್ಲಿಯೂ ವಿಷಯವನ್ನು ಹೊಂದಿಸಿ ಇಡುವ ಪ್ರಸಂಗವೂ ಇದೆ.

ಬಾಹ್ಯ ಸ್ವರೂಪವೂ ಮಹತ್ವದ್ದೇ. ಹತ್ತು ಜನ ಹಲವಾರು ವರ್ಷಗಳ ವರೆಗೆ ಉಪಯೋಗಿಸುವರಾದ್ದರಿಂದ ಒಳ್ಳೆಯ ಕಾಗದ, ಗಟ್ಟಿಯಾದ ರಟ್ಟು, ಪುಟಸಂಖ್ಯೆಯ ಪ್ರಮಾಣದಲ್ಲಿ ನಿಂತ ಆಕಾರ ಇವುಗಳನ್ನೂ ನೋಡಬೇಕು. ಇದಕ್ಕೆ ತಪ್ಪಿರುವುದು, ಭಾರದ್ವಾಜರ ಇಂಗ್ಲಿಷ ಕನ್ನಡ ನಿಘಂಟು. ಐದಾರು ನೂರು ಪುಟಗಳನ್ನು, ಪಾಕೆಟ್ ಆಕ್ಸಫರ್ಡ ನಿಘಂಟುವಿನ ಆಕಾರದಲ್ಲಿ ಕೊಟ್ಟುದು ಸರಿಯಾದದ್ದಾಗಿಲ್ಲ. ಈಚಿನ ಒಂದು ಆವೃತ್ತಿಯಲ್ಲಿ ಅದನ್ನು ತಿದ್ದಿಕೊಂಡುದು ಕಂಡುಬರುತ್ತದೆ. ಕೊನೆಯದಾಗಿ, 'ವಿಶಿಷ್ಟ ಲಕ್ಷಣಗಳೇನಾದರೂ ಇದ್ದರೆ' ....ಎನ್ನುವುದು ಆ ಆ ಪುಸ್ತಕಕ್ಕೆ ಸಂಬಂಧಪಟ್ಟ ಮಾತಾಗುತ್ತದೆ.

ಇನ್ನು ಒಂದೊಂದಾಗಿ ಈ ಪ್ರಕಾರಗಳನ್ನು ಪರಿಶೀಲಿಸುವ.

## ನಿಘಂಟು ಅಥವಾ ಶಬ್ದಕೋಶಗಳು

ಸಂದರ್ಭಸಾಹಿತ್ಯದಲ್ಲಿ ಪ್ರಾಥಮಿಕವಾಗಿದ್ದುಕೊಂಡು, ಎಲ್ಲಕ್ಕೂ ಹೆಚ್ಚು ಸಂಖ್ಯೆಯಲ್ಲಿ ಪ್ರಕಟವಾಗುತ್ತಿರುವುವು ಈ ಶಬ್ದಕೋಶಗಳು. ನಮಗೆಲ್ಲ ತಿಳಿದಂತೆ ಶಬ್ದಗಳ ಅರ್ಥವನ್ನು ಕೊಡುವುದು ಅವುಗಳ ಮೂಲಕರ್ತವ್ಯ. ಪ್ರತಿಯೊಬ್ಬ ವಿದ್ಯಾವಂತನ ಮನೆಯಲ್ಲಿ ಒಂದು ನಿಘಂಟು ಇದ್ದೇ ತೀರಬೇಕಾಗಿದೆ. ನಿಘಂಟುಗಳಲ್ಲಿ ಶಬ್ದದ ಅರ್ಥ ಒಂದೇ ಅಲ್ಲದೆ, ಭಾಷಾಶಾಸ್ತ್ರದ ದೃಷ್ಟಿಯಿಂದ ಅದರ ಉತ್ಪತ್ತಿ ಬೆಳೆವಳಿಗೆಗಳನ್ನೂ, ಕೆಲ ಸಲ ವಿರುದ್ಧಾರ್ಥದ ಶಬ್ದವನ್ನೂ ಕೊಡುವುದುಂಟು. ಅರ್ಥವನ್ನು ಸ್ಪಷ್ಟಮಾಡುವುದಕ್ಕೆ ಚಿತ್ರಗಳನ್ನೂ ಅಲ್ಲಲ್ಲಿ ಕೊಡುವುದು ಇದೆ. ಇಷ್ಟಲ್ಲದೆ ಆ ವ್ಯಾಕರಣದಲ್ಲಿ ಆ ಶಬ್ದದ ಸ್ಥಾನವನ್ನೂ, ಅದರ ಇತರ ರೂಪಗಳನ್ನೂ ಕೊಡಲಾಗುತ್ತದೆ. ಆ ಶಬ್ದದ ಪ್ರಯೋಗವನ್ನೊಳಗೊಂಡ ಪ್ರಾಚೀನ ವಾಕ್ಯಗಳನ್ನು ಉದಾಹರಿಸುವುದೂ ಕಂಡುಬರುತ್ತದೆ. ಇವೆಲ್ಲ ವಿಷಯಗಳೂ ಪ್ರತಿ ನಿಘಂಟುವಿನಲ್ಲಿ ಇರಬೇಕೆಂದಿಲ್ಲ.

ಲೇಖಕರು ಇಟ್ಟುಕೊಂಡಿರುವ ವಿಷಯವಿಸ್ತಾರದ ಮಿತಿ, ಹಾಗೂ ಓದುಗ ವರ್ಗದ ಮೇಲೆ ಇದು ಅವಲಂಬಿಸಿದೆ.

ಡಾ. ಜಾನ್ಸನ್ನದ ಕಾಲದಿಂದಲೂ ನಿಘಂಟುಗಳು ಇಂಗ್ಲಿಷಿನಲ್ಲಿವೆ. ಭಾರತೀಯರಲ್ಲಿ ಅದಕ್ಕೂ ಪ್ರಾಚೀನವಾಗಿರುವ ಅಮರಕೋಶ, ಶಬ್ದಕಲ್ಪದ್ರುಮಗಳಿವೆ. ಜಾಗತಿಕ ಖ್ಯಾತಿಯನ್ನು ಪಡೆದ ಎರಡು ಇಂಗ್ಲಿಷ ನಿಘಂಟುಗಳನ್ನೂ, ಅದರಂತೆ ಕೆಲವು ಭಾರತೀಯ ನಿಘಂಟುಗಳ ಹೆಸರುಗಳನ್ನೂ ಈ ಕೆಳಗೆ ಕೊಡಲಾಗಿದೆ:—

೧. **ಆಕ್ಸಫರ್ಡ ಡಿಕ್ಸನರಿ:—** ೧೦ ಸಂಪುಟಗಳಲ್ಲಿದೆ. ಆದರೆ ಇತ್ತೀಚಿನ ಶಬ್ದ ಮತ್ತು ಶಾಸ್ತ್ರೀಯ ಶಬ್ದಗಳಿಗೆ ಸಂಪೂರ್ಣ ಸ್ಥಾನ ಬಂದಿಲ್ಲ.

೨. **ವೆಬ್ಸ್ಟರ್ಸ ಡಿಕ್ಸನರಿ:—** ಇದು ಅಮೇರಿಕೆಯ ಇಂಗ್ಲಿಷ ಕೋಶ. ಒಂದೇ ಸಂಪುಟದಲ್ಲಿದ್ದು, ಅಮೇರಿಕೆಯ ಉಚ್ಚಾರಣೆಗಳನ್ನು ಕೊಡುತ್ತದೆ. ಹೆಚ್ಚು ಶಾಸ್ತ್ರೀಯವಾಗಿದೆ.

೩. ಇಂಗ್ಲಿಷಿನಲ್ಲಿ ಇವೆರಡು ಪ್ರಾಮಾಣ್ಯ ಗ್ರಂಥಗಳಲ್ಲದೆ ನೂರಾರು ಬಗೆಯ ನಿಘಂಟುಗಳು ಇವೆ. ವೈಜ್ಞಾನಿಕ ಪದಗಳ ಕೋಶಗಳು, ಸಂಗೀತ ಶಬ್ದಗಳ ಕೋಶಗಳು, ಸಂಕ್ಷಿಪ್ತ ನಿಘಂಟುಗಳು, ಉಚ್ಚಾರಣೆಗೇ ಮೀಸಲಾದ ಕೃತಿಗಳು, ಜಾನಪದ ಹಾಗೂ ಬಳಕೆಯ ಶಬ್ದಗಳ ನಿಘಂಟುಗಳು ಸಹಿತ ಪ್ರತ್ಯೇಕವಾಗಿ ದೊರೆಯುತ್ತವೆ.

ಭಾರತದಲ್ಲಿ ಕ್ರಿಶ್ಚನ್ ಮಿಶನರಿಗಳು, ಇತರ ಪಾಶ್ಚಾತ್ಯರು ಬಂದೊಡನೆ ಇಂಗ್ಲಿಷ-ಭಾರತೀಯ ಭಾಷೆಗಳ ನಿಘಂಟುಗಳ ಕಾರ್ಯಕ್ಕೆ ಮೊದಲಾಯಿತು ಇದರಲ್ಲಿ ವಿಲ್ಸನ್, ಹಾಬ್ಸನ್ ಜಾಬ್ಸನ್, ಫರ್ಗ್ಯುಸನ್, ಹ್ಯಾರಿಸ್ ಮುಂತಾದ ಜನರು ೧೯ನೆಯ ಶತಮಾನದಲ್ಲಿ ಇಂಗ್ಲಿಷ–ಹಿಂದೀ-ಉರ್ದು ಶಬ್ದಾರ್ಥಗಳನ್ನೊಳಗೊಂಡ ಕೋಶಗಳನ್ನು ಕೊಟ್ಟಿದ್ದಾರೆ. ಇವಲ್ಲದೇ ಇತರ ದೇಶೀಯ ಭಾಷೆಗಳಲ್ಲಿಯೂ ಹಿರಿದಾದ ಕಾರ್ಯ ಮಾಡಿದ್ದಾರೆ. ಕನ್ನಡದಲ್ಲಿ ಕಿಟೆಲ್ಲರವರ ನಿಘಂಟು, ಮರಾಠಿಯಲ್ಲಿ ಕೇಂಡಿ, ಮೋಲ್ಸವರ್ಥರವರ ನಿಘಂಟುಗಳು, ಈ ದಿಸೆಯಲ್ಲಿ ಉತ್ತಮ ಪ್ರಯತ್ನಗಳು. ಈಚೆಗೆ ಡಾ. ರಘುವೀರ ಅವರು ‘ ದಿ ಗ್ರೇಟ್ ಇಂಗ್ಲಿಶ್–ಇಂಡಿಯನ್ ಡಿಕ್ಸನರಿ ’ ಎಂಬ ಬೃಹತ್ಕೃತಿಯನ್ನು ಕೊಡುತ್ತಲಿದ್ದಾರೆ. ಮೋಜೆಂದರೆ ಹಾಕಿಕೊಂಡಿರುವ

ಯೋಜನೆಯ ಸಂಪುಟಗಳಲ್ಲಿ ಒಂದರಿಂದ ಕ್ರಮೇಣ ಕೆಲಸ ಪ್ರಾರಂಭವಾಗದೇ ಮೊದಲಿಗೆ ೧೫ನೆಯ ಸಂಪುಟವೊಂದೇ ಬಂದಿದೆ. ಅಲ್ಲದೆ ರಾಜ್ಯಶಾಸ್ತ್ರಕ್ಕೆ ಸಂಬಂಧಪಟ್ಟ ಶಬ್ದಕೋಶ ಅವರಿಂದಲೇ ಸರಕಾರದ ಹೆಸರಲ್ಲಿ ಪ್ರಕಟವಾಗಿದೆ. ಇತರ ಶಾಸ್ತ್ರೀಯ ಹಾಗೂ ತಾಂತ್ರಿಕ ಶಬ್ದಗಳನ್ನೊಳಗೊಂಡ ಇನ್ನೂ ಒಂದು ನಿಘಂಟು ಅವರಿಂದ ಬಂದಿದೆ.

ಇತರ ದೇಶೀಯ ಭಾಷೆಗಳಲ್ಲಿ ಪ್ರಾತಿನಿಧಿಕವಾಗಿರುವ ಒಂದೊಂದು ನಿಘಂಟುವಿನ ಹೆಸರನ್ನು ಈ ಕೆಳಗೆ ಕೊಟ್ಟಿದೆ :—

ಮರಾಠಿ :— ೧. ಮಹಾರಾಷ್ಟ್ರ ಕೋಶ ಮಂಡಲದವರಿಂದ ಪ್ರಕಟಿಸಲಾದ ಶಬ್ದಕೋಶ ೭ ಸಂಪುಟಗಳಲ್ಲಿದೆ. ೧೯೩೮.

೨. ರಾನಡೆ ಅವರ ಇಂಗ್ಲಿಷ-ಮರಾಠಿ ಕೋಶ.

ಹಿಂದೀ :— ಭಾಟಿಯವರ ಹಿಂದೀ ಭಾಷೆಯ ನಿಘಂಟು.

ಬಂಗಾಲಿ :— 'ಬಂಗಾಲ-ಅಭಿಧಾನ' ಸುಬಲ ಚಂದ್ರ ಮಿತ್ರ ಕೃತ.

ಗುಜರಾಥೀ :— ಮೆಹತಾರವರ ಗುಜರಾಥೀ ಶಬ್ದಾರ್ಥಚಿಂತಾಮಣಿ.

ತಮಿಳು :— ಮದ್ರಾಸ ವಿದ್ಯಾಲಯದವರ 'ತಮಿಳು ಲೆಕ್ಸಿಕಾನ್'. ೭ ಸಂಪುಟಗಳು.

ತೆಲುಗು :— ಶಂಕರನಾರಾಯಣ ಚೆಟ್ಟಿಯಾರರ ತೆಲುಗು-ಇಂಗ್ಲಿಷ ನಿಘಂಟು.

## ವಿಶ್ವಕೋಶಗಳು

ಶಬ್ದಕೋಶಗಳು ಶಬ್ದಗಳ ಅರ್ಥವನ್ನು ಹೇಳುತ್ತಿದ್ದರೆ, ಇವು ಆ ಶಬ್ದಗಳ ವಿಷಯಭಾಗವನ್ನು ವಿವರಿಸುವಂತಹವಾಗಿವೆ. ಅದರ ಹೆಸರಲ್ಲಿಯೇ ವಿಶ್ವದಲ್ಲಿಯ ಎಲ್ಲ ವಿಷಯಗಳ ಪರಿಚಯವನ್ನು ಕೊಡುವ ಅವುಗಳ ಕಾರ್ಯ ವ್ಯಕ್ತವಾಗುವಂತಿದೆ. ಎಲ್ಲ ವಿಷಯಗಳನ್ನು ಅಕ್ಷರಾನುಕ್ರಮಣಿಕೆಯಲ್ಲಿ ಹೊಂದಿಸಿ ಅವುಗಳ ಬಗ್ಗೆ ಕಿರಿದಾದ ಆದರೂ ಪೂರ್ಣವಾದ ಪರಿಚಯ ಕೊಟ್ಟು, ಅಗತ್ಯವಿದ್ದಲ್ಲಿ ಚಿತ್ರ, ನಕ್ಷೆಗಳನ್ನು ಸೇರಿಸಿ, ಅವುಗಳ ಹೆಚ್ಚಿನ ಪರಿಚಯ ಬೇಕಾದವರಿಗೆ ಇರಲೆಂದು ಆ ವಿಷಯದ ಮೇಲಿನ ಗ್ರಂಥಸೂಚಿಯನ್ನೂ ಕೊಡುವುದು ಇದರ ಕ್ರಮವಾಗಿದೆ. ಇವುಗಳನ್ನು ಸಿದ್ಧಗೊಳಿಸುವದು ಬಹು ಕಷ್ಟದ ಕೆಲಸ. ಅಲ್ಲದೆ ಅನುದಿನದ ವರೆಗೂ ಅವುಗಳಲ್ಲಿ ವಿಷಯಪೂರ್ತಿ

ಇರಬೇಕಾಗುವುದರಿಂದ, ಇಂದು ಪ್ರಕಟವಾದ ವಿಶ್ವಕೋಶದ ಒಂದು ವಿಷಯು ೧೦ ವರ್ಷಗಳ ಮೇಲೆ—ಕೆಲಮಟ್ಟಿಗೆ ಅಪೂರ್ಣವೆನಿಸಬಹುದು. ಆದುದರಿಂದ ಹತ್ತೋ, ಇಪ್ಪತ್ತೋ ವರ್ಷಗಳಿಗೊಮ್ಮೆ ಅವನ್ನು ಪರಿಶೋಧಿಸಿ ಪುನ ರ್ಮುದ್ರಿಸುವುದುಂಟು. ಕೆಲವು ವಿಶ್ವಕೋಶಗಳು ನಿರ್ದಿಷ್ಟ ವಿಷಯಗಳನ್ನಷ್ಟೇ ತೆಗೆದುಕೊಂಡು ರಚಿಸಿದವುಗಳಾಗಿರಬಹುದು. ಅವುಗಳಿಗೆ ವಿಷಯಕೋಶ ಗಳೆಂದು ಬೇಕಾದರೆ ಕರೆಯುುವ.

ಎರಿಸ್ಟಾಟಲನ ಕಾಲದಿಂದಲೂ ವಿಶ್ವಕೋಶಗಳಿವೆ ಎಂದು ಹೇಳಲಾಗು ತ್ತದೆ. ಭಾರತದಲ್ಲಿ ವರಾಹಮಿಹಿರನ ಬೃಹತ್-ಸಂಹಿತೆ ಪ್ರಾಚೀನತಮವಾದ ಒಂದು ವಿಶ್ವಕೋಶವೇ ಸೈ. ಮೊದಲಿಗೆ ಒಬ್ಬೊಬ್ಬರೇ ವಿಶ್ವಕೋಶವನ್ನು ರಚಿಸುವುದು ಕಂಡುಬಂದರೆ, ಮುಂದೆ ವಿಷಯವಿಸ್ತಾರವಾದ ಹಾಗೆಲ್ಲ ಈ ಕೆಲಸವನ್ನು ಸಹಕಾರೀ ಪದ್ಧತಿಯ ಮೇಲೆ, ಸಂಸ್ಥೆಯ ಮುಖಾಂತರ ಮಾಡುವ ಎತ್ತುಗಡೆ ನಡೆದುದು ೧೮ನೆಯ ಶತಮಾನದಿಂದಲೇ ಪ್ರಾರಂಭ ವಾಗಿದೆ. ಕೆಲವು ಪ್ರಸಿದ್ಧ ವಿಶ್ವಕೋಶಗಳನ್ನು ಈ ಕೆಳಗೆ ಹೇಳಿದೆ :—

೧. **ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕಾ :** — ಇಂಗ್ಲಿಷಿನಲ್ಲಿ ಸಾಕಷ್ಟು ಪ್ರಾಚೀನವಾಗಿದ್ದು ಇಂದಿಗೂ ಮುಂದರಿಸಲ್ಪಟ್ಟಿರುವುದೆಂದರೆ ಇದೇ. ೧೭೬೮ರಲ್ಲಿ ಪ್ರಾರಂಭವಾಗಿ ೧೯೩೩ಕ್ಕೆ ಅದರ ಇತ್ತೀಚಿನ ಆವೃತ್ತಿ ಹೊರಟಿದೆ. ಒಟ್ಟು ೨೪ ಸಂಪುಟಗಳಿವೆ. ಅಲ್ಲದೆ ವಾರ್ಷಿಕವಾಗಿ ಮತ್ತು ಹತ್ತು ವರ್ಷಕ್ಕೆ ಪೂರಕ ಸಂಪುಟಗಳನ್ನೂ ಕೊಟ್ಟು ಇಂದಿನ ತನಕವೂ ಎಲ್ಲ ವಿಷಯ ಬರುವ ಹಾಗೆ ನೋಡಿಕೊಂಡದ್ದಾಗಿದೆ.

೨. **ಎನ್‌ಸೈಕ್ಲೋಪೀಡಿಯಾ ಅಮೇರಿಕಾನಾ:** — ಮೇಲಿನ ದರ ಮಾದರಿಯಲ್ಲೇ ಹೊರಟುದಾದರೂ ನಿರೂಪಣೆಯ ರೀತಿ ತುಸು ಬೇರೆ ಯಾಗಿದೆ. ೩೦ ಸಂಪುಟಗಳುಳ್ಳ ಈ ಕೃತಿ ತುಸು ಹೆಚ್ಚು ವಿಷಯವನ್ನು ಒಳಗೊಂಡಿದೆ.

೩. **ಎನ್‌ಸೈಕ್ಲೋಪೀಡಿಯಾ ಆಫ್ ರಿಲಿಜನ್ ಎಂಡ್ ಎಥಿಕ್ಸ್:** — ಇದು ಮೇಲೆ ಹೇಳಿದ, ವಿಶಿಷ್ಟ ವಿಷಯವಾದ ಧರ್ಮದ ಕುರಿತು ಇರುವಂತಹ ಕೋಶವಾಗಿದೆ. ಹೇಸ್ಟಿಂಗ್ಸ್ ಎಂಬಾತ ಬರೆದುದು. ೧೯೨೭ರ ನಂತರ ಇದನ್ನು ಪರಿಷ್ಕರಿಸಲಾಗಿಲ್ಲ.

**೪. ಸೆಲಿಗ್ಮನ್‌ರ ಎನ್‌ಸೈಕ್ಲೋಪೀಡಿಯಾ ಆಫ್ ಸೋಶಿಯಲ್ ಸೈನ್ಸಿಸ್:—** ಇದೊಂದು ಅತ್ಯುಪಯುಕ್ತ ಕೃತಿ. ೧೯೩೦ರಲ್ಲಿ ಅದರ ಎರಡನೆಯ ಆವೃತ್ತಿ ಹೊರಟು ಸಾಮಾಜಿಕ ಶಾಸ್ತ್ರಗಳ ಮೇಲೆ ಅಧಿಕಾರಯುತ ಸಂದರ್ಭಕೃತಿ ಎನಿಸಿದೆ.

ಅದರಂತೆ ವೈಜ್ಞಾನಿಕ ವಿಷಯಗಳ ಮೇಲೂ, ಸಂಗೀತ, ವೇಷಭೂಷಣ, ನೃತ್ಯ, ಸಾಹಿತ್ಯ, ಚರಿತ್ರೆ ಇವೆಲ್ಲವುಗಳ ಮೇಲೂ ವಿಶ್ವಕೋಶಗಳು ದೊರೆಯುತ್ತವೆ.

ಭಾರತದಲ್ಲಿಯ ವಿಶ್ವಕೋಶಗಳನ್ನು ನೋಡಿದರೆ ಮಹಾರಾಷ್ಟ್ರೀಯರು ಈ ದೇಶದಲ್ಲಿ ತುಂಬ ಮುಂದುವರಿದಿದ್ದಾರೆ. ಕೇತಕರರವರ ಮಹಾರಾಷ್ಟ್ರೀಯ ಜ್ಞಾನಕೋಶವು ಸಾಂಘಿಕ ಪ್ರಯತ್ನವಲ್ಲದಿದ್ದರೂ ತಕ್ಕಮಟ್ಟಿಗೆ ಪರಿಪೂರ್ಣ ಕೃತಿ. ಅದರಂತೆ ಅವರಲ್ಲಿ ವ್ಯಾವಹಾರಿಕ ಜ್ಞಾನಕೋಶವೂ, ಒಂದಲ್ಲ ಎಂಟು ಸಂಪುಟಗಳಲ್ಲಿರುವ ವ್ಯಾಯಾಮ ಜ್ಞಾನಕೋಶವೂ ಉಂಟು! ಕನ್ನಡದಲ್ಲಿ ಪುರಾಣನಾಮ ಚೂಡಾಮಣಿ ಇದ್ದ ಹಾಗೆ ಹಿಂದೀಯಲ್ಲಿ ಶರ್ಮಾರವರ ಒಂದು ಹೊತ್ತಿಗೆ ಇದೆ ಬಂಗಾಲದ 'ವಿಶ್ವಕೋಶ'ಗಳು ೧೮೯೯ರಷ್ಟು ಹಳೆಯವು, ಆಂಧ್ರವಿಜ್ಞಾನ ಸಾರಸ್ವತಮು ಮತ್ತು ಅಭಿಧಾನ ಚಿಂತಾಮಣಿಯು (ತಮಿಳು) ನಮ್ಮ ಇತರ ಸೋದರರ ಯತ್ನಗಳಾಗಿವೆ. ಕನ್ನಡದ ಒಂದೇ ಒಂದು ವಿಶ್ವಕೋಶವೆಂದರೆ ಕಾರಂತರ ಬಾಲಪ್ರಪಂಚದ ಮೂರು ಸಂಪುಟಗಳು.

ಅದರಂತೆ ವ್ಯಕ್ತಿ ಚರಿತ್ರೆಗಳ ಕೋಶಗಳ ಕುರಿತು ಪ್ರತ್ಯೇಕವಾಗಿಯೇ ಹೇಳಬೇಕು. ಇವು ಸಾಮಾನ್ಯವಾಗಿ ಪ್ರಾದೇಶಿಕವಾಗಿದ್ದರೂ ಜಗತ್ತಿನ ಎಲ್ಲ ಪ್ರಮುಖ ವ್ಯಕ್ತಿಗಳನ್ನು ಕುರಿತು ವರ್ಣಿಸಿರುವ 'ಡಿಕ್ಷನರಿ ಆಫ್ ನ್ಯಾಶನಲ್ ಬಯಾಗ್ರಫಿ' ಎಂಬ ಕೃತಿ ಇದೆ. ಅದರಂತೆ 'ಹೂ'ಸ್ ಹೂ' ಎಂಬ ರೀತಿಯಲ್ಲಿ ಸಾಮಾನ್ಯವಾಗಿ ಎಲ್ಲ ದೇಶಗಳಲ್ಲೂ ವ್ಯಕ್ತಿಚಿತ್ರಗಳ ಕೋಶಗಳಿವೆ.

## ಡಿರೆಕ್ಟರಿ ಅಥವಾ ನಾಮದರ್ಶಕಗಳು

ಇವು ಸಾಮಾನ್ಯವಾಗಿ ವ್ಯಕ್ತಿ, ಸಂಸ್ಥೆಗಳ ವಿಳಾಸವನ್ನೂ ಅಲ್ಪ ಪರಿಚಯವನ್ನೂ ಕೊಡುವುದಕ್ಕೂ, ಯಾವುದೇ ಉದ್ಯೋಗದಲ್ಲಿ ತೊಡಗಿದ ಎಲ್ಲ

ಸಂಸ್ಥೆ, ವ್ಯಕ್ತಿಗಳನ್ನು ನಿರ್ದೇಶಿಸುವುದಕ್ಕೂ ಇವೆಯಾದುದರಿಂದ ವ್ಯಾವಹಾರಿಕ ಉದ್ಯೋಗದಲ್ಲಿ ಇವುಗಳ ಉಪಯುಕ್ತತೆ ಬಹಳ. ಕೆಲೀಯವರ ಪೋಸ್ಟ ಆಫೀಸ್ ಲಂಡನ್ ಡಿರೆಕ್ಟರಿ ಇವುಗಳಲ್ಲಿ ಒಂದು ಮಾದರಿಯ ಕೃತಿ. ಭಾರತದಲ್ಲಿ ಟೈಮ್ಸ ಆಫ್ ಇಂಡಿಯಾದವರ ಹಾಗೂ ಥ್ಯಾಕರ್ಸರವರ ನಾವು ದರ್ಶಕಗಳಿವೆ. ಕರ್ನಾಟಕದಲ್ಲಿಯೂ ಇಂಥ ಒಂದೆರಡು ಡಿರೆಕ್ಟರಿಗಳು ಪ್ರಕಟವಾಗಿವೆ.

## ಆವಳಿಗಳು

ನಿರ್ದಿಷ್ಟ ಕಾಲಾವಧಿಗೊನ್ಮೊಮ್ಮೆ ಪ್ರಕಟವಾಗುತ್ತಿರುವ ಕೃತಿಗಳಿಗೆ ಇಲ್ಲಿ ಆವಳಿಗಳೆಂದು ಕರೆದಿದೆ. ಆ ಕಾಲಾವಧಿ ದಿನಪತ್ರಿಕೆಯ ಹಾಗೆ ಒಂದೇ ದಿನವಿರಬಹುದು, ವಾರವಿರಬಹುದು, ತಿಂಗಳಿರಬಹುದು, ವರ್ಷವೂ ಇರಬಹುದು. ಈ ದೃಷ್ಟಿಯಲ್ಲಿ ಪತ್ರಿಕೆಗಳು, ವೃತ್ತಪತ್ರಗಳು, ಸಂಸ್ಥೆಗಳ ವರದಿಗಳು, ಸರಕಾರೀ ಪ್ರಕಟನೆಗಳು ಮತ್ತು ಇತರ ವಾರ್ಷಿಕಗಳನ್ನು ಈ ಬಗೆಯ ಸಂದರ್ಭ ಸಾಹಿತ್ಯವೆಂದು ತಿಳಿಯಬೇಕಾಗಿದೆ.

ಈ ಸಂದರ್ಭ ಸಾಹಿತ್ಯದಲ್ಲಿಯೇ ವಿಶಿಷ್ಟವಾದುವುಗಳೆಂದರೆ **ವಾರ್ಷಿಕಗಳು.** ಇವಕ್ಕೆ ಇಂಗ್ಲಿಷಿನಲ್ಲಿ ಅಲ್‌ಮೆನೆಕ್ಸ ಎಂದೂ ಹೆಸರಿದೆ. ಮೊದಲಿಗೆ ಉತ್ತರ ಮಧ್ಯಯುಗದಲ್ಲಿ ಪಂಚಾಂಗದ ರೀತಿಯಲ್ಲಿ ಮಾಹಿತಿಯನ್ನು ಕೊಡುವುದಕ್ಕೆ ಇವು ಹುಟ್ಟಿಕೊಂಡವು ಆನಂತರ ಜಾಗತಿಕವಾದ ಕೆಲವು ಉಪಯುಕ್ತ ವಿಷಯಗಳೊಡನೆ ಆ ಆ ದೇಶದ ಸಾಂಗತಿಕವಾದ, ಚಾರಿತ್ರಿಕವಾದ ಹಾಗೂ ಇನ್ನು ಕೆಲ ವಿಷಯಗಳ ಅಂಕಿಸಂಖ್ಯೆಗಳನ್ನು ಕೊಡುವುದಕ್ಕೆ ಮೊದಲಾಯಿತು. ಅನೇಕ ವರ್ಷಗಳಿಂದ ಹೀಗೆ ಪ್ರಕಟವಾಗುತ್ತಿರುವ 'ದಿ ವರ್ಲ್ಡ ಅಲ್‌ಮೆನೆಕ್' ಹಾಗೂ 'ವ್ಹಿಟಕಾರ್ಸ್ ಅಲ್‌ಮೆನೆಕ್' ತುಂಬ ಪ್ರಸಿದ್ಧಿಯನ್ನು ಪಡೆದಿವೆ. ಅಮೇರಿಕೆಯ ಈ ಎತ್ತುಗಡೆಗೆ ಸಮನಾಗಿ ಇಂಗ್ಲಂಡಿನಲ್ಲಿ ಸ್ಟೇಟ್ಸಮನ್ ಮತ್ತು ಡೇಲೀ ಮೇಲ್ ಪತ್ರಿಕೆಗಳು ವಾರ್ಷಿಕಗಳನ್ನು ಕೊಡುತ್ತಲಿವೆ.

ಭಾರತದಲ್ಲಿ ಟೈಮ್ಸ ಆಫ್ ಇಂಡಿಯಾ ಸಂಸ್ಥೆಯು ಹೊರಡಿಸುವ ಭಾರತ ಪಾಕಿಸ್ತಾನದ ವಾರ್ಷಿಕವು ನಮ್ಮಲ್ಲಿ ಸಾಕಷ್ಟು ಜನಕ್ಕೆ ಪರಿಚಿತವಾದುದು. ಮತ್ತು ಅದರಲ್ಲಿ ಹಿಂದೆ ಹೇಳಿದ ವ್ಯಕ್ತಿಚಿತ್ರಗಳೂ ಇವೆ.

ಕಲಕತ್ತೆಯಿಂದ ಪ್ರಕಟವಾಗುವ 'ನಲಂದಾ ಇಯರ್ ಬುಕ್' ತಕ್ಕಮಟ್ಟಿಗೆ ಪ್ರಯೋಜನಕಾರಿಯಾದುದೇ. ಇತ್ತೀಚೆಗೆ ಅಖಿಲ ಭಾರತ ಮುಸ್ಲಿಂ ವಣಿಕ್ಸಂಘದವರೂ ಒಂದು ವಾರ್ಷಿಕವನ್ನು ಕೊಡುತ್ತಲಿದ್ದಾರೆ. ಪಾಕಿಸ್ತಾನದ ಬಗ್ಗೆಯೂ ಅದರಲ್ಲಿ ಸಾಕಷ್ಟು ಮಾಹಿತಿ ಇದೆ.

ಎರಡನೆಯದು, ನಮಗೆಲ್ಲ ಸಾಕಷ್ಟು ಪರಿಚಿತ ಇರುವ **ಪತ್ರಿಕೆಗಳು.** ಹೊಸತಾಗಿ ಬಂದಾಗ ಪತ್ರಿಕೆ ಮೊದಲಿಂದ ಕೊನೆವರೆಗೆ ಓದುವಂತಹದಾದರೂ ಆನಂತರ ಅದರ ಉಪಯೋಗ ಸಂದರ್ಭವೆಂಬಂತೆಯೇ ಮಾಡಿಕೊಳ್ಳಲಾಗುತ್ತದೆ. ಜಗತ್ತಿನಲ್ಲಿ ಇಂದು ೧,೧೭,೦೦೦ ವೃತ್ತಪತ್ರಿಕೆಗಳೂ, ೫ ಲಕ್ಷ ಪತ್ರಿಕೆಗಳೂ ಹೊರಡುವವೆಂದು ಅಂದಾಜು ಮಾಡಲಾಗಿದೆ; ಮತ್ತು ಇವುಗಳಿಗೆ ಸೂಚಿಗಳನ್ನು ಕೊಡುವ ಕೈಪಿಡಿಗಳೂ, ಆ ಪತ್ರಿಕೆಗಳಲ್ಲಿ ಬಂದ ಪ್ರಮಾಣಿತ ಲೇಖನಗಳ ಸೂಚಿಯನ್ನು ಕೊಡುವ ಕೃತಿಗಳೂ ಇವೆ. ಅವೆಲ್ಲ ಸಂದರ್ಭ ವಿಭಾಗದಲ್ಲಿ ಇರಬೇಕಾದುವೇ. ಪತ್ರಿಕೆಗಳಲ್ಲೆಲ್ಲ ಈ ವಿಭಾಗದಲ್ಲಿ ಕಾಯಂ ಆಗಿ ಇರಬೇಕಾದ ಒಂದು ಪ್ರಕಟನೆಯೆಂದರೆ ಕೇಸಿಂಗ್ಸ ಅವರ ಸಮಕಾಲೀನ ಘಟನಾವಳಿ (Contemporary Archives). ಇದರಲ್ಲಿ ವಾರವಾರವೂ ಜಗತ್ತಿನಲ್ಲಿ ನಡೆದ ಘಟನೆಗಳ ಸಂಕ್ಷಿಪ್ತ ವರದಿ ಬರುತ್ತದೆ. ಅದರಂತೆ ಆ ಘಟನಾವಳಿಯ ಅಕಾರಾದಿ ಸೂಚಿಕೆಯನ್ನೂ ಹೊಂದಿಸಿಕೊಳ್ಳಲಾಗುತ್ತದೆ.

ಬೇರೆ ಬೇರೆ ವಿಷಯಗಳ ಮೇಲೆ ಆಗಾಗ ಪ್ರಕಟವಾಗುತ್ತಿರುವ **ಸರಕಾರೀ ಪ್ರಕಟನೆಗಳೂ** ಸಂದರ್ಭ ಸಾಹಿತ್ಯದ ಒಂದು ಮಹತ್ವದ ಭಾಗವೆನಿಸಿವೆ. ಇವುಗಳಲ್ಲಿ ಬರುವ ಅಂಕಿಸಂಖ್ಯೆಗಳು ಯಾವಾಗಲೂ ಪ್ರಾಮಾಣ್ಯವುಳ್ಳಂತಹವು. ವ್ಯಾಪಾರ, ಸಂಶೋಧನ, ಇತರ ಸರಕಾರೀ ಕಾರ್ಯಕಲಾಪಗಳ ಮೇಲಿನ ಪ್ರಕಟನೆಗಳಲ್ಲದೇ ಈ ಹಿಂದೆ ಪ್ರಕಟವಾಗಿರುವ ಸರಕಾರೀ ಗೆಝೆಟಿಯರುಗಳೂ ಸಂದರ್ಭ ಸಾಹಿತ್ಯವೆನ್ನಿಸಿಕೊಂಡು ಭೌಗೋಲಿಕ ಹಾಗೂ ಚಾರಿತ್ರಿಕ ಅಭ್ಯಾಸಕ್ಕೆ ಅತ್ಯಂತ ಉಪಯುಕ್ತವಾದವುಗಳಾಗಿವೆ.

**ಸಂಘಸಂಸ್ಥೆಗಳ ವರದಿ**ಗಳೂ ಒಮ್ಮೊಮ್ಮೆ ಅಗತ್ಯವಾಗಿ ಬೇಕಾಗುತ್ತವೆ. ಅವುಗಳ ಪ್ರಯೋಜನವು ಇಂದೇ, ಅಥವಾ ಇದರ ಬಗ್ಗೆಯೇ ಇದೆಯೆಂದು ಹೇಳಬರುವುದಿಲ್ಲ. ಕೆಲವು ವಿದ್ವತ್ಸಂಸ್ಥೆಗಳು ತಮ್ಮ ವರದಿಯ

ಜೊತೆಗೆ ಕೆಲವು ಲೇಖನಗಳನ್ನೂ ಕೊಡುತ್ತವೆ. ಅವುಗಳೂ ಓದುಗರಿಗೆ ಗೊತ್ತಾಗುವಂತೆ ಪತ್ರಿಕಗಳನ್ನು ಸಿದ್ಧಗೊಳಿಸಬೇಕಾಗುವುದು.

## ವಿಷಯ ಸೂಚಿಗಳು

ಯಾವದಾದರೊಂದು ವಿಷಯದ ಮೇಲೆ ದೊರೆಯುವ ಅಥವಾ ಒಂದು ವಿಶಿಷ್ಟ ದೃಷ್ಟಿಕೋನದಿಂದ ಓದಿನ ಸಾಧನಗಳನ್ನೆಲ್ಲ ಒಂದೆಡೆ ಕಲೆಹಾಕಿ ಆ ವಿಷಯದ ಅಭ್ಯಾಸಕ್ಕೆ ನೆರವಾಗುವಂತಹವು ಈ ವಿಷಯ ಸೂಚಿಗಳು. ಒಂದು ವಿಷಯದ ಮೇಲೆ ಮೂಲೆಮೂಲೆಯಲ್ಲಿರುವ ಸಾಮಗ್ರಿಯನ್ನೆಲ್ಲ ಒಂದೆಡೆ ತರಿಸಿಹಾಕುವುದೂ, ಒಂದು ವಿಶಿಷ್ಟ ಅಭ್ಯಾಸವೇ ಇದೆ. ಅದಿಲ್ಲದಿದ್ದರೆ ಓದು ಪೂರ್ಣವಾಗುವುದಿಲ್ಲ. ವಿವಿಧ ಅಗತ್ಯತೆಗನುಸಾರವಾಗಿ ಇದರಲ್ಲಿಯೂ ಕೆಲಭಾಗಗಳನ್ನು ಮಾಡಲಾಗಿದೆ. ಗ್ರಂಥಾಲಯಗಳಲ್ಲೇ ಇಡುವ ನಾಮಾವಲಿಗಳು ವಿಷಯಸೂಚಿಗಳಲ್ಲಿ ಮುಖ್ಯ ಮತ್ತು ಸರ್ವಸಾಮಾನ್ಯವಾದುವಾಗಿವೆ. ಜಗತ್ತಿನ ಮೂಲೆಮೂಲೆಯಲ್ಲಿ ಪ್ರಕಟವಾದ ಎಲ್ಲ ಇಂಗ್ಲಿಷ ಪುಸ್ತಕಗಳ ಅಕಾರಾದಿ ಪಟ್ಟಿಯನ್ನು ಸಾವಿರಗಟ್ಟಲೆ ಪುಟಗಳಲ್ಲಿ ಹಿಂದೆ ಹೇಳಿದ ಆವರ್ತಗ್ರಂಥಸೂಚಿ (ಕ್ಯುಮುಲೇಟಿವ್ ಬುಕ್ ಇಂಡೆಕ್ಸ) ಎಂಬ ಹೆಬ್ಬೊತ್ತಿಗೆ ಕೊಡುತ್ತದೆ. ಇಂಗ್ಲಿಷಿನಲ್ಲಿ ಇಂಥವು ಇನ್ನೂ ಹೇರಳವಾಗಿವೆ. ಇದು ಹೀಗಾದರೆ ಕಾಲಕಾಲಕ್ಕೆ ಪ್ರಕಟವಾಗುವ ಹೊಸ ಪುಸ್ತಕಗಳ ಬಗ್ಗೆ ತಿಂಗಳಿಗೊಮ್ಮೆ ವರ್ಷಕ್ಕೊಮ್ಮೆ ವಿವರಗಳನ್ನು ಕೊಡುವುದುಂಟು. ಕೆಲವು ಸಲ ಈ ವಿಷಯಸೂಚಿ ಬರಿಯ ಸೂಚಿಯಾಗಿರದೆ ವಿವರಣಾಸಹಿತವಾಗಿಯೂ ಇರುತ್ತದೆ. ಪ್ರಕಟವಾದ ಪುಸ್ತಕಗಳಲ್ಲದೆ ಹಸ್ತಪ್ರತಿಗಳ ಸೂಚಿಗಳೂ ಇವೆ. ಮೈಸೂರ (ಓರಿಯೆಂಟಲ್) ಪ್ರಾಚ್ಯ ಗ್ರಂಥಭಂಡಾರವು ಮತ್ತು ಶಾಖೆಯು ಇಂಥ ಒಂದು ಸೂಚಿಯನ್ನು ಮುದ್ರಿಸಿದೆ. ಪುಸ್ತಕಗಳಲ್ಲದೆ ಲೇಖಕರ ಸೂಚಿಯೂ, ಪತ್ರಿಕೆಗಳ ಸೂಚಿಯೂ, ಪತ್ರಿಕೆಗಳಲ್ಲಿ ಪ್ರಕಟವಾದ ಪ್ರಮಾಣಿತ ಲೇಖನಗಳ ಸೂಚಿಗಳೂ ಸಹಿತ ಇವೆ. ಇವೆಲ್ಲ ಒಂದು ವಿಷಯದ ಮೇಲೆ ಹೆಚ್ಚೆಚ್ಚು ಸಂಶೋಧನೆಯೂ, ವಿಚಾರಮಂಥನವೂ ನಡೆಯುವುದಕ್ಕೆ ಸಹಾಯಕವಾಗುವುವು.

ವಿಶ್ವವಿದ್ಯಾಲಯ, ಸಂಶೋಧನ ಸಂಸ್ಥೆಗಳಂತಹ ಭಂಡಾರಗಳಲ್ಲಿ ಅಭ್ಯಾಸಿಗಳ ಉಪಯೋಗಕ್ಕಾಗಿ ನಿರ್ದಿಷ್ಟ ವಿಷಯಕ್ಕೆ ಸಂಬಂಧಪಟ್ಟ

ಸಾಧನ ಸಾಮುಗ್ರಿಯನ್ನು ಕೂಡಿಹಾಕುವ ಕಲೆಯು ಸಂದರ್ಭ ಸಹಾಯಕನಿಗೆ ಅಗತ್ಯವಾಗಿ ಇರಬೇಕಾಗುತ್ತದೆ. ಪ್ರಾಂತೀಕರಣದ ಮೇಲೆ ಎಷ್ಟು ಸಾಧನ ನಮ್ಮಲ್ಲಿದೆ ಎಂದು ಅಭ್ಯಾಸ ಮಾಡಬಯಸಿದವರಿಗೆ ಆಬಗ್ಗೆ ಇರುವ ಇಂಗ್ಲಿಷ ಕನ್ನಡ ಪುಸ್ತಕಗಳಲ್ಲದೆ, ಪತ್ರಿಕೆಗಳಲ್ಲಿ ಬಂದ ಮುಖ್ಯ ಲೇಖನಗಳೂ, ಸಂಪಾದಕೀಯಗಳೂ, ಕ. ಏಕೀಕರಣ ಮಹಾಸಮಿತಿ ಹೊರಡಿಸಿದ ಪ್ರಕಟನೆಗಳೂ, ಏಕೀಕರಣ ಸಮ್ಮೇಲನಗಳ ಭಾಷಣಗಳೂ ಬೇಕಾಗುತ್ತವೆ. ಅವನ್ನೆಲ್ಲ ಸಾಧ್ಯವಾದಷ್ಟು ಸಂಗ್ರಹಿಸಿಡಬೇಕಾಯಿತಲ್ಲ. ಇಷ್ಟು ಸಾಲದೆಯೇ ಅಭ್ಯಾಸಿಗನಿಗೆ ಕರ್ನಾಟಕದ ಐಕ್ಯತೆಯ ಸ್ವರೂಪದರ್ಶನಕ್ಕೆ ಹಿನ್ನೆಲೆಯಾಗಿ ಸಹಾಯಕವಾಗುವಂತಹ ಭೌಗೋಲಿಕ, ಐತಿಹಾಸಿಕ, ಸಾಹಿತ್ಯಿಕ ಟಿಪ್ಪಣಿಗಳು ಸಹಿತ ದೊರೆತರೆ ಇದೀಗ ಸಂದರ್ಭಸೇವೆಯ ಸಫಲತೆಯೆನ್ನಬೇಕಾಗುತ್ತದೆ.

### ನಕ್ಷೆಗಳು, ಚಿತ್ರಗಳು

ಭೌಗೋಲಿಕ ನಕಾಶಗಳು ಇದ್ದಷ್ಟೂ ಸಂದರ್ಭ ವಿಭಾಗಕ್ಕೆ ಬೇಕು. ಸೆರೆತ್ಸೆ ಖಾಮನ ಪ್ರಕರಣ ಏಳುವುದಕ್ಕೆ ಮುಂಚೆ ಬಚುವನಾಲ್ಯಾಂಡ್‌ದ ಬಗ್ಗೆ ಎಷ್ಟು ಜನ ಪತ್ರಿಕೋದ್ಯಮಿಗಳಿಗೆ ವಿವರ ಗೊತ್ತಿತ್ತು ? ಜಗತ್ತಿನ ಯಾವುದೋ ಮೂಲೆಯಲ್ಲಿ ಸಿಡಿದೇಳುವ ಸುದ್ದಿಯ ಸ್ಫೋಟಕ್ಕೆ ಈ ನಕಾಶಗಳು ಪ್ರಾಥಮಿಕ ಪರಿಚಯ ಕೊಡುತ್ತವೆ. ಅದರಂತೆ ಇತರ ನಕ್ಷೆಗಳೂ ಇರುವುದುಂಟು. ಬಿಡಿ ಚಿತ್ರಗಳೂ ಚಿತ್ರಪುಸ್ತಕಗಳೂ ವರ್ಗೀಕರಿಸಲ್ಪಟ್ಟು ವಿಶೇಷ ಮುತುವರ್ಜಿಯಿಂದ ಇಡಬೇಕಾಗುವುದು.

### ಇತರ ಸಾಧನಗಳು

ಇಂಥದೇ ವಿಷಯವೆನ್ನದೆ ಆಗಾಗ ಬಗೆಬಗೆಯ ಪುಸ್ತಿಕೆಗಳೂ, ಚಿತ್ರಭಿತ್ತಿಗಳೂ ಬರುತ್ತವೆ. ಅದೇನು ಉಪಯೋಗಕ್ಕೆ ಬಾರದುದೆಂದು ಒಗೆಯುವಂತಿಲ್ಲ. ಅವುಗಳ ಉಪಯೋಗ ಹೀಗೇ ಬಂದೀತೆಂಬ ನಿಯಮವಿಲ್ಲ. ಅಂತೆಯೇ ಅವನ್ನು ಸಹಿತ ವ್ಯವಸ್ಥಿತವಾಗಿ ಇಡಬೇಕಾಗುವುದು. ಇವುಗಳನ್ನು ಫಾಯಿಲುಗಳಲ್ಲಿ ಹಾಕಿಡಲು ಅನುಕೂಲವಾಗುವ ಖಾನೆಗಳುಳ್ಳ ಪೆಟ್ಟಿಗೆಗಳೇ ದೊರೆಯುತ್ತವೆ. ಅಂಥ ಫಾಯಿಲುಗಳಿಗೆ ' ವ್ಹರ್ಟಿಕಲ್ ಫಾಯಿಲ್ಸ ' ಎಂದು ಹೆಸರು. ಇಂಥ ಹತ್ತಾರು ಫಾಯಿಲುಗಳನ್ನು ತಿರುವುಮುರುವಾಗಿ ಖಾನೆಯಲ್ಲಿ ಇಳಿಬಿಡಲಾಗುತ್ತದೆ. ಮೇಲ್ಗಡೆ, ಅದರ ಅಡ್ಡ ಪಟ್ಟಿಗೆ ಸಂಕ್ಷಿಪ್ತವಾಗಿ ವಿಷಯ

ವನ್ನು ಕಾಣಿಸಲಾಗಿದ್ದು, ಯಾವುದೊಂದು ಪುಸ್ತಿಕೆ ಬಂದೊಡನೆಯೇ ಅದನ್ನು ಆ ಆ ವಿಷಯದ ಫಾಯಿಲಿನಲ್ಲಿ ಇಳಿಬಿಟ್ಟರೆ ತೀರಿತು. ಇದರಲ್ಲಿ ಕಷ್ಟ ವೇನೆಂದರೆ, ಅನೇಕ ಬಗೆಯಾಗಿ ಪುಸ್ತಿಕೆಗಳು, ಪ್ರಕಟನೆಗಳು ಬರುವುದರಿಂದ ಅವುಗಳಲ್ಲಿ ಯಾವವುಗಳನ್ನು ಇಡುವುದು, ಯಾವುದನ್ನು ಬಿಡುವುದು, ಮತ್ತು ಎಷ್ಟು ದಿನ ಹೀಗೆ ಇಡಬೇಕು ಎಂಬುದಾಗಿದೆ. ಅದು ಗ್ರಂಥಾಲಯಕ್ಕೆ ಬರುವ ಓದುಗರ ಓದಿನ ಮಟ್ಟ, ಅಭಿರುಚಿಯನ್ನವಲಂಬಿಸಿರುತ್ತದೆಯೆನ್ನ ಬಹುದು. ಇಲ್ಲಿ ಸಂದರ್ಭ ಸಹಾಯಕ ತನ್ನ ವಿವೇಕವನ್ನು ಉಪಯೋಗಿಸ ಬೇಕಾಗುವುದು.

## ೩. ಕನ್ನಡದಲ್ಲಿ ಸಂದರ್ಭ ಸಾಹಿತ್ಯ

ಸಂದರ್ಭ ಸಾಹಿತ್ಯ ಕನ್ನಡದಲ್ಲಿ ಎಷ್ಟರ ಮಟ್ಟಿಗಿದೆಯೆಂದು ಪ್ರತ್ಯೇಕ ವಾಗಿ ಹೇಳುವ ಅಗತ್ಯ ಒಂದು ದೃಷ್ಟಿಯಿಂದ ತೋರುವುದಿಲ್ಲ. ಏಕೆಂದರೆ ಸಂದರ್ಭ ಪುಸ್ತಕಗಳು ಕನ್ನಡದಲ್ಲಿ ಇಲ್ಲ. ನಿಘಂಟುಗಳನ್ನು ಬಿಟ್ಟರೆ ಇಲ್ಲವೇ ಇಲ್ಲವೆಂದೂ ಹೇಳಬಹುದು. ಮತ್ತೆ ಈ 'ಇಲ್ಲ' ಎಂಬ ಮಾತೇ ಈ ಕುರಿತು ಪ್ರತ್ಯೇಕವಾಗಿ ಹೇಳಿ, ಅದರ ಆವಶ್ಯಕತೆಯನ್ನು ಮನಗಾಣಿಸುವುದು ಅಗತ್ಯ ವೆಂದು ತೋಚುತ್ತದೆ.

ಐತಿಹಾಸಿಕವಾಗಿ ನೋಡಿದರೆ ನಮ್ಮ ಹಿಂದಣವರು ಸಾಕಷ್ಟು ಸಂದರ್ಭ ಪುಸ್ತಕಗಳನ್ನು ಕೊಟ್ಟಿದ್ದಾರೆ. ಸಾಹಿತ್ಯದ ಹೊಸ ರೂಪವೆನ್ನಿಸಿ ಕೊಳ್ಳಬಹುದಾದ ಈ ಬಗೆಯ ಪುಸ್ತಕಗಳನ್ನು ೧೯ ನೆಯ ಶತಮಾನದಲ್ಲಿ ಕ್ರೈಸ್ತ ಮಿಶನರಿಗಳೂ ಇತರರೂ ಮಾಡಿದಷ್ಟು ಸಹಿತ ನಾವು ಮಾಡಲ್ಲಿಲ್ಲ ವೆಂಬುದು ನಾಚಿಕೆಗೇಡಿನ ಮಾತಾಗಿದೆ. ಇಂದು ಅನೇಕ ಸಂಸ್ಥೆಗಳಿವೆ ವಿಶ್ವವಿದ್ಯಾಲಯಗಳಿವೆ; ಆದರೆ ಅವುಗಳಿಂದ ಈ ಬಗೆಯ ರಚನಾತ್ಮಕ ಕಾರ್ಯಗಳು ಆಗಬೇಕಾದಷ್ಟು ಆಗಿಲ್ಲ. ಸಾಮಾನ್ಯವಾಗಿ ಜ್ಞಾನಲಾಲಸೆಯೂ, ಔದ್ಯೋಗಿಕ ಹಾಗೂ ವ್ಯಾವಹಾರಿಕ ಪ್ರಗತಿಯೂ ಆದ ಹಾಗೆಲ್ಲ ಸಂದರ್ಭ ಸಾಹಿತ್ಯ ಹುಟ್ಟಿಕೊಳ್ಳುತ್ತದೆ. ಈ ಅಂಶ ಕನ್ನಡಿಗರಲ್ಲಿ ಕಡಿಮೆಯೇ ಇದ್ದೆ, ಬೆಳೆದಿಲ್ಲ ಎಂದು ಸಮಾಧಾನ ಹೇಳಬಹುದಾದರೂ ತಾಳ್ಮೆಯಿಂದೊಡಗೂಡಿದ ದೀರ್ಘ ಉದ್ಯಮಶೀಲತೆಯೂ ಪರಿಶ್ರಮವೂ ನಮ್ಮಲ್ಲಿ ನೆರೆನಾಡಿಗರಿಗಿಂತ

ತೀರ ಕಡಿಮೆ ಇದೆ ಎನ್ನೋಣವೆ? ಅದಕ್ಕೆ ಬೇರೊಂದು ಕಾರಣವಿದೆ. ಏಳು ನೂರು ಪುಟದ ಕಾದಂಬರಿ ಬರೆಯುವುದಕ್ಕಿಂತ ೭೦ ಪುಟದ ಸಂದರ್ಭ ಸಾಹಿತ್ಯ ನಿರ್ಮಾಣ ಹೆಚ್ಚು ಕಷ್ಟದಾಯಕವಾದುದು; ಹೆಚ್ಚು ಪರಿಶ್ರಮ, ಕಾಲ, ಅಭ್ಯಾಸ ತಗಲುತ್ತವೆ. ರಾ. ಬ. ನರಸಿಂಹಾಚಾರ್ಯರ, ಶಿವರಾಮ ಕಾರಂತರಂತಹರ ವೈಯಕ್ತಿಕ ಯತ್ನಗಳು ನಮಗೆ ಹೆಮ್ಮೆ ತರುವಂತಹವಾದರೂ ಅಂತಹ ವ್ಯಕ್ತಿಗಳು ಹತ್ತಾರು ಜನ ಸಿಗುವುದುಂಟೇ. ಆದುದರಿಂದ ವಿದ್ಯಾಸಂಸ್ಥೆಗಳು, ಸಾರ್ವಜನಿಕ ಸಂಘಗಳು, ವ್ಯಾಪಾರ ಮಂಡಲಗಳು ಈ ಕಾರ್ಯದಲ್ಲಿ ಮುಂದೆ ಬರಬೇಕಾಗಿದೆ. ಇದು ಎಲ್ಲರಿಗೆ ಅಗತ್ಯವಿರುವ ಒಂದು ಬೇಡಿಕೆ. ಮಾಡಿದ ಪ್ರಯತ್ನ ಮಾಸುವಂತಹದಲ್ಲ. ಓದಿ ಬಿಟ್ಟುಬಿಡುವ ವರ್ತಮಾನಪತ್ರದ ಹಾಗಲ್ಲವಿದು.

## ಹಳಗನ್ನಡದಲ್ಲಿ

ಹಿಂದಿನ ಕನ್ನಡ ಚರಿತ್ರೆಯಲ್ಲಿ ಪಂಪ, ರನ್ನ, ಕುಮಾರವ್ಯಾಸರಂತಹರ ಮಹಾಕಾವ್ಯಗಳೂ, ಶಬ್ದಮಣಿದರ್ಪಣದಂತಹ ವ್ಯಾಸಂಗ ಗ್ರಂಥವೂ, ಇವುಗಳ ಜೊತೆಗೇ ಸಂದರ್ಭ ಪುಸ್ತಕಗಳು ಎಂಬ ಪದವನ್ನು ಯಾವ ಅರ್ಥದಲ್ಲಿ ಉಪಯೋಗಿಸುತ್ತೇವೆಯೋ ಅಂಥ ಪುಸ್ತಕಗಳೂ ರಚಿಸಲ್ಪಟ್ಟುದು ಕಂಡು ಬರುತ್ತದೆ. ಆದರೆ ಅವೆಲ್ಲ ಹೆಚ್ಚಾಗಿ ನಿಘಂಟುಗಳೇ. ಶಬ್ದಸಂಪತ್ತು ಬೆಳೆದ ಹಾಗೆಲ್ಲ, ಮತ್ತು ಶಬ್ದಗಳಿಗೆ ವಿವಿಧಾರ್ಥಗಳು ಬರತೊಡಗಿದಾಗ ಶಬ್ದಕೋಶಗಳ ಅಗತ್ಯವೆನಿಸಿ ನಮ್ಮವರು ರಚಿಸಿದ್ದುಂಟು. ಇದಲ್ಲದೆ ವೈಯಾಕರಣಿಗಳು ಶಬ್ದಕ್ಕೆ ಬಹಳ ಮಹತ್ವ ಕೊಟ್ಟಿದ್ದಾರೆ. ಶಬ್ದಗಳೂ ಅವುಗಳ ಅರ್ಥವೂ ತಿಳಿಯದೇ ಕಾವ್ಯಾಭ್ಯಾಸವೆಂತು ಸಾಧ್ಯ, ಎಂಬುದಾಗಿ ಶಬ್ದಕೋಶಗಳು ನಮ್ಮಲ್ಲಿ ವೆಗ್ಗಳವಾಗಿ ಹುಟ್ಟಿಕೊಂಡಿವೆ. ಈ ಒಂದು ಪ್ರಮೇಯವನ್ನುಳಿದು ಬೇರೆ ದೃಷ್ಟಿಯಲ್ಲಿ ಸಂದರ್ಭ ಸಾಹಿತ್ಯವನ್ನು ಹಿಂದಣವರು ಗಣಿಸಿದಂತಿಲ್ಲ. ಆದರಿಂದಾಗಿ ಬೇರೆ ಬಗೆಯ ಸಂದರ್ಭ ಸಾಹಿತ್ಯದ ನಿರ್ಮಾಣವೂ ಆಗಿಲ್ಲ.

ಪ್ರಾಚೀನ ಶಬ್ದಕೋಶಗಳ ಐತಿಹಾಸಿಕ ನೋಟವು ಮನರಂಜಕವೆನ್ನಿಸುವಂತಾಗಿದೆ. ಸಂಸ್ಕೃತದಿಂದ ಹೇರಳವಾಗಿ ಪದಗಳು ಬರತೊಡಗಿದುದರಿಂದ ಅವುಗಳ ಅರ್ಥವನ್ನು ಕೊಡುವ ಅಗತ್ಯವೆನಿಸಿ ಸಂಸ್ಕೃತ-ಕನ್ನಡ

ಕೋಶಗಳು ರಚಿತವಾದುವು; ಅನಂತರ ನಡುಗನ್ನಡ ಕಾಲದಲ್ಲಿ ಸಂಸ್ಕೃತ ಹಾಗೂ ಹಳಗನ್ನಡ, ಎರಡೂ ಪದಗಳ ಅರ್ಥ ಜನದ ಮನದಲ್ಲಿ ಮಾಸುವಂತೆ ಕಂಡುಬಂದಾಗ, ಕನ್ನಡ-ಕನ್ನಡ ನಿಘಂಟುಗಳು ಹೊರಬಂದುವು. ಆದರೆ ಕನ್ನಡವೂ ಮೇಲು ಎಂಬುದಾಗಿ ಕನ್ನಡ-ಸಂಸ್ಕೃತಗಳನ್ನು ಬರೆದ ಅಭಿಮಾನಿಗಳ ಎತ್ತುಗಡೆ ಮೆಚ್ಚಬೇಕಾಗುವಂತಹದೇ.

ಹಳಗನ್ನಡದ ಪ್ರಮುಖ ನಿಘಂಟುವಿನ ಕರ್ತೃವೆಂದರೆ ೨ ನೆಯ ನಾಗವರ್ಮ. ಮೊದಲಿಗೆ ಅವನು ಹಲಾಯುಧನ ಸಂಸ್ಕೃತ ಶಬ್ದಕೋಶಕ್ಕೆ ಕನ್ನಡ ಟೀಕೆಯನ್ನು ಬರೆದ. ಅಷ್ಟು ಸಾಲದೆ ಹಲಾಯುಧನ ನೆರವನ್ನೇ ಮುಖ್ಯವಾಗಿ ತೆಗೆದುಕೊಂಡರೂ, ಇತರ ಕೆಲವು ಸಂಸ್ಕೃತ ಕೋಶಕಾರರನ್ನು ಅಳವಡಿಸಿಕೊಂಡು 'ಅಭಿಧಾನ ವಸ್ತುಕೋಶ'ನೆಂಬ ಸಂಸ್ಕೃತ-ಕನ್ನಡ ಕೋಶವನ್ನು ಕೊಟ್ಟಿದ್ದಾನೆ. ಅವನ ಈ ಎರಡೂ ಕೃತಿಗಳನ್ನು ಮದ್ರಾಸ ವಿಶ್ವವಿದ್ಯಾಲಯದವರು ಪ್ರಕಟಿಸಿದ್ದಾರೆ. ಅನಂತರದಲ್ಲಿ ಸಂಸ್ಕೃತ-ಕನ್ನಡ ನಿಘಂಟನ್ನು ಬರೆದವ ಅಭಿನವ ಮಂಗರಾಜ. ಷಟ್ಪದಿಯಲ್ಲಿ ಬರೆದ ಇವನ ಗ್ರಂಥದಲ್ಲಿ ಕಾವ್ಯದ ಸೊಬಗಿದೆ. ದೇವೋತ್ತಮನ ನಾನಾರ್ಥ ರತ್ನಾಕರವು ೧೬ ನೆಯ ಶತಮಾನದ ಆದಿಯಲ್ಲಿ ಬರೆದುದಾಗಿದೆ. ಇವರಲ್ಲದೆ ಕೆಲವರು ಅಮರಕೋಶಕ್ಕೂ ಇತರ ಸಂಸ್ಕೃತ ಕೋಶಗಳಿಗೂ ಟೀಕೆಯನ್ನು ಬರೆದವರುಂಟು.

ಆದರೆ ಬೊಮ್ಮರಸನ (೧೪೫೦) 'ಚತುರಾಸ್ಯ ನಿಘಂಟಿ'ಗೆ ವಿಶಿಷ್ಟ ಸ್ಥಾನವಿದೆ. ಚಿಕ್ಕದಾದರೂ ಕನ್ನಡ ಹಾಗೂ ತದ್ಭವಗಳಿಗೆ ಸಂಸ್ಕೃತ ಪದಗಳನ್ನು ಅದು ಕೊಡುತ್ತದೆ. ಇತ್ತ ಕನ್ನಡ-ಕನ್ನಡ ನಿಘಂಟುಗಳಲ್ಲಿ 'ರನ್ನಕಂದ'ವೇ ಪ್ರಾಚೀನವಾದುದು. ಆ ಮೇಲಿನ 'ಕರ್ನಾಟಕ ಶಬ್ದಸಾರ'ವು ಇತರ ನಿಘಂಟುಗಳಂತೆ ಪದ್ಯದಲ್ಲಿರದೆ ವಚನರೂಪವಾಗಿದೆ. ಇದು ಅಲ್ಲದೆ ತೋಂಟದಾರ್ಯನ 'ಶಬ್ದಮಂಜರಿ'ಯೂ ಲಿಂಗಮಂತ್ರಿಯ 'ಕಬ್ಬಿಗರ ಕೈಪಿಡಿ'ಯೂ, ಸೂರ್ಯದೇವನ 'ಕವಿಕಂಠಹಾರ'ವೂ, ಈ ಬಗೆಯ ನಿಘಂಟುವಿನ ಜಾತಿಗೆ ಸೇರಿದುವು. ಕೊನೆಯದಾಗಿ, ಮುಳುಗುತ್ತಿರುವ ೞ ೞ, ಕುಳ ಕ್ಷಳಗಳಿಗೆ ಜೀವ ತುಂಬಿಸಲೆಳಸಿದ 'ಕರ್ನಾಟಕ ಸಂಜೀವನ'ದ ಹೆಸರು ಹೇಳಿ ಈ ಪಟ್ಟಿಯನ್ನು ಮುಗಿಸಬಹುದು.

ನಿಘಂಟು ಎಂದರೆ ಸಾಮಾನ್ಯವಾಗಿ ನಮಗೆ ತಿಳಿಯದ ಶಬ್ದಕ್ಕೆ ಅರ್ಥವನ್ನು ಹೇಳುವಂತಹವು ಎಂದು ತಿಳಿದಿದ್ದೇವಷ್ಟೆ. ಈ ಗ್ರಂಥಗಳು ಆ ದೃಷ್ಟಿಯಲ್ಲಿ ರಚಿತವಾದವುಗಳಲ್ಲ. ಶಬ್ದಗಳಿಗೆ ವಿವಿಧ ಅರ್ಥಗಳನ್ನು ಕೊಡಬೇಕೆಂಬುದೂ, ಪೌರಾಣಿಕ ಅಂಕಿತನಾಮಗಳ ಇತರ ರೂಪಗಳನ್ನು ಹೇಳುವುದೂ ಅವುಗಳ ಮೂಲ ಉದ್ದೇಶವಾಗಿತ್ತು. ಅಂತೆಯೇ ಅವುಗಳ ವಿಷಯ ಸಂಯೋಜನೆಯೂ ತೀರ ಸ್ಪಷ್ಟವಾಗಿ ಅಕಾರಾದಿಯಾಗಿರಲಿಲ್ಲ. ನಿಘಂಟುಗಳಲ್ಲಿ ಪ್ರಕರಣಗಳಿವೆ! ಉದಾ: ನಾಗವರ್ಮನಲ್ಲಿ ಸ್ವರ್ಗ, ಭೂಮಿ, ಪಾತಾಳ, ಸಾಮಾನ್ಯ, ನಾನಾರ್ಥಕಾಂಡಗಳೆಂದು ಇವೆ. ಆ ಮಟ್ಟಿಗೆ ಇವು ವಿಶಿಷ್ಟ ನಿಘಂಟುಗಳೆನ್ನಬೇಕು. ಕೊನೆಯದಾಗಿ ಹೇಳಿದರೂ, ಇನ್ನೂ ವಿಶಿಷ್ಟವಾಗಿದ್ದುಕೊಂಡು ಒಂದು ಶಾಸ್ತ್ರೀಯ ವಿಷಯದ ಮೇಲಿನ ಎಲ್ಲ ಪದಗಳನ್ನು ಕೊಟ್ಟಿರುವ ಅಪ್ರತಿಮ ಗ್ರಂಥವೆಂದರೆ 'ಓಷಧಿಕೋಶಂ.' ಇವರಲ್ಲಿ ಔಷಧಕ್ಕೆ ಸಂಬಂಧಪಟ್ಟ ಶಬ್ದಗಳಲ್ಲದೇ ಪಶು, ಪಕ್ಷಿ, ಮೃಗಾದಿ ವಾಚಕಗಳೂ ಸೇರಿ ಒಟ್ಟಿಗೆ ೧೨ ಸಾವಿರ ಶಬ್ದಗಳಿವೆ. ಅವೆಲ್ಲ ಹೆಚ್ಚಾಗಿ ಸಂಸ್ಕೃತದವೇ ಇದ್ದರೂ ಲೇಖಕನ ಸಂಗ್ರಾಹಕ ಶಕ್ತಿಯು ಪ್ರಶಂಸನೀಯವಾಗಿದೆ.

## ಹೊಸಗನ್ನಡ ಶಬ್ದಕೋಶಗಳು

ಹೊಸಗನ್ನಡದ ಉದಯ ಕ್ರೈಸ್ತ ಮಿಶನರಿಗಳ ಮೂಲಕವೇ ಆಯಿತಷ್ಟೆ. ೧೯ನೆಯ ಶತಕದ ಆದಿಯಲ್ಲಿ ಹಳಗನ್ನಡ ಸಾಹಿತ್ಯ ರಾಶಿಯನ್ನು ಒಟ್ಟುಗೂಡಿಸುವ ಹಾಗೂ ವ್ಯವಸ್ಥಿತಗೊಳಿಸುವ ಯತ್ನ ನಡೆಯಿತು. ಆದರ ಜೊತೆಗೆ ಆ ಸಾಹಿತ್ಯರಾಶಿಯ ಶಬ್ದಸಂಪತ್ತಿಗೂ ಮಿಶನರಿಗಳು ಮಾರು ಹೋದರು. ಹಾಗೆ ಬೆರಗುವಡೆದು, ಜಿಜ್ಞಾಸೆಯಿಂದ ಶಬ್ದಕೋಶದ ರಚನೆಗೆ ತೊಡಗಿದವರಲ್ಲಿ ರೆವ್ಹರೆಂಡ್ ರೀವ್ಸ ಅವರೇ ಮೊದಲಿಗರು. ೧೮೩೨ ರಷ್ಟು ಹಿಂದೆಯೇ ರೀವ್ಸ ಅವರು ಕನ್ನಡ-ಇಂಗ್ಲಿಷ ಮತ್ತು ಇಂಗ್ಲಿಷ-ಕನ್ನಡ, ಹೀಗೆ ಎರಡು ಹೆಬ್ಹೊತ್ತಿಗೆಗಳನ್ನು, ಲಿಥೋ ಮುದ್ರಣದಲ್ಲಿಯೇ ಆಗಲಿ, ಒದಗಿಸಿದ್ದಾರೆ. ರೀವ್ಸರ ಉದ್ದೇಶ ಕನ್ನಡ ಸಾಹಿತ್ಯದಲ್ಲಿಯ ಮೂಲಶಬ್ದಗಳನ್ನೂ, ಅವುಗಳ ಸಾಧಿತಗಳನ್ನೂ ಕೊಡಬೇಕೆಂದಿತ್ತು. ಅದಕ್ಕಾಗಿ ಬಳಕೆಯಲ್ಲಿಲ್ಲದ ಪದಗಳನ್ನೂ, ಪರಭಾಷೆಯ ಶಬ್ದಗಳನ್ನೂ ಸೇರಿಸಿಕೊಂಡು ೧೫೦೦ ಪುಟಗಳ ಕನ್ನಡ-ಇಂಗ್ಲಿಷ ನಿಘಂಟನ್ನು ಬರೆದಿದ್ದಾರೆ.

ರೀವ್ಸರ ಯತ್ನವೇ ಕಿಟೆಲ್ ಸಾಹೇಬರ ಇಂದಿನ ಪ್ರಮಾಣಗ್ರಂಥವಾದ ಕನ್ನಡ–ಇಂಗ್ಲಿಷ ನಿಘಂಟಿಗೆ ಹಾದಿ ಹಾಕಿಕೊಟ್ಟಿತು. ರೀವ್ಸರು ಶಬ್ದ ಸಂಗ್ರಹದ ರೀತಿಯನ್ನು ಕಿಟೆಲ್‌ರವರಿಗೆ ತೋರಿಸಿಕೊಟ್ಟಂತಾಯಿತು. ಆದರೆ ಕಿಟೆಲ್‌ರವರದು ಹೆಚ್ಚು ಪರಿಶುದ್ಧವಾದ, ವಿಸ್ತೃತವಾದ ಹಾಗೂ ಹೆಚ್ಚು ಶಾಸ್ತ್ರೀಯವಾದ ಕೃತಿಯಾಯಿತು. ಅದನ್ನು ಮೀರಿಸುವ ಕನ್ನಡ–ಇಂಗ್ಲಿಷ ನಿಘಂಟೇ ಇದುವರೆಗೆ ಬಂದಿಲ್ಲ. ರೀವ್ಸರ ಕ್ಲಿಷ್ಟ ಪದಗಳನ್ನೆಲ್ಲ ಬಿಟ್ಟುಕೊಟ್ಟು, ಇನ್ನೂ ಅನೇಕ ಮಹಾಕಾವ್ಯಗಳಿಂದ ಪದಗಳನ್ನು ಹೆಕ್ಕಿ ತೆಗೆದು ಅವಕ್ಕೆ ಉದಾಹರಣೆಗಳನ್ನು ಕೊಡುತ್ತ, ರೆ. ಕಿಟೆಲ್ಲರು ರಚಿಸಿದ್ದಾರೆ. ಈ ಕೃತಿಶಬ್ದಗಳ ಉತ್ಪತ್ತಿಯನ್ನೂ, ಇತರ ಸಾಧಿತ ಪದಗಳನ್ನೂ ಹೇಳಹೊರಟು, ಭಾಷಾಭ್ಯಾಸಕ್ಕೆ ದಾರಿ ಹಾಕಿಕೊಟ್ಟಿದ್ದಾರೆ. ೧೭೫೨ ಪುಟಗಳಷ್ಟು ಈ ಹಿರಿಹೊತ್ತಿಗೆಯು ಪ್ರವಾಹ ಹರಿದುಬಂದಿದ್ದರೂ, ತಮ್ಮ ಕೃತಿ ಅಪೂರ್ಣವೆಂದು ವಿನಯಶೀಲವಾಗಿ, ಪ್ರಾಂಜಲ ಬುದ್ಧಿಯಿಂದ ಒಪ್ಪಿಕೊಂಡಿದ್ದಾರೆ. ಅದು ನಿಜವಹುದು. ಅಷ್ಟಲ್ಲದೇ ಈಚೆಗೆ ಕನ್ನಡದಲ್ಲಿ ಸೇರಿರುವ ಪದಗಳನ್ನೂ ಸೇರಿಸಿ, ಕಿಟೆಲ್ಲರವರ ಸುಧಾರಿತ ಎರಡನೆಯ ಆವೃತ್ತಿಯನ್ನು ಇಂದು ಯಾರಾದರೂ ಕೈಕೊಳ್ಳುವುದು ಅಗತ್ಯವಾಗಿದೆ.

ಮಂಗಳೂರ ಮಿಶನರಿಗಳಿಂದ ಕನ್ನಡದ ಪುನರುಜ್ಜೀವನ ನಡೆದಾಗ ಅದರಿಂದ ಪ್ರೇರಿತರಾಗಿ ದೇಶೀಯ ಪಂಡಿತರೂ, ಉತ್ತರ ಕರ್ನಾಟಕದಲ್ಲಿ ಹಾಗೂ ಮೈಸೂರಿನಲ್ಲಿ ತಮ್ಮ ಯೋಗ್ಯತೆಗೆ ತಕ್ಕಂತೆ ಈ ಕೈಂಕರ್ಯವನ್ನು ಕೈಕೊಂಡರು. ಅದಕ್ಕೆ ಉದಾಹರಣೆಯಾಗಿ ೧೮೮೫ ರಲ್ಲಿ ಪ್ರಕಟವಾದ, ರಾಮಸ್ವಾಮಿ ಶಾಸ್ತ್ರಿ ಹಾಗೂ ಹೊನ್ನಪ್ಪನವರ 'ಕರ್ನಾಟಕ ಕಲ್ಪದ್ರುಮ'ವನ್ನು ನೋಡಬಹುದು. ೬೧೧ ಪುಟಗಳ ಈ ನಿಘಂಟುವಿನ ಪ್ರತಿಪುಟಕ್ಕೆ ಎರಡು ಭಾಗಗಳನ್ನು ಮಾಡಿ, ಒಂದು ಬದಿಗೆ ಶಬ್ದವನ್ನೂ, ಅದರ ವ್ಯಾಕರಣ ಹಾಗೂ ಅರ್ಥವನ್ನೂ ಕೊಟ್ಟು ಇನ್ನೊಂದು ಬದಿಗೆ ಪ್ರಯೋಗವನ್ನೂ ಇತರ ರೂಪಗಳನ್ನೂ ಕೊಟ್ಟಿರುವ ವಿಶಿಷ್ಟ ಕೋಶವಾಗಿದೆ. ಅದರಂತೆ ಉತ್ತರ ಕರ್ನಾಟಕದಲ್ಲಿ ಶ್ರೀ. ಜಿ. ವ್ಹಿ. ಮೋಹರೆ ಎಂಬವರ ಕೃತಿಯೂ, ರೀವ್ಸರವರನ್ನು ಸ್ಪಷ್ಟವಾಗಿ ಅನುಸರಿಸಿದ ಗಂಗಾಧರ ಮಡಿವಾಳೇಶ್ವರರ 'ಶಬ್ದಮಂಜರೀ ಕೋಶ'ವೆಂಬ ಕೃತಿಯೂ ಬೆಲೆಯಲ್ಲಿ ಕಿರಿದೆನಿಸಬಹುದಾದರೂ, ಉತ್ತರ

ಕರ್ನಾಟಕದ ವಿಶಿಷ್ಟ ಅರ್ಥಸರಣಿಯನ್ನು ಕೊಡುವಲ್ಲಿ ಕಿಟೆಲ್ಲ ಮುಂತಾದವರಿಗೆ ಬಹಳ ನೆರವಾದುವು.

ಇಂಗ್ಲಿಷ-ಕನ್ನಡ ನಿಘಂಟಿನಲ್ಲಿ ರೆ. ಝೀಗ್ಲರ್ ಅವರ ಕೃತಿಯೇ ಪ್ರಾಚೀನವಾದುದು. ೧೮೭೬ ರಷ್ಟು ಹಳೆಯದಾದರೂ ೭-೮ ಮುದ್ರಣಗಳನ್ನು ಕಂಡು ಅದು ಇಂದಿಗೂ ಬಳಕೆಯಲ್ಲಿರುವ ಗ್ರಂಥವಾಗಿದೆ. ಮತ್ತೆ ಅದಕ್ಕಿರುವ ಹೆಸರು 'ಶಾಲಾನಿಘಂಟು' ಎಂಬುದಾಗಿ! ಯಾರ ಹೆಸರನ್ನು ಝೀಗ್ಲರ್ ಮತ್ತು ಕಿಟೆಲ್ಲ ಅವರು ಅತ್ಯಂತ ಗೌರವಪೂರ್ವಕವಾಗಿ ತೆಗೆದುಕೊಳ್ಳುತ್ತಾರೋ ಅಂಥ 'ಕ್ರಿಸ್ತಾನುಜ ವತ್ಸ' ಎಂಬವರೂ 'ಆಂಗ್ಲೋ-ಕನ್ನಡ ಕ್ರಾನ್ ಡಿಕ್ಸನರಿ' ಎಂಬ ಒಂದು ಕೋಶವನ್ನು ಕನ್ನಡಕ್ಕೆ ಕೊಟ್ಟಿದ್ದಾರೆ.

ಆದರೆ ಆ ಕಾಲದಲ್ಲಿಯ ಉಲ್ಲಾಳ್ ನರಸಿಂಗರಾಯರ (೧೮೯೧) ಒಂದು ವಿಶಿಷ್ಟ ಶಬ್ದಕೋಶವಿದೆ. ಅದರಲ್ಲಿ ರಾಜ್ಯಭಾರ, ಶಾಸ್ತ್ರ, ವ್ಯಾಪಾರ ಮುಂತಾಗಿ ಒಟ್ಟು ೨೮ ವರ್ಗೀಕೃತ ವಿಭಾಗಗಳನ್ನು ಮಾಡಿ ಅವುಗಳಡಿಯಲ್ಲಿ ಆ ಆ ಶಬ್ದಸಂಗ್ರಹವನ್ನು ಕೊಟ್ಟಿದ್ದಾರೆ. ಆದರೆ ಶಬ್ದದ ಅನಾವಶ್ಯಕ ಹುಡುಕಾಟವಾಗಬಾರದೆಂದು ಅಕಾರಾದಿ ಸೂಚಿಕೆಯನ್ನೂ ಕೊಟ್ಟಿದ್ದಾರೆ. ಒಟ್ಟಿನಲ್ಲಿ ಅದು ಇರುವುದು ೨೩೫ ಪುಟಗಳಷ್ಟು ಮಾತ್ರ. ಇನ್ನೊಂದು ಇಂಥ ವಿಶಿಷ್ಟ ಗ್ರಂಥವೆಂದರೆ ನಾನಾರ್ಥ ಶಬ್ದಾವಳಿ (೧೮೯೫). ಇದರಲ್ಲಿ 'ಕೆಲವು' ಕನ್ನಡ ಪದಗಳಿಗೆ ಸಮಾನಾರ್ಥಗಳನ್ನೂ, ಸಂಜ್ಞಾರ್ಥಗಳನ್ನೂ ಕೊಡಲಾಗಿದೆ. 'ಹ' ಎಂಬ ಶಬ್ದಕ್ಕೆ ೨೬ ಅರ್ಥಗಳನ್ನು ಅವರು ಕೊಟ್ಟಿದ್ದಾರೆ!

ಶಾಸ್ತ್ರೀಯ ಶಬ್ದಗಳಿಗಾಗಿ ಈಚೆಗೆ ಎಂದರೆ ೧೯೨೩ ರಲ್ಲಿ ಮೈಸೂರು ವಿದ್ಯಾ ಇಲಾಖೆಯವರಿಂದ ಪ್ರಕಟಿತವಾದ 'ಕನ್ನಡ ಪಾರಿಭಾಷಿಕ ನಿಘಂಟು' ಇದೆ. ಬರೆದವರು ಮೈಸೂರಿನ ಭಾಷಾಂತರ ಕಚೇರಿಯಲ್ಲಿದ್ದ ಪಂಡಿತ ಕೆ. ಆರ್. ಚಕ್ರವರ್ತಿ ಎಂಬವರು. ಅದರಲ್ಲಿ ಎಲ್ಲಾ ಶಾಸ್ತ್ರಗಳಿಂದಲೂ ಶಬ್ದಗಳನ್ನು ತೆಗೆದುಕೊಂಡಿದೆಯಾಗಿ ಹೇಳಲಾಗಿದೆ. ಮತ್ತು ತಮಿಳು, ಕನ್ನಡ ಎರಡರಲ್ಲಿಯೂ ಇದು ಪ್ರಥಮ ಕೃತಿ ಎಂದೂ ಹೇಳಿಕೊಂಡಿದ್ದಾರೆ. ಇಂಗ್ಲಿಷ ಪದಕ್ಕೆ ಸಮಾನಾರ್ಥ ಪದಗಳನ್ನು ಕೊಡುವಲ್ಲಿ, ನೂರಕ್ಕೆ ೯೦ ರಷ್ಟು ಸಂಸ್ಕೃತ ಪದಗಳೇ ಇವೆ. ಒಂದೊಂದು ಪದಕ್ಕೆ ಒಂದೊಂದೇ ಸಮಾನಪದ

ವಿದ್ದು, ಯೋಜನೆ ಸಂಕ್ಷಿಪ್ತವಾಗಿದೆ. ಮತ್ತು ಅವರು ಹೇಳಿರುವ ಹಾಗೆ ಎಲ್ಲ ಶಾಸ್ತ್ರಗಳ ಪದಗಳೇನು ಅದರಲ್ಲಿ ಬಂದಿಲ್ಲ.

ನಿಘಂಟುವಿನ ಈಚಿನ ಪ್ರಯತ್ನಗಳಲ್ಲಿ ಭಾರದ್ವಾಜ ಶಾಲೋಪಯೋಗಿ ಹಾಗೂ ವ್ಯಾವಹಾರಿಕವಾದ ಸ್ಟ್ಯಾಂಡರ್ಡ್ ಡಿಕ್ಷನರಿ, ಮೈಸೂರ ವಿಶ್ವವಿದ್ಯಾಲಯದ ಇಂಗ್ಲಿಷ–ಕನ್ನಡ ನಿಘಂಟು ಹಾಗೂ ಕಾರಂತರ ಸಿರಿಗನ್ನಡ ಅರ್ಥಕೋಶ ಮುಖ್ಯವಾದುವಾಗಿವೆ. ಭಾರದ್ವಾಜರ ಕೃತಿಯು ಮೂಲತಃ ವಿದ್ಯಾರ್ಥಿವೃಂದಕ್ಕಾಗಿ ಹೊರಟಂತಹದು. ಆಕ್ಸಫರ್ಡ ನಿಘಂಟಿನಿಂದ ೨೪ ಸಾವಿರಗಳಷ್ಟು ಪದಗಳನ್ನು ಆರಿಸಿ, ಅವುಗಳ ಆದಿಪ್ರತ್ಯಯ, ಅಂತ್ಯಪ್ರತ್ಯಯಗಳು' ಪಾಶ್ಚಾತ್ಯ ಅಂಕಿತನಾಮಗಳು ಹಾಗೂ ಪುರಾಣಗಳಲ್ಲಿ ಬರುವ ಕೆಲ ಹೆಸರುಗಳನ್ನು ಸಹಿತ ಸೇರಿಸಿ ಶುದ್ಧ ವ್ಯಾವಹಾರಿಕ ದೃಷ್ಟಿಯನ್ನಿಟ್ಟುಕೊಂಡು ಬರೆಯಲಾಗಿದೆ. ಅಂತೆಯೇ ಅದನ್ನು ಉಪಯೋಗಿಸುವವರ ಬಳಗ ವಿದ್ಯಾರ್ಥಿವೃಂದವನ್ನು ದಾಟಿ ಮುಂದರಿದಿದೆ.

ಮೈಸೂರು ವಿಶ್ವವಿದ್ಯಾಲಯದವರ ಕೋಶವು ಒಂದಲ್ಲ, ೧೫ ವರ್ಷಗಳ ದುಡಿಮೆಯ ಫಲ. ಬಹಳ ವ್ಯಾಪಕವಾದ ಯೋಜನೆಯನ್ನಿಟ್ಟು ಕೊಂಡು ಜಾಗ್ರತೆಯಿಂದ ಕೆಲಸ ಮುಂದುವರಿಯಿತು. 'ಸಾಮಾನ್ಯ ವಾಚಕನಿಗೆ ಪ್ರಚಲಿತ ಇಂಗ್ಲಿಷ ಜ್ಞಾನವನ್ನು ಪ್ರಚಲಿತ ಕನ್ನಡದಲ್ಲಿ ತಿಳಿಸುವುದು' ಅವರ ಮುಖ್ಯ ಗುರಿಯಾಗಿತ್ತು. ವಿಶ್ವವಿದ್ಯಾಲಯದ ವಿದ್ವನ್ಮಣಿಗಳೆಲ್ಲರೂ ಇದರಲ್ಲಿ ಶ್ರಮಿಸಿದ್ದಾರೆ. ಕನ್ನಡದ ಪ್ರಾತಿನಿಧಿಕ ಸ್ವರೂಪ ಬರಬೇಕಾಗಿ ಕಮಿಟಿಯಲ್ಲಿ ಧಾರವಾಡ, ಮಂಗಳೂರುಗಳಿಂದ ಒಬ್ಬೊಬ್ಬ ಸದಸ್ಯರನ್ನು ಸೇರಿಸಿಕೊಂಡು ಸಹಾಯ ಪಡೆದಿದ್ದಾರೆ. ನಿಘಂಟುವಿನ ಯೋಜನೆಯ ವಿಚಾರದಲ್ಲಿ ಇವರಿಗೆ ಅರ್ಥಭಾಗದಲ್ಲಿ ಇಂಗ್ಲಿಷಿನ ಹೊಳಹು ಇದ್ದೇ ಇದ್ದಿತು. ಮುಖ್ಯವಾಗಿ ಕನ್ನಡ ಪದಗಳನ್ನು ಒದಗಿಸಿದುದೇ ಅವರ ಹಿರಿದಾದ ಹೊಣೆ ಎನ್ನಬೇಕು. ಇಂಗ್ಲಿಷ ಶಬ್ದಕ್ಕೆ ಪ್ರತಿಯಾಗಿ ಒಂದು ಕನ್ನಡ (ಸಂಸ್ಕೃತ) ಪದ ಕೊಡುವಷ್ಟಕ್ಕೆ ನಿಲ್ಲದೆ ಅದರ ಅರ್ಥವಿವರಣೆಯನ್ನೂ ಮಾಡಹೋಗಿದ್ದಾರೆ. ಆದರೆ ವಿಶಿಷ್ಟ ಶಬ್ದಗಳಿಗೆ ಚಿತ್ರಗಳಿಲ್ಲದಿರುವುದು ಇದರ ಒಂದು ಕೊರತೆ ಎನ್ನಬೇಕು. ಉಚ್ಚಾರಗಳ ಜಗಯಲ್ಲಿ ಮುದ್ರಣ ವಿಚಾರದಲ್ಲಿ ಬಹಳ ಪರಿಷ್ಕೃತ ಕಾರ್ಯವಾಗಿದೆ.

ಕಾರಂತರ 'ಸಿರಿಗನ್ನಡ ಅರ್ಥಕೋಶ' ಚಿಕ್ಕದಾದರೂ ಚೊಕ್ಕವಾದ ಕೃತಿ. ಸಾಹಿತ್ಯ ಮತ್ತು ಬಳಕೆಯ ಭಾಷೆಯಿಂದ ಆರಿಸಿದ ಪದಗಳಲ್ಲದೆ, ಅನೇಕ ಪೌರಾಣಿಕ, ವೈದಿಕ ಪದಗಳನ್ನೂ ಸೇರಿಸಲಾಗಿದೆ. ಸುಲಭಗವ್ಯ ವಾದ ಕನ್ನಡ ಕನ್ನಡ ನಿಘಂಟು ಇದೊಂದೇ.

ಇಂಗ್ಲಿಷವನ್ನು ಬಿಟ್ಟರೆ ಇತರ ಭಾಷೆಗಳ ನಿಘಂಟುಗಳು ಕನ್ನಡದಲ್ಲಿ ಇಲ್ಲ. ಆದರೆ ಈಚೆಗೆ ಧಾರವಾಡದ ರಾಮಾಶ್ರಯ ಬುಕ್ ಡಿಪೋದವರು ಪ್ರಕಟಿಸಿದ 'ಹಿಂದೀ-ಹಿಂದೀ-ಕನ್ನಡ ರತ್ನಕೋಶ'ವು ಬಹು ಬೆಲೆಯುಳ್ಳ ಕೃತಿ. ಇನ್ನೂ ಒಂದೆರಡು ಹಿಂದೀ-ಕನ್ನಡ ಕೋಶಗಳಿವೆ. ಆದರೆ ಹಿಂದೀ ಯೊಂದನ್ನು ಬಿಟ್ಟರೆ ಇತರ ನೆರೆಯ ಭಾಷೆಗಳ ಶಬ್ದಗಳ ನಿಘಂಟು ಇಲ್ಲದುದು ಒಂದು ನ್ಯೂನತೆಯೆನ್ನಬೇಕು.

## ಇತರ ಕೋಶಗಳು

ಶಬ್ದಕೋಶಗಳ ನಂತರ ವಿಶ್ವಕೋಶಗಳಿಗೆ ಬರಬೇಕಷ್ಟೆ. ಕನ್ನಡದಲ್ಲಿ ಏಕಮೇವ ಕೃತಿ ಕಾರಂತರ 'ಬಾಲಪ್ರಪಂಚ'ದ ಮೂರು ಸಂಪುಟಗಳು. ಎಂಟನೆಯ ಕ್ಲಾಸನ್ನು ಪಾಸಾಗಿರುವ ಬಾಲಕರಿಗೆ ಇರಲೆಂದು ಈ ಪುಟ್ಟ ಪ್ರಪಂಚವನ್ನು ಕೊಡಬಯಸಿದ್ದಾರೆ ಕಾರಂತರು. ಆದರೆ ಅದರ ಹಿಂದೆ ಲೇಖಕರ ಸಂತತ ಪರಿಶ್ರಮ ಅನಿಸುವಂತಿದೆ. ಲೇಖನ ಕಾರ್ಯವಲ್ಲದೆ ಚಿತ್ರ ಸಂಗ್ರಹಕ್ಕೂ ಅವರೇ ಶ್ರಮಪಟ್ಟು ಪ್ರತಿಪುಟಕ್ಕೂ ಒಂದೊಂದು ಚಿತ್ರ ಬರು ವಂತೆ ನೋಡಿಕೊಂಡಿದ್ದಾರೆ. ಇಲ್ಲಿಯ ವಿಷಯ ನಿರೂಪಣೆ ಅನುಕ್ರಮವಾಗಿ ರದೇ ವಿಷಯ ವಿಭಜನೆ ಈ ರೀತಿಯಾಗಿ ಇದೆ:—ಪ್ರಕೃತಿವಿಜ್ಞಾನ, ನಾಡು, ನೆಲೆವೀಡು, ಸಾಹಿತ್ಯ, ಕಲೆ, ಕ್ರೀಡಾವನ, ಇತಿಹಾಸರಂಗ, ಭೌತವಿಜ್ಞಾನ, ಯಂತ್ರಯುಗ, ವಿಶ್ವಕರ್ಮಸಾಹಸ, ಜೀವನಚರಿತ್ರೆ, ಉದ್ಯೋಗ ಮತ್ತು ಸಮಾಜವಿಜ್ಞಾನ. ಮೂರನೆಯ ಸಂಪುಟದ ಕೊನೆಯಲ್ಲಿ ಅಕಾರಾದಿ ಸೂಚಿಕೆ ಇದೆ.

ಇದರ ನಂತರ ನಮ್ಮಲ್ಲಿರುವುದೆಂದರೆ ಸಾಹಿತ್ಯಕೋಶಗಳು. ಅವುಗಳಲ್ಲಿ 'ಕರ್ನಾಟಕ ಕವಿಚರಿತೆ'ಯೇ ಹೆಚ್ಚು ವಿರಾಜಿಸುವಂತಹದು. ಕನ್ನಡ ಸಾಹಿತ್ಯದ ಯಾವುದೇ ಮಾತು ಬಂದರೂ ಕವಿಚರಿತೆಯ ಹೆಸರನ್ನು ತೆಗೆದು ಕೊಳ್ಳದೆ ನಡೆಯುವಂತೆಯೇ ಇಲ್ಲ. ೧೯೦೭ರಲ್ಲಿ ಈ ಕೆಲಸ ಪ್ರಾರಂಭವಾಗಿ

ಅಖಂಡ ೩೫ ವರ್ಷಗಳನ್ನು ತೆಗೆದುಕೊಂಡಿದೆ. ಮೂರು ಸಂಪುಟಗಳಲ್ಲಿ ಒಟ್ಟು ೧೧೪೮ ಕನ್ನಡ ಕವಿಗಳ ಕಾಲ, ದೇಶ, ವಂಶ, ಮತ ಹಾಗೂ ಅವರ ಕೃತಿಗಳನ್ನು ಸೋದಾಹರಣವಾಗಿ ವಿವರಿಸಲಾಗಿದೆ—ಇದರಲ್ಲಿ. ಇವುಗಳಲ್ಲಿ ಯಾವ ವಿಭಾಗದ ಕುರಿತೂ ತಯಾರಾದ ಸಾಧನವಿದ್ದಿಲ್ಲ. ಪ್ರತಿಯೊಂದೂ ಸಂಶೋಧನೆಯಾಗಬೇಕು. ಹಳೆಯ ತಾಡವಾಲೆಗಳನ್ನು ಕಣ್ಣಲ್ಲಿ ಕಣ್ಣಿಟ್ಟು ಓದಬೇಕು. ಅಂಥ ಕೆಲಸ, ಅಷ್ಟೊಂದು ಸಂತತ ಪರಿಶ್ರಮ ರಾ. ಬ. ನರಸಿಂಹಾಚಾರ್ಯರಿಗೆ ಮಾತ್ರವೇ ಸಾಧ್ಯವಾಯಿತು. ಕನ್ನಡ ಬದುಕಿರುವ ವರೆಗೂ ನರಸಿಂಹಾಚಾರ್ಯರ ಹೆಸರು ಅಜರಾಮರವಾಗುಳಿಯುವುವರಲ್ಲಿ ಸಂಶಯವಿಲ್ಲ

ಕವಿಚರಿತೆಯ ನಡೆಯಲ್ಲೇ ಶ್ರೀ. ಎಂ. ಎನ್. ಶ್ರೀನಿವಾಸೈಯ್ಯಂಗಾರರು, 'ಸಂಸ್ಕೃತ ಕವಿಚರಿತೆ'ಯ ಮೂರು ಸಂಪುಟಗಳನ್ನು ಕೊಟ್ಟಿದ್ದಾರೆ. ಕ್ರಿ. ಶ. ಪೂ. ದಿಂದ ಹಿಡಿದು ೧೯ನೆಯ ಶತಕದ ವರೆಗೂ ಎಲ್ಲ ಸಂಸ್ಕೃತ ಕವಿಗಳನ್ನು ಅಯ್ಯಂಗಾರರು ಪರಿಚಯಿಸಿದ್ದಾರೆ.

ಇವುಗಳ ಮಾಲಿಕೆಯಲ್ಲೇ ಬರಬೇಕಾದುದಲ್ಲವಾದರೂ ಮೈಸೂರ ವಿಶ್ವ ವಿದ್ಯಾಲಯದವರು ಪ್ರಕಟಿಸಿದ 'ಪುರಾಣನಾಮ ಚೂಡಾಮಣಿ' ಒಂದು ವಿಶೇಷವಾದ ನಾಮಕೋಶವಾಗಿದೆ. ಇದರಲ್ಲಿ ಪೌರಾಣಿಕ ವ್ಯಕ್ತಿಗಳೆಲ್ಲರ ಪರಿಚಯವನ್ನೂ, ಆ ಆ ಪರಿಚಯದ ಕೊನೆಯಲ್ಲಿ ಯಾವ ಪುರಾಣದ ಯಾವ ಭಾಗದಲ್ಲಿದೆಯೆಂಬುದನ್ನೂ ಕಂಸಿನಲ್ಲಿ ಕೊಡಲಾಗಿದೆ. ಲೇಖಕರಾದ ಬೆನಗಲ್ ರಾಮರಾವ್ ಹಾಗೂ ಪಾನ್ಯಂ ಸುಂದರಶಾಸ್ತ್ರಿಗಳ ಉದ್ಯಮ ಅಭಿನಂದನೀಯ ವಾಗಿದೆ.

## ಇತರ ಸಂದರ್ಭ ಸಾಹಿತ್ಯ

ಕೋಶಗಳನ್ನು ಬಿಟ್ಟರೆ, ಕನ್ನಡದಲ್ಲಿ ಇತರ ಸಂದರ್ಭ ಸಾಹಿತ್ಯ ಅಲ್ಲೊಂದು, ಇಲ್ಲೊಂದು. ೧೮೯೩ರಲ್ಲಿ ವೆಂಕಟ ರಂಗೋ ಕಟ್ಟಿಯವರು ಕರ್ನಾಟಕ ಭಾಗದ ಗ್ಯಾಝೆಟಿಯರನ್ನು ಸರಕಾರದ ವತಿಯಿಂದ ಭಾಷಾಂತರಿ ಸಿದರು. ಗ್ಯಾಝೆಟಿಯರಿನಲ್ಲಿ ಭೌಗೋಲಿಕ ವರ್ಣನೆ, ಹುಟ್ಟುವಳಿ, ಒಕ್ಕಲತನ, ವ್ಯಾಪಾರ, ಇತಿಹಾಸ, ನ್ಯಾಯ, ಕಂದಾಯ, ಶಿಕ್ಷಣ ಮುಂತಾಗಿ ಭಾಗಗಳಿವೆ. ಕೆಲವು ಮೌಲಿಕ ವಿಷಯಗಳಿಗಾಗಿಯೂ, ಹಳೆಯ ಅಂಕಿ

ಸಂಸ್ಥೆಗಳಿಗಾಗಿಯೂ ಬಹಳ ಪ್ರಯೋಜನವುಳ್ಳ ಕೃತಿಯಿದು. ಇದರಲ್ಲಿ ದಕ್ಷಿಣದ ಸಂಸ್ಥಾನಗಳನ್ನೂ ಹಿಡಿದಿರುವುದರಿಂದ, ಅವುಗಳ ವಿಲೀನೀಕರಣವಾಗಿರುವ ಮುಂಬಯಿ ಕರ್ನಾಟಕದ ಬಗ್ಗೆ ಕೆಲವೊಂದು ವಿಷಯಗಳಿಗಾಗಿ ಇಂದಿಗೂ ಅದರ ಉಪಯೋಗ ಮಾಡಿಕೊಳ್ಳಬಹುದಾಗಿದೆ.

ಈಚೆಗೆ ೧೯೫೫ನೆಯ ವರ್ಷಕ್ಕೆಂದು ದಾವಣಗೆರೆಯಿಂದ ಒಂದು ಡಿರೆಕ್ಟರಿ ಅಥವಾ ನಾಮದರ್ಶಕವು ಪ್ರಕಟವಾಗಿದೆ. 'ಕರ್ನಾಟಕ ವೈಭವ ಪ್ರಕಾಶ' ಆಲ್ ಕರ್ನಾಟಕ ಡಿರೆಕ್ಟರಿ ಎಂದದರ ನಾಮಕರಣ. ಮರುವಿಗೆ ಕರ್ನಾಟಕದ ಪ್ರಾಥಮಿಕ ಪರಿಚಯ, ಅದರ ನಿಸರ್ಗ ಮತ್ತು ಇತರ ಸಂಪತ್ತು ಹಾಗೂ ಕೆಲ ಉದ್ದಿಮೆಗಳ ಕುರಿತು ಪರಿಚಯ ಕೊಡಲಾಗಿದೆ. ಇದನ್ನು ಸಿದ್ಧಗೊಳಿಸಿದವರು ಕೆ. ಶ್ಯಾಮರಾವ್ ಎಂಬವರು. ಕೊನೆಯಲ್ಲಿ ಕನ್ನಡನಾಡಿನ ಪ್ರಮುಖ ಉದ್ದಿಮೆದಾರರ ಹಾಗೂ ಸಂಸ್ಥೆಗಳ ಪರಿಚಯವನ್ನೂ ಕೊಡಲಾಗಿದೆ. ಅಂಥ ಕೃತಿಗಳು ಎಷ್ಟಿದ್ದರೂ ಬೇಕು. ಧಾರವಾಡದ ಪ್ರೊ. ಧಾರವಾಡಕರರು ಕರ್ನಾಟಕದಲ್ಲಿಯ (ಇಂದಿನ, ಹಿಂದಿನ) ವೃತ್ತಪತ್ರಿಕೆಗಳ ಪಟ್ಟಿಯೊಂದನ್ನು ಕಷ್ಟಪಟ್ಟು ಕೊಟ್ಟಿದ್ದಾರೆ. ಪ್ರತ್ಯೇಕವಾಗಿಲ್ಲದಿದ್ದರೂ ಪ್ರಬುದ್ಧ ಕರ್ನಾಟಕದ ಬೆಳ್ಳಿಯ ಹಬ್ಬದ ಸಂಚಿಕೆಯ ಕೊನೆಯಲ್ಲಿರುವ ವಿಷಯ ಹಾಗೂ ಲೇಖಕ ಸೂಚಿಯು ಸಾಹಿತ್ಯಾಭ್ಯಾಸಿಗಳಿಗೆ ಬೆಲೆಯುಳ್ಳ ಸಂದರ್ಭಗ್ರಂಥವೆಂದು ಹೇಳಬಹುದು. ಅದರಂತೆ, ಅದೇ ಪತ್ರಿಕೆಯ ಪ್ರತಿ ಸಂಚಿಕೆಯಲ್ಲಿ ಕೊಡುವ ಪ್ರಾಚ್ಯ ಲೇಖನ ಸೂಚನಾವಳಿಯು ಪತ್ರಿಕಾಲೇಖನಗಳ ಒಂದು ಗ್ರಾಹ್ಯ ಸೂಚಿಯಾಗಿದೆ. ಅಲ್ಲಲ್ಲಿ ಇತರ ಭಾಷೆಗಳ ಪ್ರಮುಖ ಪ್ರಾಚ್ಯ ವಿಷಯಕ ಪತ್ರಿಕೆಗಳ ಲೇಖನಗಳ ಸಾರವನ್ನು ಕೊಡುವುದಿದೆ.

## ಆಗಬೇಕಾದ ಕೆಲಸ

ಇಲ್ಲಿಗೆ ಕನ್ನಡ ಸಂದರ್ಭ ಸಾಹಿತ್ಯದ ಬಗ್ಗೆ ಲೇಖಕನ ತಿಳಿವಿನ ಬಂಡವಲ ತೀರಿತು. ಉಳಿದಿದ್ದರೆ ಇವಕ್ಕಿಂತ ಹೆಚ್ಚೇನು ಸಂದರ್ಭ ಗ್ರಂಥಗಳು ಉಳಿದಿರುವ ಹಾಗೆ ಕಾಣೆ. ಈ ಮುನ್ನ ಸಂದರ್ಭ ಸಾಹಿತ್ಯದ ಪ್ರಕಾರಗಳನ್ನು ಹೇಳಿದೆಯಷ್ಟೆ. ಅವುಗಳಲ್ಲಿ ಇನ್ನೂ ಎಷ್ಟರ ಮಟ್ಟಿಗೆ ಇಂಥ ಸಾಹಿತ್ಯ ನಿರ್ಮಾಣವಾಗಬೇಕಿದೆಯಲ್ಲ ಎಂದು ತಂತಾನೆ ಹೊಳೆಯುವಂತಿದೆ. ಮೈಸೂರು ವಿಶ್ವವಿದ್ಯಾಲಯದವರು ತಮ್ಮ ನಿಘಂಟಿನ ಯೋಜನೆ

ಕೊಡುವಾಗ ಕನ್ನಡ ಜ್ಞಾನಕೋಶವೊಂದನ್ನು ಕೊಡುವ ವಿಚಾರ ಇತ್ತು, ಅಂತೆ! ಈಗ ಅದು ಸ್ಥಗಿತವಾಗಿದೆಯೆಂದು ಕಾಣುತ್ತದೆ. ಕವಿಚರಿತೆ ಕಾಲಾನ್ವ ಕ್ರಮದಲ್ಲಿ ಕವಿಗಳ ಪರಿಚಯ ಕೊಟ್ಟರೂ, ಇಂದಿನ, ಹಿಂದಿನ ಎಲ್ಲ ಕನ್ನಡ ಸಾಹಿತಿಗಳ, ಕೃತಿಗಳ, ಸಾಹಿತ್ಯರೂಪಗಳ ಒಂದು ಸಮಗ್ರ ಕೋಶ, ಆಕ್ಸಫರ್ಡ್ ಡಿಕ್ಸನರಿ ಆಫ್ ಇಂಗ್ಲಿಶ್ ಲಿಟರೇಚರಿನ ಮಾದರಿಯಲ್ಲಿ ಬೇಕಾಗಿದೆ. ಪ್ರಾಜ್ಞ ಲೇಖನಗಳ ಬಗ್ಗೆ ಮಾತ್ರ ಪ್ರಬುದ್ಧ ಕರ್ಣಾಟಕದ ಸೂಚನಾವಳಿ ಇದ್ದರೆ, ಪ್ರತಿ ತಿಂಗಳು ಪ್ರಕಟವಾಗುವ ಬೆಲೆಯುಳ್ಳ ಲೇಖನಗಳ ಸೂಚಿಯನ್ನು ಒಂದು ಪತ್ರಿಕೆ ಕೈಕೊಳ್ಳುವುದು ಆಗದ ಮಾತೇ? ವ್ಯಾವಹಾರಿಕ ಪ್ರಯೋಜನದ ಕಡೆಗೆ ತಿರುಗಿದರೆ, ಒಂದು ಕನ್ನಡದ ಚಾರಿತ್ರಿಕ ಕೋಶ ಬೇಕು, ವಾರ್ಷಿಕಗಳು ಬೇಕು, ಯಾವುದು ಬೇಡ? ಯಾರು ಇದನ್ನು ಮಾಡಬೇಕು ಎಂಬುದೇ ಪ್ರಶ್ನೆ. ನಮ್ಮ ವಿಶ್ವವಿದ್ಯಾಲಯಗಳಿವೆ, ಪ್ರಮುಖ ಸಾಂಸ್ಕೃತಿಕ ಸಂಸ್ಥೆಗಳಿವೆ, ಗ್ರಂಥಾಲಯಗಳಿವೆ, ಬರೆಯಬಲ್ಲ ವಿದ್ವಾಂಸರು ಇದ್ದಾರೆ; ಒಟ್ಟು ಇಂಥ ಕೆಲಸ ಆಗಬೇಕು; ಆಗಲೇಬೇಕು.



# ಪಾರಿಭಾಷಿಕ ಪದಗಳು

| | |
|---|---|
| ಅತಿದೇಯ<br>ಅತೀತ ಸಮಯ | Overdue |
| ಅಧಿಕ | Added |
| ಅಧಿಕ ನಮೂದು (ನಿರ್ದೇಶ) | Added entry |
| ಅಧಿಲೇಖನ | Document |
| ಅಧಿಶೋಧ | Inventory |
| ಅನಾಮಧೇಯ | Anonymous |
| ಅವರೋಹಣ | Discarding |
| ಆಕರ | Source |
| ಆರೋಹಣ | Accession |
| ಆರೋಹಣ ದಾಖಲೆ | Accession Register |
| ಆವಹನ | Charging |
| ಆಸನ ಸಾಮಗ್ರಿ<br>ಉಪಸ್ಕರ | Furniture |
| ಉಲ್ಲೇಖ | Reference |
| ಅಂಕ | Digit |
| ಅಂಕನ | Notation |
| ಅಂಕಣ | Column |
| ಅಂತರ್ಮಾರ್ಗ | Gangway |
| ಅಂತರ್ವಿಷಯೀ ಉಲ್ಲೇಖ | Cross references |
| ಕಟ್ಟು | Set |
| ಕಲ್ಪ | Code |
| ಕವಚ ಪರಿಶೀಲನೆ | Collation |
| ಕಾರ್ಡ್ | Card |
| ಕಾಯ್ದಿಟ್ಟ | Reserved |
| ಕೋಷ್ಟಕ | Schedule |
| ಕಂಠಲೇಖನಿ | Stylographic |

| | |
|---|---|
| ಕ್ರಮಕ ಸಂಖ್ಯೆ | Call number |
| ಕ್ರಯ ಪಟ್ಟಿ | Invoice |
| ಖಾನೆ | Rack |
| ಗುಪ್ತನಾಮ | Pseudonym |
| ಗ್ರಂಥನಿರ್ಗಮ | Issue of books |
| ಗ್ರಂಥಭಂಡಾರ | Library |
| ಗ್ರಂಥ ವಿತರಣೆ | Issue of books |
| ಗ್ರಂಥ ಸಂಖ್ಯೆ | Book number |
| ಗ್ರಂಥಾಧಾರಕ | Rack |
| ಗ್ರಂಥಾಲಯ | Library |
| ಗ್ರಂಥಾಲಯ ಪ್ರಾಧಿಕಾರಿ | Library authority |
| ಗ್ರಂಥಾಲಯ ಶಾಸ್ತ್ರ | Library Science |
| ಗ್ರಂಥಾಲಯಾಧಿಕಾರಿ | Librarian |
| ಗ್ರಂಥಾಲಯಾಸಕ್ತ | Library-minded |
| ಚಯನ | Selection |
| ಚೀಟಿಕೆ | Ticket |
| ಜೀರ್ಣ | Worn-out |
| ಟಿಪ್ಪಣಿ | Annotation |
| ತಪ್ಪಿದವರು | Defaulters |
| ತಬಕ<br>ತಡಿಕೆ | Tray |
| ತಾಲಿಕಾ | Schedule |
| ತ್ಯಜನ | Discarding |
| ದರ್ಶಕ | Guide |
| ದಶಾಂಶ | Decimal |
| ದೇಯದಿನ | Due date |
| ದ್ವಿಬಿಂದು ವರ್ಗೀಕರಣ | Colon classification |

| | |
|---|---|
| ನೆಡುದಾರಿ | Gangway |
| ನಮೂದು | Entry |
| ನವೀಕರಿಸುವುದು | Renewal |
| ನಿದರ್ಶಕ | Indicator |
| ನಿಯತಕಾಲಿಕ | Periodical |
| ನಿಹಿತ | Reserved |
| ನಿತ್ಯಕ್ರಮ | Routine |
| ನಿರ್ಗಮ ಕೇಂದ್ರ | Delivery Station |
| ನಿರ್ದೇಶ | Entry |
| ನಿರ್ವಹನ | Discharging |
| ಪತ್ರಕ | Card, Sheet |
| ಪರಿಪಾಠ | Routine |
| ಪಾತ್ರಕ | Tray |
| ಪುಸ್ತಕ ಮಂದಿರ | Library |
| ಪ್ರತ್ಯಾಗಮ | Return |
| ಪ್ರತ್ಯಾವರ್ತನ | Withdrawal |
| ಪ್ರಾಥಮಿಕ ದಾಖಲೆ | Accession Register |
| ಫಲಕ | Shelf |
| ಫಲಕ ಭರಣ | Shelving |
| ಬಹುಸಂಪುಟಕ | Multi-volume |
| ಭಂಡಾರಿಗ | Librarian |
| ಮುಕ್ತದ್ವಾರ | Open access |
| ಮುಖಪುಟ | Title page |
| ಮುದ್ರಿಕೆ | Stamp |
| ಮುದ್ರಾಂಕಿತ | Colophone |
| ಲೇಖಕೀಯ ಚಿಹ್ನೆ | Author mark |
| ಲೇಖಕೀಯ ನಿರ್ದೇಶ | Author entry |

| | |
|---|---|
| ಲೇಖನಾಮ | Pseudonym |
| ವರ್ಗಸಂಖ್ಯೆ | Class number |
| ವರ್ಗೀಕರಣ | Classification |
| ವಿಮಿಶ್ರಣ | Sorting |
| ವಿಶೇಷತಾ | Characteristic |
| ವಿಸರ್ಜನ | Discarding |
| ವಾಙ್ಮಯ ಸೂಚಿ | Bibliography |
| ಶ್ರೇಣಿ | Chain |
| ಸಮಾಪ್ತಿ ವಚನ | Colophone |
| ಸಹಕಾರ್ಯ | Co-operative |
| ಸಾಮಯಿಕ | Periodical |
| ಸೂಚಿ | Catalogue |
| ಸೂಚಿಕೆ | Index |
| ಸೂಚೀಕರಣ | Cataloging |
| ಸೂತ್ರ | Formula, Law |
| ಸಂಕೇತ | Notation |
| ಸಂಖ್ಯಾಪುಟ | Table |
| ಸಂಗ್ರಹ ಕೋಣೆ | Stock room |
| ಸಂಗ್ರಹ ಪರಿಶೀಲನೆ | Stock taking. |
| ಸಂಚಾರಕ | Travelling |
| ಸಂಚಾರಣ | Circulation |
| ಸಂದರ್ಭ ಸೇವೆ | Reference service |
| ಸಂಪುಟ | Set |
| ಸಂಹಿತೆ | Code |
| ಸ್ವಾಮಿತ್ವ ಶಾಸನ | Copy-right |
| ಹಿಂತೆಗೆದುಕೊಳ್ಳುವುದು | Withdrawal |

---

# ವಿಷಯ ವ್ಯಕ್ತಿ ಮತ್ತು ಗ್ರಂಥಗಳ

# ಅಕಾರಾದಿ



(ಗ್ರಂಥಾಲಯಗಳನ್ನು ಊರುಗಳ ಹೆಸರಿನಡಿ ಕೊಡಲಾಗಿದೆ)


ಅಕ್ಯಾಡ್ ಭಾಷೆ ೪೩

ಅಥಣಿ ಸಿದ್ಧೇಶ್ವರ ಗ್ರಂಥಾಲಯ ೭೧

ಅನಾಮಧೇಯ ೨೯೦

ಅನುವಾದ ೨೮೮

'ಅಬ್‌ಗಿಲಾ' ೬೧

'ಅಭಿಧಾನ ವಸ್ತುಕೋಶ' ೪೧೧

ಅಭಿನವ ಮಂಗರಾಜ ೪೧೧

ಅಮೇರಿಕನ್ ಗ್ರಂಥಾಲಯ ಸಂಘ ೬೪, ೨೮೫

ಅರಿಸ್ಟಾಟಲ್ ಗ್ರಂಥ ಸಂಗ್ರಹ ೪೪

ಅಲೆಕ್ಸಾಂಡ್ರಿಯಾ ಗ್ರಂಥಭಂಡಾರ ೪೪

ಅಶುರ್ ಬನಿಪಾಲ ೪೩

'ಅಶಾಂತಿ ಪರ್ವ' ೨೪೮

'ಅಶ್ವತ್ಥಾಮನ್' ೨೪೭

ಅಸೀರಿಯನ್ ಗ್ರಂಥಭಂಡಾರ ೪೧

ಆಕ್ಸಫರ್ಡ ನಿಘಂಟು ೪೦೧

ಆರ್ಡರ್ ಕಾರ್ಡು ೩೦೦

ಆರೋಹಣ ದಾಖಲೆ ೨೦೫, ೩೧೦

ಆವರ್ತ ಗ್ರಂಥಸೂಚಿ ೪೦೭

ಆವಳಿಗಳು ೪೦೫

ಆರ್ಷೇಯ ಸಾಹಿತ್ಯ ೨೬, ೨೯೦

ಆಸಾಮ ಗ್ರಂಥಾಲಯ ಸಂಘ ೬೭

ಇಟ್ಟಂಗಿಯ ಗ್ರಂಥಗಳು ೨೧
'ಇಂಡಿಯಾ ಎಂಡ್ ಪಾಕಿಸ್ತಾನ ಇಯರ್‌ಬುಕ್' ೨೦೫

ಉತ್ಕಲ ಗ್ರಂಥಾಲಯ ಸಂಘ ೬೭
ಉಪಸ್ಕರಗಳು ೧೮೮
ಉಲ್ಲಾಳ್, ನರಸಿಂಗರಾವ ೨೧೪

ಎಡ್ವರ್ಡ್ಸ್, ಎಡ್ವರ್ಡ ೫೫
'ಎನ್‌ಸೈಕ್ಲೋಪೀಡಿಯಾ ಅಮೇರಿಕಾನಾ' ೨೦೩
'ಎನ್‌ಸೈಕ್ಲೋಪೀಡಿಯಾ ಆಫ್ ರಿಲಿಜನ್ ಎಂಡ್ ಎಥಿಕ್ಸ್' ೨೦೩
'ಎನ್‌ಸೈಕ್ಲೋಪೀಡಿಯಾ ಆಫ್ ಸೋಶಿಯಲ್ ಸೈನ್ಸ' ೨೦೩
'ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕಾ' ೨೦೩

ಓದನಪುರ ವಿದ್ಯಾಕೇಂದ್ರ ೨೬
ಓದುಗ ೧೯, ೧೭೯
ಓದುಗರ ಸೂಚನಾಪುಸ್ತಕ ೩೧೩, ೧೯೭
'ಓಷಧಿ ಕೋಷಂ' ೨೧೩

'ಆಂಗ್ಲೋ-ಕನ್ನಡ ಕ್ರೌನ್ ನಿಘಂಟು' ೨೧೪
ಆಂಧ್ರಭಾಷಾ ಪ್ರಾದೇಶಿಕ ಗ್ರಂಥಾಲಯ ಸಂಘ ೬೫

ಕೆಟರ್, ಚಾರ್ಲಸ್ ೩೪೨
'ಕನ್ನಡ-ಇಂಗ್ಲಿಷ ನಿಘಂಟು' ೨೧೨
'ಕನ್ನಡ ಪಾರಿಭಾಷಿಕ ನಿಘಂಟು' ೨೧೪
'ಕನ್ನಡ ಸಾಹಿತ್ಯಕೋಶ' ೨೧೯
'ಕರ್ನಾಟಕ ಕಲ್ಪದ್ರುಮ' ೨೧೩
'ಕರ್ನಾಟಕ ಕವಿಚರಿತೆ' ೨೧೬
ಕರ್ನಾಟಕ ಕೇಂದ್ರ ಗ್ರಂಥಾಲಯ ೪೮
'ಕರ್ನಾಟಕ ಗ್ಯಾಝೆಟಿಯರ್' ೨೧೭
ಕರ್ನಾಟಕ ಗ್ರಂಥಾಲಯ ಸಂಘ ೬೭, ೭೨
'ಕರ್ನಾಟಕದ ವೃತ್ತಪತ್ರಿಕೆಗಳು' ೨೧೮

ಕರ್ನಾಟಕ ಪ್ರಾದೇಶಿಕ ಗ್ರಂಥಾಲಯ ೫೧
ಕರ್ನಾಟಕ ವಾಚನಾಲಯ ಪರಿಷತ್ತುಗಳು ೭೩
ಕರ್ನಾಟಕ ವಿಶ್ವವಿದ್ಯಾಲಯ ೭೧
'ಕರ್ನಾಟಕ ವೈಭವ ಪ್ರಕಾಶ' ೩೧೮
'ಕರ್ನಾಟಕ ಶಬ್ದಸಾರ' ೩೧೧
ಕರ್ನಾಟಕ ಸಂಘಗಳು ೪
'ಕರ್ನಾಟಕ ಸಂಜೀವನ' ೩೧೧
'ಕಬ್ಬಿಗರ ಕೈಪಿಡಿ' ೩೧೧
ಕಲಕತ್ತ, ರಾಷ್ಟ್ರೀಯ ಗ್ರಂಥಾಲಯ ೪೪
'ಕವಿಕಂಠಹಾರ' ೩೧೧
ಕಾರವಾರ, ಸಾರ್ವಜನಿಕ ಗ್ರಂಥಭಂಡಾರ ೬೯
ಕಾರಂತ, ಶಿವರಾಮ ೩೦೪, ೩೧೬
ಕಾಶೀ ವಿಶ್ವವಿದ್ಯಾಲಯ ೪೫
ಕಾಶೀ ವೀರಶೈವ ವಿದ್ವತ್ಸಭೆ ೭೨
ಕಿಟೆಲ್, ಎಫ್ ೨೬
'ಕೀಸ್ಸಿಂಗ ಸಮಕಾಲಿನ ಘಟನಾವಳಿ' ೩೨೬
ಕಂಠ ಲೇಖನಿ ೨೬
ಕ್ರಿಶ್ಚಿಯನ್ ಮಿಶನರಿಗಳು ೨೭
ಕ್ರಿಸ್ತಾನುಜ ವತ್ಸ ೩೧೪
'ಕ್ಯುಮುಲೇಟಿವ್ ಬುಕ್ ಇಂಡೆಕ್ಸ' ೧೯೭, ೩೯೭

ಖಾಸಗೀ ಗ್ರಂಥಸಂಗ್ರಹ ೩೩, ೧೦೭, ೧೬೧

ಗಾಯಕವಾಡ, ಸಯಾಜಿರಾವ ೪೫
ಗುಪ್ತನಾಮ ೨೮೯
ಗ್ರೀಕ ಗ್ರಂಥಭಂಡಾರಗಳು ೨೨
'ದಿ ಗ್ರೇಟ್ ಇಂಗ್ಲಿಷ್-ಇಂಡಿಯನ್ ಡಿಕ್ಸನರಿ' ೩೦೧
ಗ್ರಂಥ ಕಾರ್ಡು ೨೦೪
ಗ್ರಂಥಗಳನ್ನಿಡುವ ಕ್ರಮ ೧೬೪, ೧೭೫
ಗ್ರಂಥನ್ಯಾಸಶಾಸ್ತ್ರ ೧೨೨

ಗ್ರಂಥ ಪ್ರಚಾರ ೧೭೧
ಗ್ರಂಥ ಪೂರೈಕೆ ೧೯೮
ಗ್ರಂಥ ವರ್ಗೀಕರಣ ೨೩೬, ೨೪೦
ಗ್ರಂಥ ವಿತರಣೆ ೨೨೦, ೨೨೧, ೨೨೩, ೨೨೮
ಗ್ರಂಥ ವಿಷಯ ೨೩೭
ಗ್ರಂಥ ಸಿದ್ಧತೆ ೨೦೨
ಗ್ರಂಥ ಸೂಚಿ ೧೧೧
ಗ್ರಂಥ ಸೌಕರ್ಯ ೧೬೬-೯
ಗ್ರಂಥ ಸಂಗ್ರಹ ೨೦, ೧೭೮, ೧೮೪, ೧೯೪-೯೬, ೨೨೮
—ಇಜಿಪ್ತ ೨೯
—ದೇವಾಲಯ ೨೯
—ಪ್ರಾಚೀನ ೨೮
—ಪ್ರಾಚೀನ ಕರ್ನಾಟಕ ೩೬
—ಮಧ್ಯಯುಗೀನ ಯುರೋಪ ೩೮
ಗ್ರಂಥಾಲಯ
—ನೌಕಾ ೧೧೬
—ಮಹಾವಿದ್ಯಾಲಯ ೧೨೦
—ವಿಶಿಷ್ಟ ೧೦೬
—ವಿಶ್ವವಿದ್ಯಾಲಯ ೧೨೧
—ವ್ಯವಸಾಯ ೧೨೨
—ವ್ಯಾಪಾರೀ ೧೨೨
—ಶಾಲಾ ೧೧೮
—ಸರಕಾರೀ ೧೨೪
—ಹಸ್ತಪ್ರತಿಗಳು ೧೨೫
ಗ್ರಂಥಾಲಯ : ........
ಅಂಗಹೀನರು ೧೦೬, ೧೧೭, ೧೬೯
ತಾಂತ್ರಿಕ ಸೇವೆ ೧೧೦
ನವಶಿಕ್ಷಿತ ೯೯
ಮಕ್ಕಳು ೮೬, ೧೨೭, ೧೬೭, ೧೮೫
ಲೇಖನ ೯೭

| | |
|---|---|
| ವಯಸ್ಕರು | ೯೩, ೧೨೮ |
| ಶಿಕ್ಷಣ | ೮೮, ೮೮ |
| ಗ್ರಂಥಾಲಯ ಕಟ್ಟಡ | ೧೮೧-೮೨,೧೮೫ |
| ಗ್ರಂಥಾಲಯ ಕರ | ೧೯೧ |
| ಗ್ರಂಥಾಲಯ ಕಾನೂನು | ೫೪, ೬೫ |
| ಗ್ರಂಥಾಲಯದ ಅಂತರ್ವ್ಯವಸ್ಥೆ | ೧೯೦, ೨೨೯ |
| ಆರ್ಥಿಕ ವಿಚಾರ | ೧೮೨, ೧೮೩ |
| ಗ್ರಂಥಾಲಯದ ವೇಳೆ | ೧೬೩ |
| ಗ್ರಂಥಾಲಯದ ಸ್ಥಳ | ೧೬೧, ೧೮೧ |
| ಗ್ರಂಥಾಲಯ ಪ್ರಚಾರ | ೧೭೩ |
| ಗ್ರಂಥಾಲಯ ವರದಿ | ೨೨೭ |
| ಗ್ರಂಥಾಲಯ ವಿಧಾನ | ೧೦೮, ೧೧೨ |
| ಗ್ರಂಥಾಲಯ ಶಿಕ್ಷಣ | ೧೧೨ |
| | |
| ಚಕ್ರವರ್ತಿ, ಕೆ. ಆರ್ | ೩೧೪ |
| 'ಚತುರಾಸ್ಯ ನಿಘಂಟು' | ೩೧೧ |
| ಚಿತ್ರಗಳು | ೩೦೮ |
| ಚಿತ್ರದುರ್ಗ, ಶ್ರೀಕೃಷ್ಣ ರಾಜೇಂದ್ರ ಗ್ರಂಥಾಲಯ | ೭೦ |
| ಚಿತ್ರ ಭಿತ್ತಿಗಳು | ೩೦೮ |
| | |
| ಜಪಾನ, ರಾಷ್ಟ್ರೀಯ ಗ್ರಂಥಭಂಡಾರ | ೪೨ |
| ಜಬಲಪೂರ ಕರ್ನಾಟಕ ಗ್ರಂಥಾಲಯ | ೭೨ |
| ಜಮುಖಂಡಿ ಗ್ರಂಥಾಲಯ | ೭೦ |
| ಜೆಸ್ನರ್, ಕೊನ್ರ್ಯಾಡ್ | ೨೪೧ |
| ಝಿಗ್ಲರ್, ಎಫ್ | ೩೧೪ |
| ಝಲುಸ್ಕಿ ಬಂಧುಗಳು | ೪೧ |
| | |
| 'ಟೈಮ್ಸ ಆಫ್ ಇಂಡಿಯಾ ಡಿರೆಕ್ಟರಿ' | ೩೦೫ |
| 'ಡಿಕ್ಸನರಿ ಆಫ್ ನೆಶನಲ್ ಬಯಾಗ್ರಫಿ' | ೩೦೪ |
| 'ಡೇಲೀ ಮೇಲ್ ಇಯರ್‌ಬುಕ್' | ೩೦೫ |
| ಡ್ಯೂಯಿ, ಮೆಲ್ವಿಲ್ | ೧೯೪, ೨೪೧ |

ತಕ್ಷಶಿಲಾ ವಿಶ್ವವಿದ್ಯಾಲಯ ೩೬
ತುಮಕೂರ, ಶ್ರೀಕೃಷ್ಣರಾಜೇಂದ್ರ ಗ್ರಂಥಾಲಯ ೭೮
ತೋಂಟದಾರ್ಯ ೩೮೮
'ಥ್ಯಾಕರ್ಸ ಡಿರೆಕ್ಟರಿ' ೩೦೫

ದಶಾಂಶ ವರ್ಗೀಕರಣ ೧೪೮, ೧೪೭-೫೮
ದಶಾಂಶ ವಿಧಾನ ೧೪೧
ದಾತೆ, ಜಿ. ಎಸ್. ೧೬೩, ೧೬೬
ದಾನಗ್ರಂಥಗಳ ದಾಖಲೆ ೧೮೦
ದ್ವಿಬಿಂದು ವರ್ಗೀಕರಣ ೧೪೬, ೧೫೩-೧೬೬
—ಕನ್ನಡೀಕರಣ ೧೬೩
—ಮೆಕ್ಯಾನೊ ತಳಹದಿ ೧೫೩
—ಸಾಹಿತ್ಯ ವರ್ಗ ೧೬೮
ಧಾರವಾಡ, ಶಾಂತೇಶ ವಾಚನಾಲಯ ೭೮
ಧಾರವಾಡ, ಸಂಸ್ಕೃತ ಪಾಠಶಾಲಾ ೬೯

ನಕ್ಷೆಗಳು ೩೦೯
ನರಸಿಂಹಾಚಾರ್, ಆರ್ ೩೮೩
ನವಲಗುಂದ, ಸಾರ್ವಜನಿಕ ಗ್ರಂಥಾಲಯ ೭೦
ನಾಗವರ್ಮ ಎರಡನೇ ೩೮೮
ನಾಗಾಯಿ ಘಟಿಕಾಶಾಲೆ ೩೬
'ನಾನಾರ್ಥ ರತ್ನಾಕರ' ೩೮೮
'ನಾನಾರ್ಥ ಶಬ್ದಾವಳಿ' ೩೮೪
ನಾಮದರ್ಶಕಗಳು ೩೦೪
'ನಾಲಂದ ಇಯರ್ ಬುಕ್' ೩೦೬
ನಾಲಂದ ವಿಶ್ವವಿದ್ಯಾಲಯ ೩೫
ನಿಘಂಟು ೧೯೭, ೩೦೦, ೩೮೦
—ದೇಶೀಯ ೩೦೧
ನಿನೆವಾ ಗ್ರಂಥಭಂಡಾರ ೩೧
ನೇಟಿವ್ ಜನರಲ್ ಲೈಬ್ರರಿ ೫೭

**ಪತ್ರಕ** ೧೭೬
—ಮುಖ್ಯ ೨೭೦
—ಸಹಾಯಕ ೨೭೨
—ಸೂಚಿ ೨೭೨
ಪತ್ರಿಕಾಲಯ ೧೮೫
ಪತ್ರಿಕೆ ೨೮೭, ೩೦೬
ಪತ್ರಿಕೆಗಳ ದಾಖಲೆ ೨೧೪
ಪರಿವರ್ತನಗಳು ೨೮೯
ಪುಟ್ನಮ್, ಹರ್ಬರ್ಟ್ ೨೪೫
'ಪುರಾಣನಾಮ ಚೂಡಾಮಣಿ' ೩೧೭
ಪುಸ್ತಕೋಪಕ್ರಯಿ ೩೬
ಪುಸ್ತಿಕೆಗಳು ೩೦೮
ಪೆಪಿರಸ್ ೩೦
ಪೋಲಿಯೊ ೩೪
ಪ್ರಚಾರ ವ್ಯಾಖ್ಯಾನ ಮಾಲೆ ೯೬
ಪ್ರತ್ಯಾವರ್ತನ ದಾಖಲೆ ೨೦೮
ಪ್ರಬುದ್ಧ ಕರ್ನಾಟಕ ೩೧೮
ಪ್ರಾಚ್ಯ ಲೇಖನ ಸೂಚನಾವಳಿ ೩೧೮
ಪ್ರಾತ್ಯಕ್ಷಿಕೆಗಳು ೯೦
ಪ್ರಾಥಮಿಕ ದಾಖಲೆ ೨೦೫, ೨೧೦

**ಬ**ಳ್ಳಿಗಾವಿ ವಿದ್ಯಾಕೇಂದ್ರ ೩೬
ಬಾಗಿಲುಕೋಟೆ ಸಾರ್ವಜನಿಕ ಗ್ರಂಥಭಂಡಾರ ೭೦
'ಬಾಲಪ್ರಪಂಚ' ೩೦೪, ೩೧೬
ಬಿಬ್ಲಿಯೊಥೆಕಾ ನ್ಯಾಶನಲ್ ೩೮
ಬೆಬಿಲೋನಿಯನ್ ಗ್ರಂಥಭಂಡಾರ ೩೧
ಬೆಳಗಾವಿ, ಸಾರ್ವಜನಿಕ ಗ್ರಂಥಾಲಯ ೬೯
ಬೇಕನ್, ಫ್ರಾನ್ಸಿಸ್ ೨೪೧
ಬೊಮ್ಮರಸ ೩೧೧
ಬಂಗಾಲ ಗ್ರಂಥಾಲಯ ಸಂಘ ೬೭
ಬೆಂಗಳೂರ, ಸಾರ್ವಜನಿಕ ಗ್ರಂಥಾಲಯ ೭೦

ತಕ್ಷಶಿಲಾ ವಿಶ್ವವಿದ್ಯಾಲಯ ೩೬
ತುಮಕೂರ, ಶ್ರೀಕೃಷ್ಣರಾಜೇಂದ್ರ ಗ್ರಂಥಾಲಯ ೭೧
ತೋಂಟದಾರ್ಯ ೩೧೧
'ಥ್ಯಾಕರ್ಸ ಡಿರೆಕ್ಟರಿ' ೩೦೫

ದಶಾಂಶ ವರ್ಗೀಕರಣ ೨೪೧,೨೪೭-೫೧
ದಶಾಂಶ ವಿಧಾನ ೨೪೨
ದಾತೆ, ಜಿ. ಎಸ್. ೨೬೩, ೨೬೬
ದಾನಗ್ರಂಥಗಳ ದಾಖಲೆ ೨೧೦
ದ್ವಿಬಿಂದು ವರ್ಗೀಕರಣ ೨೪೬, ೨೫೩-೨೬೬
—ಕನ್ನಡೀಕರಣ ೨೬೩
—ಮೆಕ್ಯಾನೊ ತಳಹದಿ ೨೫೩
—ಸಾಹಿತ್ಯ ವರ್ಗ ೨೬೧
ಧಾರವಾಡ, ಶಾಂತೇಶ ವಾಚನಾಲಯ ೭೧
ಧಾರವಾಡ, ಸಂಸ್ಕೃತ ಪಾಠಶಾಲಾ ೬೯

ನಕ್ಷೆಗಳು ೩೦೮
ನರಸಿಂಹಾಚಾರ್, ಆರ್ ೩೧೭
ನವಲಗುಂದ, ಸಾರ್ವಜನಿಕ ಗ್ರಂಥಾಲಯ ೭೦
ನಾಗವರ್ಮ ಎರಡನೇ ೩೧೧
ನಾಗಾಯಿ ಘಟಿಕಾಶಾಲೆ ೩೬
'ನಾನಾರ್ಥ ರತ್ನಾಕರ' ೩೧೧
'ನಾನಾರ್ಥ ಶಬ್ದಾವಳಿ' ೩೧೪
ನಾಮದರ್ಶಕಗಳು ೩೦೪
'ನಾಲಂದ ಇಯರ್ ಬುಕ್' ೩೦೬
ನಾಲಂದ ವಿಶ್ವವಿದ್ಯಾಲಯ ೩೫
ನಿಘಂಟು ೨೮೭, ೩೦೦, ೩೧೦
—ದೇಶೀಯ ೩೦೨
ನಿನೆವಾ ಗ್ರಂಥಭಂಡಾರ ೩೨
ನೇಟಿವ್ ಜನರಲ್ ಲೈಬ್ರರಿ ೫೭

**ಪತ್ರಿಕ** ೧೭೬
— ಮುಖ್ಯ ೨೭೦
— ಸಹಾಯಕ ೨೭೨
— ಸೂಚಿ ೨೭೨
ಪತ್ರಿಕಾಲಯ ೧೮೫
ಪತ್ರಿಕೆ ೨೮೭, ೩೦೬
ಪತ್ರಿಕೆಗಳ ದಾಖಲೆ ೨೧೪
ಪರಿವರ್ತನಗಳು ೨೮೯
ಪುಟ್ನವ್, ಹರ್ಬರ್ಟ ೨೪೫
'ಪುರಾಣನಾಮ ಚೂಡಾಮಣಿ' ೩೧೭
ಪುಸ್ತಕೋಪಕ್ರಯಿ ೩೬
ಪುಸ್ತಿಕೆಗಳು ೩೦೮
ಪೆಪಿರಿಸ್ ೩೦
ಪೋಲಿಯೊ ೩೪
ಪ್ರಚಾರ ವ್ಯಾಖ್ಯಾನ ಮಾಲೆ ೯೬
ಪ್ರತ್ಯಾವರ್ತನ ದಾಖಲೆ ೨೦೮
ಪ್ರಬುದ್ಧ ಕರ್ನಾಟಕ ೩೧೮
ಪ್ರಾಚ್ಯ ಲೇಖನ ಸೂಚನಾವಳಿ ೩೧೮
ಪ್ರಾತ್ಯಕ್ಷಿಕೆಗಳು ೯೦
ಪ್ರಾಥಮಿಕ ದಾಖಲೆ ೨೦೫, ೨೧೦

**ಬಳ್ಳಿಗಾವಿ ವಿದ್ಯಾಕೇಂದ್ರ** ೩೬
ಬಾಗಿಲುಕೋಟೆ ಸಾರ್ವಜನಿಕ ಗ್ರಂಥಭಂಡಾರ ೭೦
'ಬಾಲಪ್ರಪಂಚ' ೩೦೪, ೩೧೬
ಬಿಬ್ಲಿಯೊಥೆಕಾ ನ್ಯಾಶನಲ್ ೩೮
ಬೆಬಿಲೋನಿಯನ್ ಗ್ರಂಥಭಂಡಾರ ೩೧
ಬೆಳಗಾವಿ, ಸಾರ್ವಜನಿಕ ಗ್ರಂಥಾಲಯ ೭೯
ಬೇಕನ್, ಫ್ರಾನ್ಸಿಸ್ ೨೪೧
ಬೊಮ್ಮರಸ ೩೧೧
ಬಂಗಾಲ ಗ್ರಂಥಾಲಯ ಸಂಘ ೬೭
ಬೆಂಗಳೂರ, ಸಾರ್ವಜನಿಕ ಗ್ರಂಥಾಲಯ ೭೦

ಬೆಂಗಳೂರ, ಸೆಂಟ್ರಲ್ ಕಾಲೇಜ ಗ್ರಂಥಾಲಯ ೭೦
ಬೈಂಡಿಂಗ್ ದಾಖಲೆ ೨೧೦
'ಬೃಹತ್ ಸಂಹಿತೆ' ೩೦೩
ಬ್ರಿಟಿಶ್ ಗ್ರಂಥಾಲಯ ಸಂಘ ೬೨
ಬ್ರಿಟಿಶ್ ಮ್ಯೂಸಿಯಂ ಗ್ರಂಥಾಲಯ ೩೮
ಬ್ರೌನ್, ಜೆ. ಡಿ. ೨೪೫
ಬ್ಲಿಸ್, ಹೆನ್ರಿ ೨೪೬

ಭಾರತೀಯ ಗ್ರಂಥಾಲಯ ಸಂಘ ೫೯
'ಭಾರದ್ವಾಜ ನಿಘಂಟು' ೩೧೫
ಭಂಡಾರಿಗ ೨೧, ೧೩೦, ೧೩೩, ೧೩೫, ೧೩೮, ೧೪೦, ೧೪೫, ೧೫೦-೫೨
ಭಂಡಾರಿಗ-ಸ್ತ್ರೀ ೧೫೪

ಮುಡಿವಾಳೇಶ್ವರ ಗಂಗಾಧರ ೩೧೩
ಮದ್ರಾಸ, ಕರ್ನಾಟಕ ಸಂಘ ೭೨
ಮದ್ರಾಸ ವಿಶ್ವವಿದ್ಯಾಲಯ ೪೭
ಮುಕ್ತದ್ವಾರ ಪದ್ಧತಿ ೧೭೦, ೧೭೫
ಮುದ್ರಣಾಲಯ ಮತ್ತು ಪುಸ್ತಕ ನೋಂದಣಿಶಾಸನ ೫೧, ೬೬, ೧೦೯
ಮುಸ್ಲಿಂ ವಣಿಕ್ ಸಂಘ ೩೦೬
ಮೈಸೂರ, ಅರಮನೆಯ ಸರಸ್ವತೀ ಭಂಡಾರ ೬೯
ಮೈಸೂರ, ಪ್ರಾಚ್ಯ ಸಂಶೋಧನ ಸಂಸ್ಥೆ ೭೦, ೩೦೭
ಮೈಸೂರ ವಿಶ್ವವಿದ್ಯಾಲಯ ೭೧
ಮೈಸೂರ, ವಿಶ್ವವಿದ್ಯಾಲಯ ನಿಘಂಟು ೩೧೫
ಮೈಸೂರ, ಸಾರ್ವಜನಿಕ ಗ್ರಂಥಭಂಡಾರ ೭೦
ಮೊಹರೆ ಜಿ. ವ್ಹಿ. ೩೧೩
ಮಂಗಳೂರ ಸಾರ್ವಜನಿಕ ಗ್ರಂಥಭಂಡಾರ ೭೧
ಮುಂಬಯಿ ಕರ್ನಾಟಕ ಸಂಘ ೭೨
ಮುಂಬಯಿ ಕೇಂದ್ರ ಗ್ರಂಥಭಂಡಾರ ೪೬
ಮುಂಬಯಿ ಗ್ರಂಥಾಲಯ ಸಂಘ ೬೭
ಮುಂಬಯಿ ಮೊಗವೀರ ವ್ಯ. ಮಂಡಳಿ ೭೨

ರಘುವೀರ ೩೦೧
ರನ್ನಕಂದ ೩೧೧
ರಾಷ್ಟ್ರೀಯ ಮಹಾಸಭೆ ೪
ರೀವ್ಸ್ ನಿಘಂಟುಗಳು ೩೧೨
ರೋಡ್ಸ್ ವಿಶ್ವವಿದ್ಯಾಲಯ ೩೩
ರೋಮದ ಸಾರ್ವಜನಿಕ ಗ್ರಂಥಾಲಯ ೩೯
ರೋಮನ್ ಗ್ರಂಥಾಲಯಗಳು ೩೩
ರಂಗನಾಥನ್ ಎಸ್. ಆರ್. ೧೫೯, ೨೩೬, ೨೪೬, ೨೬೯, ೨೯೬

ಲಿಸ್ಬನ್ ಗ್ರಂಥಾಲಯ ೧೬೨
ಲೆನಿನ್ ಗ್ರಂಥಭಂಡಾರ ೪೧
ಲೇಖಕ ಸೂಚಿ ೨೮೨
ಲೈಬ್ರರಿ ಆಫ್ ಕಾಂಗ್ರೆಸ್ ೪೦, ೨೦೫, ೨೭೪
'ಲಂಡನ್ ಡಿರೆಕ್ಟರಿ' ೩೦೫
ಲಿಂಗ ಮಂತ್ರಿ ೩೧೧
ವರ್ಗೀಕರಣ ೨೩೨, ೨೩೩
—ಕ್ರಮಕ ಸಂಖ್ಯೆ ೨೪೦
—ಗ್ರಂಥ ಸಂಖ್ಯೆ ೨೩೯
ನಿರ್ಮಿತ ಭಾಷೆ ೨೩೮
ವರ್ಗಸಂಖ್ಯೆ ೨೩೮
ವರ್ಗೀಕರಣ (ಪ್ರಕಾರ)
—ಗ್ರಂಥ ಸೂಚಕ ೨೪೧, ೨೪೬
—ತಾತ್ವಿಕ, ಉಪಯುಕ್ತ ೨೩೪
—ಲೈಬ್ರರಿ ಆಫ್ ಕಾಂಗ್ರೆಸ್ ೨೪೫
—ವಿಷಯಪ್ರಧಾನ ೨೪೫
—ವ್ಯಾಪಕ ಪದ್ಧತಿ ೨೪೩
ವಾರ್ಷಿಕಗಳು ೩೦೫
ವಿಕ್ರಮಶಿಲಾ ವಿದ್ಯಾಕೇಂದ್ರ ೩೬
ವಿಜಾಪೂರ ಸಾರ್ವಜನಿಕ ಗ್ರಂಥಾಲಯ ೭೦
ವಿಶ್ವಕೋಶ ೨೮೭, ೩೦೩
—ದೇಶೀಯ ೩೦೪

| | |
|---|---|
| ವಿಷಯ ಕೋಶ | ೩೦೩ |
| ವಿಷಯ ಸೂಚಿ | ೩೦೭ |
| 'ವೆಬ್‌ಸ್ಟರ್ಸ ನಿಘಂಟು' | ೩೦೧ |
| ವೃತ್ತಪತ್ರ | ೮೭ |
| ವ್ಹರ್ಟಿಕಲ್ ಫೈಲ್ಸ | ೩೦೮ |
| 'ವ್ಹಿಟಕಾರ್ಸ ಅಲ್ಮೆನೆಕ್' | ೩೦೫ |
| 'ಶಬ್ದಮಂಜರಿ' | ೩೧೧ |
| 'ಶಬ್ದಮಂಜರೀ ಕೋಶ' | ೩೧೩ |
| ಶಾಮರಾವ. ಕೆ. | ೩೧೮ |
| 'ಶಾಲಾ ನಿಘಂಟು' | ೩೧೪ |
| ಶಿರಹಟ್ಟಿ, ಲೋಕಮಾನ್ಯ ಗ್ರಂಥಾಲಯ | ೭೦ |
| ಶ್ರೀನಿವಾಸೈಯ್ಯಂಗಾರ್, ಎಂ. ಎನ್. | ೩೧೭ |
| ಸರಕಾರೀ ಪ್ರಕಟನೆಗಳು | ೩೦೬ |
| ಸರಸ್ವತೀ ಭಂಡಾರಕ | ೧೦೪ |
| ಸವದತ್ತಿ ಸಾರ್ವಜನಿಕ ಗ್ರಂಥಾಲಯ | ೭೦ |
| ಸಾಲೋಟಗಿ ವಿದ್ಯಾಕೇಂದ್ರ | ೩೬ |
| 'ಸಿರಿಗನ್ನಡ ಅರ್ಥಕೋಶ' | ೩೧೬ |
| ಸೂಚಿ | ೧೭೨, ೨೬೯ |
| ಸೂಚಿಯ ನಿಯಮಗಳು | ೨೮೬ |
| ಸೂಚಿಯ ಪ್ರಕಾರಗಳು | ೨೮೨-೮೩ |
| ಸೂಚೀಕರಣ | ೨೬೭ |
| ಸೂರ್ಯದೇವ | ೩೧೧ |
| ಸಂಗ್ರಹಗಳು | ೨೮೭ |
| ಸಂಘ ಸಂಸ್ಥೆಗಳ ವರದಿ | ೩೧೧ |
| ಸಂಚಾರೀ ಗ್ರಂಥಾಲಯ | ೯೫ |
| ಸಂದರ್ಭ ಸಾಹಿತ್ಯ | ೮೭, ೨೯೭-೯೯ |
| ಸಂದರ್ಭ ಸಾಹಿತ್ಯ — ಕನ್ನಡ | ೩೦೯ |
| ಸಂದರ್ಭ ಸೇವೆ | ೧೭೨, ೧೭೬, ೨೯೪-೯೬ |
| ಸಂಯುಕ್ತ ಸೂಚೀಕರಣ | ೨೭೪ |
| 'ಸಂಸ್ಕೃತ ಕವಿಚರಿತೆ' | ೩೧೭ |

'ಸ್ಟೇಟ್ಸ್‌ಮನ್ ಇಯರ್ ಬುಕ್' ೩೦೫
ಸ್ಮಿತ್ಸೋನಿಯನ್ ಇನ್‌ಸ್ಟಿಟ್ಯೂಟ್ ೪೧

'ಹತ್ತು ವರುಷಗಳು' ೨೩೭
ಹಮುರಾಬಿ ಕಲ್ಪ ೩೨
ಹಸ್ತಪ್ರತಿಗಳು ೨೮೮
ಹಿಂದೀ-ಹಿಂದೀ-ಕನ್ನಡ ರತ್ನಕೋಶ ೩೧೬

---